# ಸಾಹಿತ್ಯ ವಾರ್ಷಿಕ

# 1981



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು



ಕನ್ನಡ ಅಧ್ಯಯನ ಕೇಂದ್ರಮಾಲೆ 48

# ಸಾಹಿತ್ಯ ವಾರ್ಷಿಕ 1981

ಸಂಪಾದಕರು

ಜಿ. ಎಸ್. ಶಿವರುದ್ರಪ್ಪ

ಸಹಾಯಕ ಸಂಪಾದಕರು

ಎನ್. ವಿ. ವಿಮಲ

ಸಹಕಾರ

ಬೆಂಗಳೂರು ವಿಶ್ವವಿದ್ಯಾಲಯದ
ಗ್ರಂಥಭಂಡಾರದ ಅಧಿಕಾರ ವರ್ಗ

ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

SAHITYA VARSHIKA 1981 (Year Book of Literature, 1981) A review of Kannada books on literature published in 1981
Edited by Dr. G. S. Sivarudrappa
(Centre of Kannada Studies Series No. 48)
Published by Prasaranga, Bangalore University, Bangalore
Pp. 342+xii, 1984.

ಪ್ರಧಾನ ಸಂಪಾದಕರು :
**ಡಾ॥ ಜಿ. ಎಸ್. ಶಿವರುದ್ರಪ್ಪ**



ಪ್ರಕಾಶಕರು :
**ಕೆ. ಸಿ. ಶಿವಪ್ಪ**
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು 560 056

ಪ್ರಕಟಣ ಸಹಾಯಕ :
**ಬಿ. ಕೆ. ಕರೀಗೌಡ**

**ಬೆಲೆ : ರೂ. 11–00**

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು 560 056

# ಮೊದಲ ಮಾತು

ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗ ಶಿಕ್ಷಣದಲ್ಲಿ ಕನ್ನಡ ಮಾಧ್ಯಮದ ಅವಶ್ಯಕತೆಯನ್ನು ಪೂರೈಸುವ ಸಲುವಾಗಿ ಈಗಾಗಲೇ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಿ ಪ್ರಕಟಿಸುತ್ತಿದೆ. ಇದರ ಜೊತೆಗೆ ವಿಶ್ವವಿದ್ಯಾಲಯವು ಸಾರ್ವಜನಿಕರಿಗಾಗಿ ವರ್ಷಾ-ದ್ಯಂತವು ಏರ್ಪಡಿಸುವ ಪ್ರಚಾರೋಪನ್ಯಾಸಗಳನ್ನೂ ವಿಶೇಷೋಪನ್ಯಾಸಗಳನ್ನೂ ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿದೆ. ಈ ಪಂಕ್ತಿಗೆ ಇದೀಗ ಬೆಂಗಳೂರು ವಿಶ್ವ-ವಿದ್ಯಾಲಯದ ವಿವಿಧ ಅಧ್ಯಯನ ಶಾಖೆಗಳು ಕೈಗೊಳ್ಳುವ ವೈಯಕ್ತಿಕ ಹಾಗೂ ಸಾಮೂಹಿಕ ಸಂಶೋಧನಾತ್ಮಕ ವ್ಯವಸಾಯಕ್ಕೆ ಗ್ರಂಥರೂಪದ ಅಭಿವ್ಯಕ್ತಿಯನ್ನು ಕೊಡುವ ಕಾರ್ಯವು ಸೇರುತ್ತಿದೆ. ಇದರಿಂದಾಗಿ ವಿಶ್ವವಿದ್ಯಾಲಯದ ಒಂದೊಂದು ಅಧ್ಯಯನ ಶಾಖೆಯ ಅಧ್ಯಾಪಕರ ಸಂಶೋಧನಾತ್ಮಕ ಪ್ರವೃತ್ತಿಗೆ ತಕ್ಕಮಟ್ಟಿನ ಪ್ರೇರಣೆಯೂ ದೊರೆಯುತ್ತಿದೆ. ಈ ರೀತಿ ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಕನ್ನಡ ಅಧ್ಯಯನ ಕೇಂದ್ರ ಇಂಥ ಕೃತಿಗಳನ್ನು ಪ್ರಕಟಣೆಗೆ ಸಿದ್ಧಪಡಿಸುತ್ತಿರುವುದು ಪ್ರಶಂಸನೀಯವಾಗಿದೆ. ಪ್ರತಿಯೊಂದು ವಿಭಾಗವೂ ಹೀಗೆ ತನ್ನ ವಿಭಾಗದ ಹೆಸರಿನಲ್ಲಿ ಕೃತಿಗಳನ್ನು ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗದ ಮೂಲಕ ಹೊರತರಲು ಮುಂದೆ ಬರುವುದೆಂದು ನಂಬಿದ್ದೇನೆ.

ವಿಶ್ವವಿದ್ಯಾಲಯದ ನಿಜವಾದ ಹಿರಿಮೆ ಅದರ ಬೌದ್ಧಿಕ ಸಾಧನೆ ಹಾಗೂ ಅಭಿವ್ಯಕ್ತಿಗಳಲ್ಲಿದೆ. ಆದರೆ ಈ ಕಾರ್ಯದಲ್ಲಿ ಆತುರ ಸಲ್ಲದು ; ವಿಶ್ವವಿದ್ಯಾಲಯ ಪ್ರಕಟಿಸುವ ಕೃತಿಗಳು ಅದರ ಮತ್ತು ವಿವಿಧ ಅಧ್ಯಯನ ಭಾಗಗಳ ಘನತೆಯನ್ನು ಕಾಯ್ದುಕೊಳ್ಳುವಂತಿರಬೇಕು. ಈ ಕಾರ್ಯದಲ್ಲಿ ನಾವು ಹೊರತರುವ ಕೃತಿಗಳ ಸಂಖ್ಯೆ ಮುಖ್ಯವಲ್ಲ ; ಗಾತ್ರ ಮುಖ್ಯವಲ್ಲ ; ಗುಣ ಮುಖ್ಯ.

ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಸಂಶೋಧನ ಸಹಾಯಕರು ಸೇರಿ ಸಿದ್ಧಪಡಿಸಿರುವ ಈ 'ಸಾಹಿತ್ಯ ವಾರ್ಷಿಕ 1981' ಕನ್ನಡದಲ್ಲಿ 1981ರಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತ ವಿಮರ್ಶಾತ್ಮಕ ಸಮೀಕ್ಷೆಯಾಗಿದೆ. ವರ್ಷ ವರ್ಷವೂ ಈ ಬಗೆಯ 'ಸಾಹಿತ್ಯ ವಾರ್ಷಿಕ'ವನ್ನು ಸಿದ್ಧಗೊಳಿಸಿ ಪ್ರಕಟಿಸುವ ಈ ಯೋಜನೆ, ಕನ್ನಡ ಸಾಹಿತ್ಯ ವಿಮರ್ಶೆಯ ಬೆಳವಣಿಗೆಯಲ್ಲಿ ಮೌಲಿಕವಾದ ಪಾತ್ರವನ್ನು ವಹಿಸುವುದೆಂಬ ನಂಬಿಕೆ ಇದೆ. ಈ ಕಾರ್ಯಕ್ಕಾಗಿ ಕನ್ನಡ ಅಧ್ಯಯನ ಕೇಂದ್ರವನ್ನು ಅಭಿನಂದಿಸುತ್ತೇನೆ.

ಎಂ. ಎಸ್. ವಿಶ್ವನಾಥಯ್ಯ<br>
ಉಪಕುಲಪತಿ<br>
ಬೆಂಗಳೂರು ವಿಶ್ವವಿದ್ಯಾಲಯ

# ಮುನ್ನುಡಿ

## ಸಾಹಿತ್ಯ ವಾರ್ಷಿಕ 1981

ಇದು 1981ನೆಯ ಸಾಲಿನಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳ ಒಂದು ವಿಮರ್ಶಾತ್ಮಕ ಸಮೀಕ್ಷೆ. ಇದನ್ನು ನಡೆಯಿಸಿದವರು ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಮತ್ತು ಸಂಶೋಧನ ಸಹಾಯಕರು. ಇದೊಂದು ಸಾಮೂಹಿಕ ಪ್ರಯತ್ನ. ಈ ಪ್ರಯತ್ನ ಪ್ರತಿ ವರ್ಷವೂ ಮುಂದು ವರಿಯುತ್ತದೆ. 'ಸಾಹಿತ್ಯ ವಾರ್ಷಿಕ 1982' ಸಿದ್ಧವಾಗುತ್ತಿದೆ. ಹೀಗೆ ಪ್ರತಿ ವರ್ಷವೂ ಕನ್ನಡದ ವಿವಿಧ ಸಾಹಿತ್ಯ ಪ್ರಕಾರಗಳಲ್ಲಿ ಪ್ರಕಟವಾಗುವ ಕೃತಿಗಳ ವಿಮರ್ಶಾತ್ಮಕ ಸಮೀಕ್ಷೆಯನ್ನು ಸಿದ್ಧಪಡಿಸಿ ಪ್ರಕಟಿಸುವುದು ಈ ಯೋಜನೆಯ ಉದ್ದೇಶವಾಗಿದೆ.

ಇದು ಸುಲಭವಾದ ಕಾರ್ಯವೇನಲ್ಲ. ಬಹು ಸಂಖ್ಯೆಯಲ್ಲಿ ವರ್ಷವರ್ಷವೂ ಪ್ರಕಟವಾಗುವ ಸಾಹಿತ್ಯ ಕೃತಿಗಳ ಜಾಡು ಹಿಡಿದು ಗುರುತಿಸುವುದು, ಅನಂತರ ಅವುಗಳನ್ನೆಲ್ಲ ಒಂದೆಡೆ ಕೂಡಿಸಿಕೊಳ್ಳುವುದು ಮೊದಲನೆಯ ಕಷ್ಟ. ಅವುಗಳನ್ನು ತೀರಾ ಮುಖಾಮುಖಿ ನಿಂತು ವಿಮರ್ಶಿಸುವುದು ಎರಡನೆಯ ಕಷ್ಟ. ಕೃತಿಗಳಿಗೆ ಕೃತಿಕಾರರಿಗೆ ತೀರ ಸಮೀಪದಲ್ಲಿಯೆ ನಿಂತು ಅಂದಂದಿನ ಕೃತಿಗಳನ್ನು ಅಂದಂದೇ ವಿಮರ್ಶಿಸುತ್ತೇವೆಂದು ಹೊರಡುವುದೂ ಪ್ರಿಯವಾದ ಕಾರ್ಯವೇನಲ್ಲ. ಆದರೂ ಅಗತ್ಯವಾಗಿ ಮಾಡಬೇಕಾದ ಕಾರ್ಯ ; ತಪ್ಪೋ ಒಪ್ಪೋ ಯಾರಾದರೂ ಮಾಡಲೇ ಬೇಕಾದ ಕಾರ್ಯ. ಅದನ್ನು ನಾವು ಮಾಡಲು ಹೊರಟಿದ್ದೇವೆ. ನಾವು ಹೊರಟಿರುವ ಉದ್ದೇಶ ಒಳ್ಳೆಯದು – ಎಂಬುದೇ ನಮ್ಮ ಬೆಂಬಲಕ್ಕೆ ಇರುವ ಧೈರ್ಯ.

ಇದು ಆಯಾ ವರ್ಷ ಪ್ರಕಟವಾಗುವ ಪುಸ್ತಕಗಳನ್ನು ಪಟ್ಟಿ ಮಾಡುವ ಅಥವಾ ವಿವರಣಾತ್ಮಕ ಸೂಚಿಯನ್ನು ಸಿದ್ಧಪಡಿಸುವ ಪ್ರಾಥಮಿಕ ನೆಲೆಯಲ್ಲಿ ಪರ್ಯವಸಾನವಾಗುವ ಸ್ವರೂಪದ್ದಲ್ಲ ; ಆಗಲೇ ಹೇಳಿರುವಂತೆ ಆಯಾ ವರ್ಷದ ಸಾಹಿತ್ಯ ಕೃತಿಗಳನ್ನು ಸಮೀಕ್ಷಿಸುವ ಸ್ವರೂಪದ್ದು. ಇಲ್ಲಿರುವ ಒಂದೊಂದು ಸಾಹಿತ್ಯ ಪ್ರಕಾರದ ಪರಿಶೀಲನೆಯಲ್ಲಿ ಆಯಾ ಲೇಖಕರ ಪರಿಮಿತಿಗಳನ್ನು, ಪರಿಶೀಲನಾ ಸಾಮರ್ಥ್ಯದ ತರತಮಗಳನ್ನೂ ಓದುಗರು ಗುರುತಿಸಬಹುದು. ಆಯಾ ವಿಭಾಗದ ಸಮೀಕ್ಷೆಯಲ್ಲಿ ವ್ಯಕ್ತವಾಗಿರುವ ಅಭಿಪ್ರಾಯಗಳಿಗೆ ಆಯಾ ಲೇಖಕರು ಜವಾಬ್ದಾರರು.

ನಾಳೆ, ಕನ್ನಡದಲ್ಲಿ ಯಾವುದೇ ಒಂದು ಸಾಹಿತ್ಯ ಪ್ರಕಾರವನ್ನು ಕುರಿತು ಕೆಲಸ ಮಾಡಲು ತೊಡಗುವವರಿಗೆ ಈ 'ಸಾಹಿತ್ಯ ವಾರ್ಷಿಕ'ಗಳಿಂದಾಗುವ ಪ್ರಯೋಜನ

ಅಷ್ಟಿಷ್ಟಲ್ಲ. ಯಾವ ಯಾವ ವರ್ಷ ಕನ್ನಡದಲ್ಲಿ ಏನೇನು ಕೃತಿಗಳು ಪ್ರಕಟವಾಗಿವೆ, ಸಾಹಿತ್ಯದ ಯಾವ ಯಾವ ಪ್ರಕಾರಗಳಲ್ಲಿ ಏನೇನು ಕೆಲಸ ನಡೆದಿದೆ, ಯಾವ ದೃಷ್ಟಿ ಧೋರಣೆಗಳು ಅವುಗಳ ಹಿನ್ನೆಲೆಗಿವೆ ಎಂಬುದು ನಾಳಿನ ವಿಮರ್ಶಕರಿಗೆ ಹಾಗೂ ಸಂಶೋಧಕರಿಗೆ ಮೂಲಭೂತ ಸಾಮಗ್ರಿಯಾಗಿ ಇದರಿಂದ ಒದಗುತ್ತದೆ. ಹಾಗೆಯೇ ಪ್ರತಿಯೊಂದು ವರ್ಷದ ಸಾಹಿತ್ಯದ ಸಾಧನೆಗಳನ್ನು ತೌಲನಿಕವಾಗಿ ಅಧ್ಯಯನ ಮಾಡುವವರ ಪಾಲಿಗೆ ಮತ್ತು ಸಾಹಿತ್ಯ ಚರಿತ್ರೆಯ ಲೇಖಕನಿಗೆ ಇದೊಂದು ಋಣದ ಗಣಿಯಾಗುವುದರಲ್ಲಿ ಸಂದೇಹವಿಲ್ಲ.

ಈ ಕಾರ್ಯದಲ್ಲಿ ನಾವು ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನು ಮಾತ್ರ, ಅದರಲ್ಲೂ 1981ರಲ್ಲಿ ಮೊದಲ ಮುದ್ರಣವನ್ನು ಕಂಡ ಕೃತಿಗಳನ್ನು ಮಾತ್ರ ಪರಿಶೀಲನೆಗೆ ಎತ್ತಿಕೊಂಡಿದ್ದೇವೆ. ಕನ್ನಡದಲ್ಲಿ ಪ್ರಕಟವಾಗುವ ವೈಜ್ಞಾನಿಕ, ಮಾನವಿಕ, ಶೈಕ್ಷಣಿಕ ಇತ್ಯಾದಿ ಬೇರೆ ಬೇರೆ ವಿಷಯಗಳನ್ನು ಪರಿಗಣಿಸಿಲ್ಲ. ಅದಕ್ಕೆ ಕಾರಣ ಈ ಕಾರ್ಯದಲ್ಲಿ ತೊಡಗಿರುವ ನಮಗೆ ಸಾಹಿತ್ಯೇತರ ವಿಷಯಗಳನ್ನು ಕುರಿತು ಪರಿಶೀಲಿಸಲು ಅಥವಾ ವಿಮರ್ಶಿಸಲು ಸಾಮರ್ಥ್ಯವಾಗಲಿ, ಅಧಿಕಾರವಾಗಲಿ ಇಲ್ಲ. ಹೀಗಾಗಿ ಕೇವಲ ಸಾಹಿತ್ಯ ಸಂಬಂಧಿಯಾದ ಕೃತಿಗಳ ಪರಿಶೀಲನೆಯನ್ನು ಈ 'ಸಾಹಿತ್ಯ ವಾರ್ಷಿಕ'ದಲ್ಲಿ ಕಾಣಬಹುದು. ಹಾಗೆಯೇ ಇಲ್ಲಿ 1981ರಲ್ಲಿ ಪ್ರಕಟವಾದ ಎಲ್ಲ ಸಾಹಿತ್ಯ ಸಂಬಂಧಿಯಾದ ಕೃತಿಗಳನ್ನೂ ಗಮನಿಸಿದ್ದೇವೆ ಎಂದು ಹೇಳುವ ಧೈರ್ಯವಿಲ್ಲ. ಯಾಕೆಂದರೆ, ಆಯಾ ವರ್ಷ ಪ್ರಕಟವಾದ ಸಮಸ್ತ ಸಾಹಿತ್ಯ ಕೃತಿಗಳನ್ನೂ ಸಕಾಲದಲ್ಲಿ ಗುರುತಿಸಿ ಒಂದೆಡೆ ಕೂಡಿಸುವ ವ್ಯವಸ್ಥೆ ಸಾಧ್ಯವಾಗುತ್ತಿಲ್ಲ. ಅಲ್ಲದೆ 1981 ರಲ್ಲಿ ಪ್ರಕಟವಾದ ಎಷ್ಟೋ ಕೃತಿಗಳು 1982ರ ವರ್ಷಾಂತ್ಯದವರೆಗೂ ಕಾರಣಾಂತರದಿಂದ ಕಾಣಲು ದೊರೆಯುವುದಿಲ್ಲ. ಆದರೂ ವಿಶ್ವವಿದ್ಯಾಲಯದ ಗ್ರಂಥಭಂಡಾರದ ಅಧಿಕಾರಿಗಳು ನಮಗೆ ಒತ್ತಾಸೆಯಾಗಿ ನಿಂತು ಸಾಧ್ಯವಾದಷ್ಟುಮಟ್ಟಿಗೆ ಆಯಾ ವರ್ಷ ಪ್ರಕಟವಾಗುವ ಕೃತಿಗಳನ್ನು ದೊರಕಿಸಿಕೊಟ್ಟಿದ್ದಾರೆ. ನಮ್ಮ ಕೋರಿಕೆಯ ಮೇಲೆ 'ಪ್ರಜಾವಾಣಿ' ಪತ್ರಿಕೆಯವರು, ಪ್ರತಿವಾರದ 'ಸಾದರ ಸ್ವೀಕಾರ' ವಿಭಾಗದಲ್ಲಿ, ಸ್ವೀಕಾರವಾದ ಕೃತಿಗಳು ಪ್ರಕಟವಾದ ವರ್ಷವನ್ನು ಕಾಣಿಸಿ ಈ ಒಂದು ಯೋಜನೆಯಲ್ಲಿ ಸಹಕರಿಸಿದ್ದಾರೆ. ಕನ್ನಡದ ಪ್ರಮುಖ ಪತ್ರಿಕೆಗಳಲ್ಲಿ ಆಗಾಗ ಬಂದ ಪುಸ್ತಕ ವಿಮರ್ಶೆಯೂ ಮತ್ತು ಮೈಸೂರಿನಿಂದ ಪ್ರಕಟವಾಗುವ 'ಗ್ರಂಥಲೋಕ' ಹಾಗೂ 'ಪುಸ್ತಕ ಪುರವಣಿ'ಗಳು ಸಹ ನಮ್ಮ ಈ ಪರಿಶೀಲನೆಗೆ ನೆರವಾಗಿದೆ. ಹೀಗೆ ಲೇಖಕರ, ಪ್ರಕಾಶಕರ, ವಿಮರ್ಶಕರ, ಪತ್ರಿಕೆಗಳ ಮತ್ತು ಗ್ರಂಥ ಭಂಡಾರದ ನಿರಂತರ ಸಹಕಾರದಿಂದ ಮಾತ್ರ ಇಂಥ ಯೋಜನೆ ಯಶಸ್ವಿಯಾಗುವ ಸಾಧ್ಯತೆಗಳಿವೆ.

ನಮಗೆ ತಿಳಿದಮಟ್ಟಿಗೆ, 'ಸಾಹಿತ್ಯ ವಾರ್ಷಿಕ'ದಂಥ ಯೋಜನೆಯನ್ನು ಬಹುಶಃ ಯಾವ ಒಂದು ಭಾರತೀಯ ವಿಶ್ವವಿದ್ಯಾಲಯವೂ ಕೈಕೊಂಡಂತೆ ತೋರುವುದಿಲ್ಲ. ಕನ್ನಡ ವಿಮರ್ಶೆಯ ಬೆಳವಣಿಗೆಯಲ್ಲಿ ಕನ್ನಡ ಅಧ್ಯಯನ ಕೇಂದ್ರವು ಸಕ್ರಿಯವಾಗಿ ಪಾಲುಗೊಳ್ಳುವ ಒಂದು ಅವಕಾಶವನ್ನು ಈ ಯೋಜನೆ ಒದಗಿಸಿದೆ ಎಂದು ನಾವು ಭಾವಿಸಿದ್ದೇವೆ.

ಈ ವರ್ಷದ ಸಂಪುಟದಲ್ಲಿಯೂ ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದ ಗೊಂಡ ಕೃತಿಗಳ ಸಮೀಕ್ಷೆ, ಪ್ರತಿಯೊಂದು ವಿಷಯ ವಿಭಾಗದ ಕೊನೆಯಲ್ಲಿ ಬರುವಂತೆ ನೋಡಿಕೊಳ್ಳಲಾಗಿದೆ. 1981ರಲ್ಲಿ ಸಾಹಿತ್ಯಕ್ಕೆ ಸಂಬಂಧಪಟ್ಟ ಲೇಖನಗಳು ಎಲ್ಲೆಲ್ಲಿ ಪ್ರಕಟವಾಗಿವೆ ಎಂಬ 'ಲೇಖನ ಸೂಚಿ'ಯೊಂದು ಮುಂದುವರೆದಿದೆ.

ಇದುವರೆಗೂ ಪ್ರಕಟವಾದ 'ಸಾಹಿತ್ಯ ವಾರ್ಷಿಕ'ಗಳನ್ನು ಓದಿ, ತುಂಬ ವಿಶ್ವಾಸದಿಂದ ಹಲವರು ಉಪಯುಕ್ತ ಸಲಹೆಗಳನ್ನು ಕೊಟ್ಟಿದ್ದಾರೆ. ಸಂಪುಟದಿಂದ ಸಂಪುಟಕ್ಕೆ ಆಗುತ್ತಿರುವ ಸೂಕ್ತವಾದ ತಿದ್ದುಪಡಿ ಮತ್ತು ಮಾರ್ಪಾಡುಗಳು ಇಂಥ ಸಲಹೆಗಳ ಪರಿಣಾಮ. ಇದು ಈ ಯೋಜನೆಯಲ್ಲಿ ಪ್ರಕಟವಾಗುತ್ತಿರುವ ಹನ್ನೊಂದನೆಯ ಸಾಹಿತ್ಯ ವಾರ್ಷಿಕ.

ಇಂತಹ ಯೋಜನೆಯನ್ನು ನಿರಾತಂಕವಾಗಿ ನಡೆಸಿಕೊಂಡು ಹೋಗಲು ಎಲ್ಲ ಅನುಕೂಲಗಳನ್ನು ಕಲ್ಪಿಸಿದ ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ಈ ಪ್ರಯತ್ನದ ಜತೆ ಜತೆಯಾಗಿ ನಿಂತು ಸಹಕರಿಸುತ್ತಿರುವ ಬೆಂಗಳೂರು ವಿಶ್ವವಿದ್ಯಾಲಯದ ಗ್ರಂಥ ಭಂಡಾರದ ಅಧಿಕಾರ ವರ್ಗಕ್ಕೆ ಮತ್ತು ಶ್ರೀ ಸಿ. ಕೆ. ಪಟ್ಟಣಶೆಟ್ಟಿ ಅವರಿಗೆ, ಸಾಹಿತ್ಯದ ವಿವಿಧ ಪ್ರಕಾರಗಳನ್ನು ಪರಿಶೀಲಿಸುವ ಶ್ರಮ ತೆಗೆದುಕೊಂಡ ಕನ್ನಡ ಅಧ್ಯಯನ ಕೇಂದ್ರದ ನನ್ನ ಸಹೋದ್ಯೋಗಿ ಮಿತ್ರರಿಗೆ, ಈ ಕೃತಿಯ ಪ್ರಕಟಣೆಯ ಹೊಣೆಯನ್ನು ಉತ್ಸಾಹದಿಂದ ಹೊತ್ತ ಪ್ರಸಾರಾಂಗದ ನಿರ್ದೇಶಕರಾದ ಶ್ರೀ ಕೆ. ಸಿ. ಶಿವಪ್ಪ ಅವರಿಗೆ ನಾನು ಕೃತಜ್ಞನಾಗಿದ್ದೇನೆ.

**ಜಿ. ಎಸ್. ಶಿವರುದ್ರಪ್ಪ**
ಸಂಪಾದಕರು
ಕನ್ನಡ ಅಧ್ಯಯನ ಕೇಂದ್ರ

## ಪ್ರಕಾಶಕರ ಮಾತು

ಕನ್ನಡ ಸಾಹಿತ್ಯವನ್ನು ಅಭಿವೃದ್ಧಿಪಡಿಸುವ ಸದುದ್ದೇಶದಿಂದ ಬೆಂಗಳೂರು ವಿಶ್ವವಿದ್ಯಾಲಯದ ಪ್ರಸಾರಾಂಗವು ಪಠ್ಯ ಹಾಗೂ ಪಠ್ಯೇತರ ಹೊತ್ತಿಗೆಗಳನ್ನು ಪ್ರಕಟಿಸುವುದರ ಜೊತೆಗೆ ಇತರ ವಿಷಯದಲ್ಲಿ ಪ್ರಸಿದ್ಧರಾದ ವಿದ್ವಾಂಸರಿಂದ ಗ್ರಂಥಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಕಾರ್ಯವನ್ನು ನಿರ್ವಹಿಸುತ್ತಿದೆ. ಆಧುನಿಕ ಕನ್ನಡ ಸಾಹಿತ್ಯದ ಆವರಣಕ್ಕೆ ಅಗತ್ಯವಾದ ಹಾಗೂ ಜನಸಾಮಾನ್ಯರಿಗೆ ಜ್ಞಾನವನ್ನು ನೀಡಬಲ್ಲ ಸಾಹಿತ್ಯ, ಕಲೆ, ವಿಜ್ಞಾನ, ತತ್ವಶಾಸ್ತ್ರ, ಚರಿತ್ರೆ, ಧರ್ಮ, ನೀತಿ, ಸಂಸ್ಕೃತಿ, ಜಾನಪದ, ಸಾಮಾಜಿಕ ಹಾಗೂ ಮಾನವಿಕಶಾಸ್ತ್ರ ಮುಂತಾದ ವಿಷಯಗಳನ್ನು ಕುರಿತು ಪ್ರಸಾರಾಂಗ ಈಗಾಗಲೇ ಅನೇಕ ಹೊತ್ತಿಗೆಗಳನ್ನು ಪ್ರಕಟಿಸಿದೆ. ಬರಲಿರುವ ವರ್ಷಗಳಲ್ಲಿ ಇಂಥ ಹಲವಾರು ವಿಷಯುಗಳ ಮೇಲೆ ಮಹತ್ತರವಾದ ಹೊತ್ತಿಗೆ ಗಳನ್ನು ಪ್ರಕಟಿಸಬೇಕೆಂಬ ಉದ್ದೇಶವನ್ನು ಪ್ರಸಾರಾಂಗ ಹೊಂದಿದೆ.

ಪ್ರಸ್ತುತ ಕೃತಿ, 'ಸಾಹಿತ್ಯ ವಾರ್ಷಿಕ 1981' ಕನ್ನಡ ಅಧ್ಯಯನ ಕೇಂದ್ರದ ಅಧ್ಯಾಪಕರು ಹಾಗೂ ಸಂಶೋಧನಾ ಸಹಾಯಕರು ಸೇರಿ ಸಿದ್ಧಪಡಿಸಿರುವ ವಿಮರ್ಶಾ ಸಂಕಲನ. 1981 ರಲ್ಲಿ, ಕನ್ನಡದಲ್ಲಿ ಪ್ರಕಟವಾದ ಸಾಹಿತ್ಯ ಕೃತಿಗಳನ್ನು ಕುರಿತು ವಿಮರ್ಶಾತ್ಮಕವಾಗಿ ಸಮೀಕ್ಷಿಸಲಾದ ಕೃತಿ ಇದಾಗಿದೆ. ವರ್ಷವರ್ಷವೂ ಈ ಬಗೆಯ 'ಸಾಹಿತ್ಯವಾರ್ಷಿಕ'ವನ್ನು ಕನ್ನಡ ಅಧ್ಯಯನ ಕೇಂದ್ರವು ಸಿದ್ಧಗೊಳಿಸು ತ್ತಿರುವುದು ತುಂಬಾ ಸ್ವಾಗತಾರ್ಹವಾದ ಸಂಗತಿ. ಈ ಕೃತಿಯನ್ನು ಸಿದ್ಧಪಡಿಸಿ, ಕನ್ನಡ ಅಧ್ಯಯನ ಕೇಂದ್ರ ಮಾಲೆಗೆ, ಪ್ರಸಾರಾಂಗದ ಪ್ರಕಟಣೆಗೆ ವರ್ಷವರ್ಷವೂ ನೆರವು ನೀಡುತ್ತಾ ಬರುತ್ತಿರುವ ಡಾ॥ ಜಿ. ಎಸ್. ಶಿವರುದ್ರಪ್ಪನವರಿಗೂ, ಇನ್ನಿತರ ಲೇಖಕರಿಗೂ ವಿಶ್ವವಿದ್ಯಾಲಯದ ಪ್ರಸಾರಾಂಗದ ಪರವಾಗಿ ನನ್ನ ವಂದನೆಗಳು. ಈ ಕೃತಿಯನ್ನು ಸಕಾಲದಲ್ಲಿ ಮುದ್ರಿಸಿಕೊಟ್ಟ ವಿಶ್ವವಿದ್ಯಾಲಯದ ಮುದ್ರಣಾಲಯದ ಸಿಬ್ಬಂದಿ ಅಭಿನಂದನೆಗೆ ಪಾತ್ರರು.

ಕೆ. ಸಿ. ಶಿವಪ್ಪ
ನಿರ್ದೇಶಕ (ಕಾರ್ಯನಿರ್ವಾಹಕ)
ಪ್ರಸಾರಾಂಗ

ಪರಿವಿಡಿ

## ಕಾವ್ಯ

**ಸುಮತೀಂದ್ರನಾಡಿಗ**

ಈ ವರ್ಷದ ಕವನಸಂಗ್ರಹಗಳನ್ನು ನೋಡಿದಾಗ ಕಾವ್ಯ ಕ್ಷೇತ್ರದಲ್ಲಿ ಗಮನಾರ್ಹವಾದ ಬೆಳವಣಿಗೆಯೇನೂ ಆಗಿಲ್ಲವೆನ್ನುವುದು ಸ್ಪಷ್ಟವಾಗಿದೆ. ಕಾಳೇಗೌಡ ನಾಗವಾರ, ಟಿ. ಜಿ. ಭಟ್ಟ, ಮನಜ, ಡಿ. ವಿ. ರಾಜಶೇಖರ್, ಸ. ಉಷಾ, ಮುಂತಾದ ಕೆಲವು ಹೊಸ ಕವಿಗಳು ಕಾಣಿಸಿಕೊಂಡಿದ್ದಾರೆ. ಜಿ. ಎಸ್. ಶಿವರುದ್ರಪ್ಪ, ಲಕ್ಷ್ಮಣರಾವ್, ಎಚ್. ಎಸ್. ವೆಂಕಟೇಶಮೂರ್ತಿ, ಚೆನ್ನಣ್ಣ ವಾಲೀಕಾರರು ತಮ್ಮ ತಮ್ಮ ಕಾವ್ಯದ ಎತ್ತರಗಳನ್ನು ಉಳಿಸಿಕೊಂಡಿದ್ದಾರೆ.

ನವ್ಯಕಾವ್ಯದ ನಂತರ ಪ್ರಚಲಿತವಾದ ಗದ್ಯಶೈಲಿಯಲ್ಲಿ ಬಹಳಷ್ಟು ಕವಿಗಳು ಬರೆಯುತ್ತಿದ್ದಾರೆ. ಒಮ್ಮೊಮ್ಮೆ ಸುಂದರವಾದ ಭಾವಗೀತೆಯ ಕಡೆಗೆ ಜಿ. ಎಸ್. ಶಿವರುದ್ರಪ್ಪ ಮತ್ತು ದೊಡ್ಡರಂಗೇಗೌಡರು ತಿರುಗಿದ್ದಾರೆ. ಸಮಕಾಲೀನತೆಯಿಲ್ಲದಿದ್ದರೂ ಎಚ್. ಎಸ್. ವೆಂಕಟೇಶಮೂರ್ತಿಯವರು ಭಾವಗೀತೆಯ ರೀತಿಗಳನ್ನು ಬಿಟ್ಟುಕೊಟ್ಟಿಲ್ಲ. ಸಾಮಾಜಿಕ ವಿಮರ್ಶೆ ಶಿವರುದ್ರಪ್ಪನವರ ಕವಿತೆಗಳಲ್ಲೂ ಮನಜ ಮತ್ತು ವಾಲೀಕಾರರ ಕವಿತೆಗಳಲ್ಲೂ ಕಾಣಿಸಿಕೊಂಡಿದೆ. ಆದರೆ ಒಂದು ರೀತಿಯ ಫ್ಯಾಶನ್ ಆಗಿರುವ ಸಾಮಾಜಿಕ ವಿಮರ್ಶೆಗೆ ಅನೇಕರು ಕೈ ಹಾಕಿದ್ದಾರೆ. ಏನೂ ಅರ್ಥವಾಗಬಾರದೆನ್ನುವ ಹಾಗೆ ಕೆಲವು ಕವನ ಸಂಗ್ರಹಗಳಿವೆ. ಕಾವ್ಯರಚನೆ ಬಹಳ ಸುಲಭವಾಗಿ, ಸರಳವಾಗಿ, ನೀರಸ ಗದ್ಯದ ಮಟ್ಟಕ್ಕೆ ಇಳಿದಿರುವುದಕ್ಕೆ ಈ ಅಸ್ಪಷ್ಟ ಕವಿತೆಗಳು ಒಂದು ರೀತಿಯ ಪ್ರತಿಕ್ರಿಯೆ ಎನ್ನುವ ವಾದವೂ ಇದೆ.

ಒಟ್ಟಿನಲ್ಲಿ ಈಗ ಕಾವ್ಯದಲ್ಲಿ ಮಹತ್ತರವಾದ ಬದಲಾವಣೆಯೊಂದು ಬರಬೇಕಾಗಿದೆ. ವ್ಯಂಗ್ಯದಿಂದ ಮತ್ತು ನೀರಸ ಗದ್ಯದ ಲಯಗಳಿಂದ ದೂರ ಸರಿದು, ಮನುಷ್ಯ ಮನುಷ್ಯನನ್ನು ಹತ್ತಿರ ತರುವ ಪ್ರೀತಿಯ ಭಾವನೆಯನ್ನು ವ್ಯಕ್ತಪಡಿಸುವ ಭಾವಗೀತೆಯ ಪ್ರಕಾರ ಮತ್ತೊಮ್ಮೆ ಕಾಣಿಸಿಕೊಳ್ಳಬಹುದು ಎನಿಸುತ್ತದೆ. ಅನುಭವಗಳಿಗೆ ರೂಪಕೊಡುವ ಕಲೆ, ಕಾಣಿಸಿಕೊಳ್ಳಬೇಕಾಗಿದೆ. ಬರೀ ಹೇಳಿಕೆಗಳ ಬದಲು ರೂಪಕ ಮತ್ತು ಸಂಕೇತಗಳನ್ನು ಸೃಷ್ಟಿಸುವ ಪ್ರತಿಭೆ ಪ್ರತ್ಯಕ್ಷವಾಗಬೇಕಾಗಿದೆ.

ಈ ವರ್ಷ ನಲವತ್ತನಾಲ್ಕು ಕವನ ಸಂಕಲನಗಳಿವೆ. ಇವುಗಳಲ್ಲಿ ಮೂರು ಆ್ಯಂಥಾಲಜಿಗಳು. ಕುವೆಂಪು ಪು.ತಿ.ನ., ವಿ.ಸೀ., ಜಿ. ಎಸ್. ಶಿವರುದ್ರಪ್ಪನವರ ಕವನ ಸಂಗ್ರಹಗಳು ಜಿ. ಎಸ್. ಸಿದ್ಧಲಿಂಗಯ್ಯನವರ ಆಯ್ದ ಕವಿತೆಗಳು, ಬಿ. ಆರ್. ಲಕ್ಷ್ಮಣರಾವ್ ದೊಡ್ಡರಂಗೇಗೌಡ, ದೇಶಪಾಂಡೆ, ಸುಬ್ಬರಾಯ, ಗುಂಡ್ಮಿ ಚಂದ್ರಶೇಖರ ಐತಾಳ, ಚೆನ್ನಣ್ಣ ವಾಲೀಕಾರ ಮತ್ತು ಎಚ್. ಎಸ್. ವೆಂಕಟೇಶಮೂರ್ತಿಯವರ

ಕವನ ಸಂಗ್ರಹಗಳೂ ಈ ವರ್ಷ ಪ್ರಕಟವಾಗಿವೆ. ಇದಲ್ಲದೆ ಇತ್ತೀಚಿನವರಾದ ಡಿ. ವಿ. ರಾಜಶೇಖರ್ ಭಾಗ್ಯ, ಉಷಾ, ಗಂಗಾಧರ ಭಟ್ಟ ಮೊದಲಾದವರ ಕವನ ಸಂಗ್ರಹಗಳೂ ಇರುವುದರಿಂದ ಈ ವರ್ಷದ ಕಾವ್ಯದ ಮೊತ್ತ ಗಮನಾರ್ಹವಾಗಿದೆ.

ಕೊನೆಯುತೆನೆ ಮತ್ತು ವಿಶ್ವಮಾನವ ಸಂದೇಶ : ಕುವೆಂಪು

ಮೊದಲ ಭಾಗದಲ್ಲಿ ಆರು ಕವಿತೆಗಳಿವೆ. ಎರಡನೆ ಭಾಗದಲ್ಲಿ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳಲ್ಲಿ 'ವಿಶ್ವಮಾನವ ಸಂದೇಶ'ವಿದೆ. ಕವಿಯುಮಗಳ ಪ್ರಾರ್ಥನೆಯ ಪ್ರಭಾವದಿಂದ. ಸ್ಟುಡಿಬೇಕರ್ ಕಾರಿನಲ್ಲಿ ಹೋಗುತ್ತಿದ್ದ, ವೈಸ್‌ಛಾನ್ಸಲರ್ ಆಗಿದ್ದ ಕವಿಯ ಜೀವಕ್ಕೆ 1956ನೆ ಇಸವಿಯಲ್ಲಿ ರಕ್ಷಣೆ ದೊರಕಿದ್ದು ಮೊದಲ ಕವಿತೆಯ ವಸ್ತು. 1967ನೆ ಇಸವಿಯಲ್ಲಿ ಕೃಷಿ ಕ್ಷೇತ್ರವೊಂದಕ್ಕೆ ಕವಿಗಳು ಭೇಟಿಯಿತ್ತಾಗ ಅಲ್ಲಿನ ಸಮೃದ್ಧವಾದ ಪೈರನ್ನು ಕಂಡು, ನೇಗಿಲಯೋಗಿಯನ್ನು ಮೆಚ್ಚಿಕೊಂಡದ್ದು ಎರಡನೆ ಕವಿತೆಯ ವಿಷಯ. ರಾಮಾಯಣ ದರ್ಶನದ ಶೈಲಿಯನ್ನು ನೆನಪಿಗೆ ತರುವ ಮೂರನೆ ಕವಿತೆ ಅರವಿಂದರನ್ನು ಕುರಿತದ್ದು. ಬಸವೇಶ್ವರರ ಸಾಧನೆಯನ್ನು ಜ್ಞಾಪಿಸಿ ಕೊಳ್ಳುವುದು ನಾಲ್ಕನೆ ಕವಿತೆಯ ವಸ್ತು. ಐದನೆಯ ಕವಿತೆ 1927ರಲ್ಲಿ ಬರೆದ ಒಂದು ಕಥನ ಕವನ. ಒಂದು ನಾಯಿ ಮತ್ತು ಅದರ ಒಡೆಯನ ಪರಸ್ಪರ ಪ್ರೀತಿ ಯನ್ನು ಈ ಕವಿತೆ ನಿರೂಪಿಸುತ್ತದೆ. ಆರನೆಯ ಪದ್ಯ ವಾಲ್ಟ್‌ವಿಟ್‌ಮನ್ ಪ್ರಾಣಿ ಗಳನ್ನು ಮೆಚ್ಚಿ ಆಡಿದ ಮಾತುಗಳ ಅನುವಾದ. ಈ ಕವಿತೆಗಳಾದ ಮೇಲೆ ಕುವೆಂಪು ಅವರ ವಿಶ್ವಮಾನವ ಸಂದೇಶವಿದೆ. ಜಾತಿಗಳು ಇರಲೇಕೂಡದೆನ್ನುವುದು ಇಲ್ಲಿನ ಒಟ್ಟು ಸಾರಾಂಶ. 28 ಪುಟಗಳ ಈ ಪುಟ್ಟ ಪುಸ್ತಕಕ್ಕೆ 5ರೂ. ಬೆಲೆಯಿಟ್ಟಿರುವುದು ಜಾಸ್ತಿ ಎನ್ನಿಸುತ್ತದೆ.

ಹಳೆಯಬೇರು ಹೊಸಚಿಗುರು ; ಪು. ತಿ. ನ.

ಈ ಸಂಕಲನದಲ್ಲಿ ಮೂವತ್ತೊಂಬತ್ತು ಕವಿತೆಗಳಿವೆ. ಕಳೆದ ಹದಿನಾರು ವರ್ಷಗಳಲ್ಲಿ ಆಗಾಗ ರಚಿಸಿದ ಕವನಗಳು ಇಲ್ಲಿ ಒಟ್ಟಾಗಿ ಸಿಗುತ್ತವೆ. ಪು.ತಿ.ನ. ಅವರಿಗೆ ಸಹಜವಾದ ಗೀತಗಾರಿಕೆ ಇಲ್ಲಿಯ ಪ್ರಮುಖವಾದ ಗುಣ. ಪ್ರತಿಯೊಂದು ಶಬ್ದದ ನಾದವನ್ನು ಸವಿಯುತ್ತ, ಆ ನಾದದಲ್ಲಿ ಕರಗಿ ಹೋಗುವುದನ್ನು ಈ ಕವಿತೆಗಳು ನಿರೀಕ್ಷಿಸುತ್ತವೆ.

ಹಗಲು ಇರುಳು : ವಿ.ಸೀ.

ಈ ಸಂಗ್ರಹದಲ್ಲಿ ನಾಲ್ಕಾರು ಅನುವಾದಗಳೂ ಸೇರಿ ಸುಮಾರು ಐವತ್ತು ಕವನ ಗಳಿವೆ. ಇವುಗಳಲ್ಲಿ ಬದುಕಿನ ಅರ್ಥವೇನು ಎನ್ನುವ ಪ್ರಶ್ನೆಗೆ ಉತ್ತರವನ್ನು ಹುಡುಕುವುದು ಪ್ರಧಾನವಾಗಿ ಕಾಣಿಸುತ್ತದೆ :

ನಾವೇನು ಸೇರಿಸಿದೆವೊ ಅದು ಮಾತ್ರ ನಾವು
ಹಣ್ಣಾಗಿ ತಿನಿಸಿದರಾರ್ಗನ್ನ ಅದು ನಮ್ಮ ನಮ್ಮ ಕೊಡುಗೆ
ಬಿಟ್ಟು ಹೋಗುವುದು ನಮ್ಮ ಕೆಡುಕು ಒಳಿತು (ಪು. 10)

ಬದುಕಿನಲಿ ಯಾವುದು ಬಹು ಜನಕೆ ಒಳಿತೊ
ನಡೆಯೆ ನಾಚಿಕೆ ತಾರದ ನಡೆಯೋ
ಹತ್ತು ಜೀವವ ಪೋಷಿಸುವ ಬದುಕು ನಿನ್ನದಾಗೆ,
ನಡಸು ಆ ಬದುಕ, ಅದು ಕೃತಾರ್ಥತೆ (ಪುಟ. 27)

ಲೋಕದ ಕೆಳೆ, ವಿಶ್ವಾಸಗಳಿಗಿಂತ ಬೇರೆ
ಏನಿದೆ? ಅವು ಕಳೆಯೆ ಶೂನ್ಯವೀ ನೆಲನು
ಬೇರೆ ಯಾವುದು ಭಾಗ್ಯ ಲೋಕದಲ್ಲಿ ?
ಕಡು ಬಡತನದ ಬೇಗೆ—ಅಂಥುದಿಲ್ಲದಾಗ (ಪುಟ 74)

ಇಂಥ ಕವಿತೆಗಳೇ ಅಲ್ಲದೆ ಇಂಗ್ಲೆಂಡಿನ ಹಿರಿಮೆಯನ್ನು ಚಿತ್ರಿಸುವ "ಒಂದೆರಡು ನೋಟ" ಎನ್ನುವ ಕವಿತೆ ನಮ್ಮ ಗಮನವನ್ನು ಸೆಳೆಯುತ್ತದೆ. ಈ ಕವಿತೆಗಳನ್ನು ಓದುವಾಗ "ಒಂದೊಂದು ವಿಷಯದಲ್ಲೂ ಅರ್ಥದ–ಭಾವದ ನಡೆಯನ್ನು ಅನುಸರಿಸಿ ನಡೆದರೆ, ಅಲ್ಲಿದ್ದ ಲಯವನ್ನು ಗ್ರಹಿಸಿ ಅದಕ್ಕೆ ಬೆಲೆಕೊಟ್ಟರೆ ಕೃತಿಯ ಕೃತಾರ್ಥತೆ ಶಕ್ಯವಾದೀತು" ಎನ್ನುವ ಮಾತನ್ನು ಗಮನದಲ್ಲಿಟ್ಟುಕೊಂಡರೆ ನಾವು ಈ ಕವಿತೆಗಳ 'ನುಡಿತಗಳನ್ನೂ ಅಭಿಲಷಿತಗಳನ್ನೂ ಆಕಾಂಕ್ಷೆಗಳನ್ನೂ' ಅರಿಯಬಹುದು.

ಕಾಡಿನ ಕತ್ತಲಲ್ಲಿ : ಜಿ. ಎಸ್. ಶಿವರುದ್ರಪ್ಪ

ಈ ಸಂಕಲನದಲ್ಲಿ ಮೂವತ್ತೈದು ಕವಿತೆಗಳಿವೆ. ಸಮಕಾಲೀನತೆ ಇಲ್ಲಿನ ಕಾವ್ಯದ ನುಡಿ ಗಟ್ಟಿನಲ್ಲಿ, ವಸ್ತುವಿನ ಆಯ್ಕೆಯಲ್ಲಿ, ಧಾಟಿ ಧೋರಣೆಗಳಲ್ಲಿ ಎದ್ದು ಕಾಣುತ್ತದೆ. ಈ ಸಂಗ್ರಹದ 'ಸ್ವಗತ', 'ಕವಿಮಾತು', 'ಬಣ್ಣಗಳನ್ನು ಕುರಿತು', 'ನನ್ನ ಮಾತು', 'ಶ್ರೀ ಕುವೆಂಪು ಅವರಿಗೆ', 'ನಾನೇಕೆ ಬರೆಯುತ್ತೇನೆ' ಎನ್ನುವ ಕವಿತೆಗಳಲ್ಲಿ ಕಾವ್ಯದ ಸ್ವರೂಪದ ಬಗ್ಗೆ, ಉದ್ದೇಶದ ಬಗ್ಗೆ, ಗಟ್ಟಿಯಾದ ಮಾತುಗಳಿವೆ :

ಹಿಂದೆ ಬರೆದದ್ದೆನ್ನೆಲ್ಲ
ಈಗ ತೆನೆಬಿಡಿಸಿ, ಕೇರಿ, ತೂರಿ ನೋಡಿದರೆ
ಕಾಳಿಗಿಂತ ಜಳ್ಳೇ ಹೆಚ್ಚೇನೋ ಅನ್ನಿಸುತ್ತದೆ (ಸ್ವಗತ)

ನನ್ನ ಬಣ್ಣವನ್ನು ಕುರಿತು ನಾನು ಬಿಚ್ಚುವ ಹಾಗೆ
ಬಿಚ್ಚಲಾರಿರಿ ನೀವು, ನನಗೆ ಗೊತ್ತು :
ನಾನೇನಾದರೂ ನಿಮ್ಮ ಬಣ್ಣಗಳ ಬಗ್ಗೆ
ಮಾತಾಡಿದರೆ, ನಮ್ಮ ನಿಮ್ಮ ನಡುವೆ
ದಟ್ಟಡವಿ ಎದ್ದು
ಅಜಗರ ಮೌನ ! (ಬಣ್ಣಗಳನ್ನು ಕುರಿತು)

ನೀವು ಕಲಿಸಿದಿರಿ ನನಗೆ ತಲೆ ಎತ್ತಿ ನಿಲ್ಲುವುದನ್ನು,
ಕಿರುಕುಳಗಳಿಗೆ ಜಗ್ಗದೆ ನಿರ್ಭಯವಾಗಿ ನಡೆವುದನ್ನು,
ಸದ್ದಿರದೆ ಬದುಕುವುದನ್ನು (ಶ್ರೀ ಕುವೆಂಪು ಅವರಿಗೆ)

ನಾನು ಬರೆಯುತ್ತೇನೆ
ನನ್ನನ್ನು ನಾನು ಕಂಡುಕೊಳ್ಳುವುದಕ್ಕೆ
ಮತ್ತೆ ಕಾಣಿಸುವುದಕ್ಕೆ ;
ನಿಮ್ಮೊಂದಿಗೆ ಸಂವಾದಿಸುವುದಕ್ಕೆ (ನಾನೇಕೆ ಬರೆಯುತ್ತೇನೆ)

ಈ ಮಾತುಗಳಲ್ಲಿ ಕಾಣಿಸುವ ರೀತಿಯಲ್ಲಿ ಕಾವ್ಯರಚನೆಗೆ ತೊಡಗುವ ಶಿವರುದ್ರಪ್ಪನವರು ತಮ್ಮ ಸುತ್ತಲಿನವರ ಬಣ್ಣಗಳ ಬಗ್ಗೆ ಮಾತಾಡುವುದನ್ನು 'ವಿದ್ಯಾರ್ಥಿಗಳು; ಒಂದು ಮುಖ' 'ಕೆಲವರಿಗೆ' 'ಬಾಯಲ್ಲಿ' 'ಈ ಕೆಲವರಿಗೆ', 'ಈ ದೇಶದಲ್ಲಿ' 'ಏನು ವ್ಯತ್ಯಾಸ?' 'ಶ್ರೀಪಾದರಿಗೆ' 'ಚರಂಡಿಗಳು ಮತ್ತು ನಾಯಿಗಳು' 'ದುಃಸ್ವಪ್ನ' 'ಸುದ್ದಿಜೀವಿಗಳು'—ಇಂತಹ ಕವಿತೆಗಳಲ್ಲಿ ಕಾಣುತ್ತೇವೆ. ಈ ಸ್ವವಿಮರ್ಶೆ, ಸಾಮಾಜಿಕ ವಿಮರ್ಶೆಯ ನಡುವೆ 'ವಸಂತ ಮೂಡುವುದೆಂದಿಗೆ?' ಎಂದು ಈ ಕವಿ ಕಾಯುತ್ತಾರೆ, ನೋಯುತ್ತಾರೆ. ಹಾಗೆಯೇ ನಿತ್ಯದ ಸಣ್ಣಪುಟ್ಟ ಘಟನೆಗಳಲ್ಲಿ ಜೀವನ ಸಂತೋಷದ ಸಾಧ್ಯತೆಗಳನ್ನೂ ಕಾಣುತ್ತಾರೆ :

ನಿನ್ನ ನಗು
ಮುಂಜಾನೆ ಆಕಾಶಕ್ಕೆ ರಂಗೋಲಿ ಬರೆಯುವುದು,
ಬಿಸಿಲ ಕೋಲಾಗಿಳಿದು, ಕಗ್ಗಾಡು ಮಧ್ಯೆ
ಮಲಗಿದ ಕೊಳದ ತೆರೆಯ ಮೇಲಾಡುವುದು,
ಮೊಗ್ಗಿನ ಕಣ್ಣು ತೆರೆದು ಮರಮರದ ತೊಟ್ಟಿಲಲಿ
ಮಲಗಿದ ಹಕ್ಕಿಗೊರಳನು ತಟ್ಟಿ, ಬೆಟ್ಟದ ಮುಡಿಗೆ
ಬಂಗಾರವಾಗುವುದು

ಹೀಗೆ ಬದುಕಿನ ವಿವಿಧ ಮುಖಗಳನ್ನು ನೋಡುವ ಈ ಕವಿಗೆ 'ಕಾಡಿನ ಕತ್ತಲಲ್ಲಿ' ಎನ್ನುವ ಕವಿತೆಯಲ್ಲಿ ಕಂಡು ಬರುವ ಅನುಭವ, ಕರುಣೆ, ಸಹಾನುಭೂತಿ, ಮತ್ತು ದಿಗ್ಭ್ರಮೆಯನ್ನು ಹುಟ್ಟಿಸುತ್ತ, ತನ್ನ ಅರ್ಥವನ್ನು ಒಗಟಾಗಿ ಉಳಿಸಿಕೊಳ್ಳುವ ಸಾಧ್ಯತೆಯನ್ನೂ ಪಡೆಯುತ್ತದೆ.

ಈ ಸಂಗ್ರಹದ ಮುನ್ನುಡಿಯಲ್ಲಿ ನೀಷೆ, ವ್ಯಾಗ್ನರ್, ಬೊಹೀಮಿಯನ್, ಪ್ಯಾಂಥೀಸ್ಟ್, ಹತ್ತೊಂಬತ್ತನೆ ಶತಮಾನದ ಯೂರೋಪಿಯನ್ ಸೌಂದರ್ಯಾಧಕರು, ಮೆಟಫಿಸಿಕಲ್ ಕಾವ್ಯ, ಟ್ರಾಜಿಕ್ ಅನುಭವ, ಹೆಗೆಲ್, ಹರ್ಬರ್ಟ್ ಮಾರ್ಕೂಸ್

ಬೋದಿಲೇರ್, ರಿಂಬೋ, ಬ್ರೆಕ್ಟ್, ಪ್ರೊಮಿಥ್ಯೂಸ್ ಮೊದಲಾದ ಹೆಸರುಗಗಳಿಗೂ ಜಿಎಸ್ಸೆಸ್ ಅವರ ಕಾವ್ಯಕ್ಕೂ ನೇರವಾದ 'ಸಂಬಂಧವಿಲ್ಲ'. ಹಾಗಿದ್ದೂ ಕೂಡ ಡಿ. ಆರ್. ನಾಗರಾಜರ ಈ ಮುನ್ನುಡಿಯಲ್ಲಿ ಜಿಎಸ್ಸೆಸ್ ಅವರ ಕಾವ್ಯ ಮಾರ್ಗವನ್ನು ವಿಶ್ಲೇಷಿಸುತ್ತ, ಅದರ ಮುಖ್ಯ ಲಕ್ಷಣಗಳನ್ನು ಗುರುತಿಸುವ ಪ್ರಯತ್ನವೂ ಇದೆ.

ಲಿಲ್ಲಿ ಪುಟ್ಟಿಯ ಹಂಬಲ : ಬಿ. ಆರ್. ಲಕ್ಷಣರಾವ್

ಈ ಸಂಗ್ರಹದ ನಲವತ್ತಮೂರು ಕವಿತೆಗಳಲ್ಲಿ, ಎಂಟು ಅನುವಾದಗಳು ಮತ್ತು ಹದಿಮೂರು ಚುಟಕಗಳು ಸೇರಿಕೊಂಡಿವೆ. ತುಂಟತನವನ್ನು, ಹುಡುಗತನವನ್ನು ಖುಷಿಯಾಗುವಂತೆ ಪದ್ಯಮಾಡುವ ಲಕ್ಷ್ಮಣರಾವ್ ಬೇರೆ ರೀತಿಯಲ್ಲಿ ಬೆಳೆಯುತ್ತಿರುವ ಲಕ್ಷಣಗಳನ್ನು ಈ ಸಂಗ್ರಹದಲ್ಲಿ ಕಾಣುತ್ತೇವೆ. ಈ ಬೆಳವಣಿಗೆ ಒಂದು ರೀತಿಯಲ್ಲಿ ಅಡಿಗರ ಕಾವ್ಯದ ಜೊತೆಯಲ್ಲಿ ಲಕ್ಷ್ಮಣರಾವ್ ನಡೆಸುತ್ತಿರುವ ಸಂವಾದದಲ್ಲಿದೆ. 'ವಾ-ನರಗೀತೆ' ಎನ್ನುವ ಕವಿತೆಯಲ್ಲಿ ಕೋತಿಗಳ ಬಗ್ಗೆ ಲಕ್ಷ್ಮಣರಾವ್ ಬರೆಯುವಾಗ ಅಡಿಗರ ವರ್ಧಮಾನ ಕವಿತೆಯಲ್ಲಿರುವ ಕೋತಿ ಅವರ ಮನಸ್ಸಿನಲ್ಲಿ ಉದ್ದಕ್ಕೂ ಇಣುಕಿ ಹಾಕುತ್ತದೆ ಎನ್ನಿಸುತ್ತದೆ :

ಎದೆ ಬಗೆದು ತೋರಿಸಿತು, ಅಲ್ಲಿ ಕಂಡದ್ದೇನು
ಪುರುಷೋತ್ತಮನ ರೂಪರೇಖೆ

ಈ ಸಾಲುಗಳಲ್ಲಿ ಅಡಿಗರ 'ಶ್ರೀರಾಮನವಮಿಯ ದಿವಸ' ಥಟ್ಟನೆ ನೆನಪಾಗುವುದು ಕವಿಯ ಉದ್ದೇಶವೂ ಹೌದು. ಒಂದು ರೀತಿಯಲ್ಲಿ ರಾಮ ಮತ್ತು ಹನುಮಂತನ ಸಂಬಂಧವನ್ನು ಕಾವ್ಯ ಸಂಬಂಧಗಳಿಗೆ ಸಮೀಕರಿಸುವ ಲಕ್ಷ್ಮಣರಾಯರು

ವಿಕಾಸದ ನಿಚ್ಚಣಿಕೆಗೆ ಇನ್ನೆಷ್ಟೋ ಇವೆ ಮೆಟ್ಟಿಲು,
ನರನಾಗಿ ನಿಂತರೆ ಸಾಕೆ ?

ರಾಮ ಪ್ರಜ್ಞೆ ತಪ್ಪಿದ್ದಾನೆ, ಮತ್ತೆ ಸಂಜೀವಿನಿಗೆ
ಕಪಿಯನ್ನೇ ಕಾದು ಕೂಡಬೇಕೆ ?

ಎನ್ನುವಲ್ಲಿ ಕಾವ್ಯಕ್ಕೆ ಹೊಸತನದ ಸಂಜೀವಿನಿಯನ್ನು ತರುವುದನ್ನು ಯೋಚಿಸುತ್ತಿದ್ದಾರೆ ಅನಿಸುತ್ತದೆ.

ಎರಡು ತಲೆ ಮಾರುಗಳ ಸಂಬಂಧವನ್ನು ಕುರಿತ ಈ ಕವಿಯ ವಿಚಾರ ಮಥನ 'ಸಂವಾದ' ಎನ್ನುವ ಕವಿತೆಯಲ್ಲೂ ಕಾಣಿಸಿಕೊಳ್ಳುತ್ತದೆ. ಈ ಕವಿತೆಯಲ್ಲಿ ಬರುವ ಹರ್ಕ್ಯುಲಿಸ್ ಮತ್ತು ಅಟ್ಲಾಸರು ಲಕ್ಷ್ಮಣರಾಯರು ಬಹಳ ಹಿಂದೆ ಬರೆದ 'ಸಖೀಗೀತ' ಎನ್ನುವ ಕವಿತೆಯಲ್ಲೂ ಕಾಣಿಸಿಕೊಂಡಿದ್ದರು. ಅಲ್ಲಿ ತಂದೆ ಮಗನ ಸಂಬಂಧವನ್ನು

ಅಟ್ಲಾಸ್ ಮತ್ತು ಹರ್ಕ್ಯುಲಿಸ್‌ಲಿಸರ ಸಂಬಂಧಕ್ಕೆ ಸಮೀಕರಿಸಿದ್ದರೆ ಇಲ್ಲಿ ಕಾವ್ಯ ಕ್ಷೇತ್ರದ ಎರಡು ತಲೆಮಾರುಗಳ ಸಂಬಂಧಕ್ಕೆ ಸಮೀಕರಿಸುತ್ತಿರಬಹುದು ಅನ್ನಿಸುತ್ತದೆ.

'ವಾ-ನರಗೀತೆ' ಮತ್ತು 'ಸಂವಾದ' ಈ ಸಂಗ್ರಹದಲ್ಲಿ ಮುಖ್ಯವಾದ ಕವಿತೆಗಳು. ಎರಡು ತಲೆಮಾರುಗಳ ಸಂಬಂಧವನ್ನು ಮುಖ್ಯವಾಗಿಟ್ಟುಕೊಂಡಿರುವ ಈ ಕವಿತೆಗಳಲ್ಲಿ ನಿರ್ದಿಷ್ಟವಾದ ಯಾವ ದಾರಿಯನ್ನೂ ಕಂಡುಕೊಳ್ಳದಿದ್ದರೂ. ಅದಕ್ಕಾಗಿ ತಡಕಾಡುತ್ತಿರುವ ಲಕ್ಷ್ಮಣರಾಯರಿಂದ ಉತ್ತಮ ಕವಿತೆಗಳು ಬರುತ್ತಾವೆಂದು ನಿರೀಕ್ಷಿಸಬಹುದು.

ಮೌನಸ್ಪಂದನ : ದೊಡ್ಡರಂಗೇಗೌಡ.

ಅರವತ್ತೆರಡು ಕವನಗಳ ಈ ಸಂಕಲನದಲ್ಲಿ ದೊಡ್ಡ ರಂಗೇಗೌಡರು ತಮ್ಮ ವಿವಿಧ ಮನಸ್ಥಿತಿಗಳನ್ನು ಹಿಡಿದಿಟ್ಟಿದ್ದಾರೆ. ತಾವು ಕಂಡ ಪ್ರಕೃತಿಯ ದೃಶ್ಯಗಳು, ಬಾಲ್ಯದ ನೆನಪುಗಳು, ಸುತ್ತಲೂ ಇರುವವರ ಮುಖವಾಡಗಳು, ಪ್ರೇಮದ ಸವಾಲುಗಳು ಹೀಗೆ ಅನೇಕ ವಿಷಯಗಳನ್ನು ಕುರಿತು ದೊಡ್ಡ ರಂಗೇಗೌಡರು ಬರೆಯುತ್ತಾರೆ. ಒಂದು ಕವಿತೆಯಲ್ಲಿ ಅವರ ಲಯಗಳು ಗೀತದ ಕಡೆಗೆ ವಾಲಿದರೆ ಇನ್ನೊಂದು ಕವಿತೆಯಲ್ಲಿ ಆಡುವ ಮಾತಿನ ಕಡೆಗೆ ಜಗ್ಗುತ್ತವೆ. ಅವರ ಮುನ್ನುಡಿಯಲ್ಲಿ "ನಿಜ ಹೇಳಬೇಕೆಂದರೆ ಶಿಸ್ತು ಕವಿಗೆ ಯಾವತ್ತೂ ಒಳ್ಳೆಯದು...ನಿಸರ್ಗದಲ್ಲಿ ಇರುವ ಶಿಸ್ತು ನಮ್ಮ ಬರವಣಿಗೆಯಲ್ಲೂ ಮೂಡಿದರೆ—ಕವಿತೆಗೆ ಲಯ. ತಾನೇ ತಾನಾಗಿ ಪ್ರಾಪ್ತವಾಗುತ್ತದೆ" ಎಂದು ಹೇಳುತ್ತಾರೆ. ಶಿಸ್ತಿನ ಅರಿವು ಇವರ ಎಲ್ಲ ಕವಿತೆಗಳಲ್ಲೂ ಕಾಣುತ್ತವೆ. 'ಭಾರತೀಯ ತರುಣರು' 'ಮೂವತ್ತರ ಮಜಲು, 'ಇವರು ನಮ್ಮವರು' ಮೊದಲಾದ ಕವಿತೆಗಳು ಈ ಸಂಗ್ರಹದಲ್ಲಿ ಎದ್ದು ನಿಲ್ಲುತ್ತವೆ ತಮ್ಮ ಅನುಭವಗಳನ್ನು ಬೆಲೆ ಕಟ್ಟುತ್ತಿರುವ ಈ ಕವಿಗೆ ಕವಿಯಾಗಿರುವ ಕಷ್ಟ ಗೊತ್ತಿದೆ. ಅದರ ಸುಖವೂ ಗೊತ್ತಿದೆ.

ಚಿತ್ರಕೂಟ : ಎನ್. ಎಸ್. ಲಕ್ಷ್ಮೀನಾರಾಯಣಭಟ್ಟ

ಈ ಸಂಗ್ರಹದ ಇಪ್ಪತ್ತು ಕವಿತೆಗಳಲ್ಲಿ 'ತಪ್ಪುಮಾಡಿದ ಸೋದರನನ್ನು ಕುರಿತು' ಎನ್ನುವ ಕವನ ನಜರುಲ್ ಇಸ್ಲಾಂ ಅವರಿಂದ ಸ್ಫೂರ್ತಿ ಪಡೆದದ್ದು ; 'ಸಾಕ್ಷಿ' ಎನ್ನುವುದು ಪಿಗಟ್‌ಕವಿಯ ಒಂದು ಕವಿತೆಯ ಛಾಯಾನುವಾದ. ಮತ್ತು ಗ್ರೀಕ್ ಹನಿಗವನಗಳು ಗ್ರೀಸಿನ ಕವಿಗಳ ಪುಟ್ಟ ಪುಟ್ಟ ಕವನಗಳ ಅನುವಾದ.

'ಸವಾರಿ' ಮತ್ತು 'ಒಂದು ಸಲ ಹೀಗಾಯಿತು' ಕಥನದ ಅಂಶವನ್ನು ಈ ಕವಿ ಬಳಸಿರುವುದಕ್ಕೆ ಉದಾಹರಣೆಗಳು. ಈ ಎರಡು ಕವಿತೆಗಳೂ ಒಂದು ಚಮತ್ಕಾರಕ ತಿರುವಿನಲ್ಲಿ ಮುಕ್ತಾಯವಾಗುತ್ತದೆ. ಮನುಷ್ಯನ ಚರಿತ್ರೆಯನ್ನೇ

ವಸ್ತುವಾಗುಳ್ಳ ಕವಿತೆ 'ನೀ ಕರುಣಿಸಿದ 'ಬೆಳಕು', 'ಪ್ರೀತಿ' ಎನ್ನುವ ಕವಿತೆ ಭೂಮಿ ಆಕಾಶಗಳ ಪ್ರೀತಿಯನ್ನು ವರ್ಣಿಸುತ್ತದೆ. ರಸ್ತೆಯಲ್ಲಿ ರಾಗಿ ಚೆಲ್ಲಿಕೊಂಡ ಒಬ್ಬ ಪುಟ್ಟ ಬಾಲಕನ ಪಾಡನ್ನು ವರ್ಣಿಸುವ ಕವಿತೆ 'ಬಾಯೊಡೆದ ಚೀಲ'.

ಆತ್ಮೀಯತೆಯ ಅಭಾವ, ಓದುಗರಿಂದ ದೂರ ನಿಲ್ಲುವ ಧೋರಣೆ, ಇದ್ದಕಿದ್ದ ಹಾಗೆ ಲಯದ ಅಥವಾ ಪ್ರತಿಮೆಗಳ ದಿಕ್ಕು ತಟಕ್ಕನೆ ಬದಲಾಗುವಿಕೆ ಈ ಸಂಗ್ರಹದ ಕೆಲವು ಲಕ್ಷಣಗಳಾಗಿವೆ. ಈ ಕವಿಯ ಸಾಮರ್ಥ್ಯಕ್ಕೆ 'ದರ್ಶನ' ಎನ್ನುವ ಕವಿತೆಯ ಈ ಸಾಲುಗಳನ್ನು ನೋಡಿ ;

ತುಟಿ ಮೂಡಿ ಬಂಡೆಗಳು ಕುಡಿದಂತೆ ಕಳ್ಳು
ಕೊಂಬೆಯಲಿ ಮುಖವರಳಿ ಹಾಕಿದವು ಸಿಳ್ಳು
ಮೃಗಗಳಿಗೆ ಒಂದೊಂದು ಅಂಗಕ್ಕೂ ಒಡವೆ
ಸತ್ಯ ಸುಳ್ಳಿಗೆ ನಡೆದು ಪ್ರತಿಗಳಿಗೆ ಮದುವೆ.

ಇಂಥ ಸಾಲುಗಳನ್ನು ಬರೆಯಬಲ್ಲ ಕವಿ ಇನ್ನೂ ಕಾವ್ಯದಲ್ಲಿ ಕಾಣಿಸಿಕೊಳ್ಳದ ಅನುಭವ ಗಳಿಗೆ ಮೈಗೊಡುವರೆಂದು ನಿರೀಕ್ಷಿಸಬಹುದು.

ಕರಾವಳಿಯಲ್ಲಿ ಗಂಗಾಲಗ್ನ : ಕಾಳೇಗೌಡ ನಾಗವಾರ

'ಅನೂನ ವ್ಯಸನಿ ಕುಮೀಬಾ' ಮತ್ತು 'ಕರಾವಳಿಯಲ್ಲಿ ಗಂಗಾಲಗ್ನ' ಈ ಸಂಗ್ರಹದಲ್ಲಿ ಮುಖ್ಯವಾದ ಪದ್ಯಗಳು. 'ಅರಣ್ಯಪರ್ವ' ಮತ್ತು 'ಯುವರಾಜನ ರಾಜ್ಯಭಾರ'ದಂತಹ ಯಾವುದೋ ಕಾಲದ ಮಾತುಗಳೆನ್ನಿಸುವ ಕವಿತೆಗಳು ಮತ್ತು 'ಗೆಳೆಯ' 'ಮಳೆ ಮತ್ತು ಕೊಡೆ' 'ಆಹ್ವಾನ' ಮೊದಲಾದ ಹರಟೆಗಳು ಯಾವ ರೀತಿಯಲ್ಲೂ ನಮ್ಮನ್ನು ತಟ್ಟುವುದಿಲ್ಲ. 'ಕುಶಲ ವಿಚಾರ'ದಂತಹ ಕಾಲೇಜ್ ಕ್ಯಾಂಟೀನಿನ ಮಾತುಗಳೂ ಈ ಸಂಗ್ರಹದಲ್ಲಿವೆ. 'ಇಂದಿರಾಗಾಳಿ'ಯಂತಹ ರಾಜಕೀಯವನ್ನು ಕುರಿತ ಕವಿತೆಯೂ ಭಾಷೆಯ ವಿಶಿಷ್ಟವಾದ ಬಳಕೆಯಿಲ್ಲದೆ ಸೋಲುತ್ತದೆ. 'ಚಂದ್ರಾ ಪೀಡನ ಹಾಡು' ಎನ್ನುವ ಕವಿತೆಯನ್ನು ಓದಿದಾಗ, ಮನಸ್ಸು ಮಾಡಿದರೆ ಈ ಕವಿ ಒಳ್ಳೆಯ ಭಾವಗೀತೆಗಳನ್ನು ಬರೆಯಬಲ್ಲರು ಎನ್ನಿಸುತ್ತೆ.

ಈಗ ಈ ಸಂಕಲನದ ಕೇಂದ್ರವನ್ನು ನಿರ್ದೇಶಿಸುವ 'ಅನೂನ ವ್ಯಸನಿ ಕುಮೀಬಾ' ಮತ್ತು 'ಕರಾವಳಿಯಲ್ಲಿ ಗಂಗಾಲಗ್ನ' ಎನ್ನುವ ಕವಿತೆಗಳನ್ನು ಗಮನಿಸೋಣ. ಅನೂ ಎನ್ನುವ ಹುಡುಗಿಯನ್ನು ಪ್ರೀತಿಸುವ ಕುಡಿ ಮೀಸೆಯ ಬಾಲಕನೇ ಕುಮೀಬಾ. ಅವನನ್ನು ಅಮೀಬಾಗೆ ಹೋಲಿಸುವುದರಲ್ಲಿ ಕವಿ ಯಶಸ್ವಿಯಾಗಿಲ್ಲ ;

ಈಗ ಕುಮೀಬಾ ಕೂಡ ಅಮೀಬಾದಂತೆ
ಬಾಳಲ್ಲಿ ಬಹಳೇ ತಾಳಿ
ಕೊಳ್ಳಬೇಕು. ಕಾಲಕಾಲಕ್ಕೆ ಕಾಯ ತೇಯುತ್ತ

ಕಾಯುಬೇಕು. ಎಡೆ ಸಿಕ್ಕಲ್ಲಿ ಕಾಲೂರಬೇಕು
ನೊರೆ ನುಣುಪು ಉರಿಯೊಡನೆ ಸೆಣಸುತ್ತ
ಏಕಾಂಗಿ ಮೂಕನಡೆ ನೂಕುತ್ತ, ತೆವಳುತ್ತ
ನರಳು ನಿಟ್ಟುಸಿರರೊಡನೆ, ಇಲ್ಲೂ
ಬೆದೆಯು ಹದದಲ್ಲೆ ಇವನ
ಹಂಬಲಿಕೆ ಹಣ್ಣಾಗಬೇಕು

ಇಲ್ಲಿ ಕುಮೀಬಾ ಮತ್ತು ಅಮೀಬಾ ಒಂದೇ ರೀತಿಯ ಶಬ್ದಗಳ ಹಾಗೆ. ಪ್ರಾಸವಾಗಿ ಕೇಳಿಸುವುದಷ್ಟೇ ಅವರಡಕ್ಕಿರುವ ಸಂಬಂಧವಾಗಿ, ಭಾಷೆಯ ಜೊತೆಗೆ ನಡೆಸುವ ಈ ಆಟ ನಿರರ್ಥಕವಾಗುತ್ತದೆ.

'ಕರಾವಳಿಯಲ್ಲಿ ಗಂಗಾಲಗ್ನ' ಎನ್ನುವ ಶೀರ್ಷಿಕೆಯ ಕವನ 'ಅನೂನ ವ್ಯಸನಿ ಕುಮೀಬಾ'ಗಿಂತ ಗಟ್ಟಿಯಾದ ಕವನವಾಗಿದೆ. ಒಂದು ಕಡೆ ಶಿವನು ಗಂಗೆಯನ್ನು ಲಗ್ನ ವಾಗುವ ಆಚರಣೆ ನಡೆಯುತ್ತಿದ್ದರೆ, ಇನ್ನೊಂದು ಕಡೆ ಒಬ್ಬ ಕಪ್ಪು ಹುಡುಗ ಮತ್ತು ಬಿಳಿ ಹುಡುಗಿಯ ಪ್ರಣಯ ನಡೆಯುವುದನ್ನು ಈ ಕವಿತೆ ಚಿತ್ರಿಸುತ್ತದೆ. ಕುಮೀಬಾ ಮತ್ತು ಅನೂನ ಪ್ರಣಯದಲ್ಲಿ ಈ ಸಾಮಾಜಿಕ ಕ್ರಾಂತಿಯ ಸುಳಿವೇ ಇಲ್ಲ. ಆದರೆ 'ಗಂಗಾಲಗ್ನ'ದ ನಾಯಕ ಒಬ್ಬ 'ಕಪ್ಪು ಕಾಮ್ರೇಡ್' ಎಂದು ಕವಿತೆಯ ಪ್ರಾರಂಭದಲ್ಲೇ ಹೇಳಿರುವುದರಿಂದ, ಆತ ಸಹಜವಾಗಿ ವರ್ಗಸಮರದ ಲೆಗ್ಗೆ ತಂತ್ರವನ್ನು ಗುಣಿಸು ತ್ತಿರುತ್ತಾನೆ. ಹಾಗೆ ಇದ್ದವನು ಕತ್ತಲು ದಟ್ಟವಾಗುತ್ತಿರುವುದನ್ನು ಗಮನಿಸಿ

ಸೋಲೋ ? ಸೋಲಿನೊಳಗಿನ
ಆಳದ ಕೆಂಪು ಬೀಜ ಹದವಾಗಿ ಮೊಳೆಯುವಹೊತ್ತೊ ?

ಎನ್ನುತ್ತ ಬಿಳಿ ಹುಡುಗಿಯನ್ನು ದಿಟ್ಟಿಸುತ್ತಾನೆ.

ಅಷ್ಟರಲ್ಲಿ ಬಿಳಿಹುಡುಗಿ ಅಲ್ಲೇ ಹಾದು ಹೋಗುತ್ತಿದ್ದ ತುಂಟ ಬೀರಗೌಡನಲ್ಲಿ ಆಕರ್ಷಿತಳಾದಾಗ ಕಾಮ್ರೇಡ್ ತನ್ನ ಕ್ರಾಂತಿಯ ಕನಸಿನಿಂದ ಎಚ್ಚತ್ತು ಬಿಳಿ ಹುಡುಗಿಗೆ ಹತ್ತಿರವಾಗುತ್ತಾನೆ. ಅವನನ್ನು ಮೆಚ್ಚಿಸುವದಕ್ಕಾಗಿ ಆ ಬಿಳಿ ಹುಡುಗಿ ಅವನ ಕಿವಿಯಲ್ಲಿ ಪಿಸುಗುಡುತ್ತಾಳೆ ;

ಕಾಮ್ರೇಡ್, ಕಾಮ್ರೇಡ್
ಕ್ರಾಂತಿಯ ಗಡಿಗೆರೆಗಳು
ಸದಾ ವಿಸ್ತರಿಸುತ್ತಿರಬೇಕು. ಈ ಕಡಲಂತೆ, ನೀಳಾಕಾಶದಂತೆ
ನಿತ್ಯ ಜೀವಂತಿಕೆಯಲ್ಲಿ,
ಇಲ್ಲಿಳಿವ ಈ ದೆವ್ವಗತ್ತಲಿನಂತೆ ಜನಸಾಗರದ ಕನಸಿನಾಳದಲ್ಲಿ
ನಿರಾಶೆಯ ಕಂದಕಗಳ ಶೂನ್ಯವ ಮುಚ್ಚುತ್ತಾ
ಕುಡಿಯೊಡೆಯಬೇಕು ಏನಂತೀಯ ?

ಎಂದು ಆಕೆ ಅವನನ್ನು ಬಳಸಿದಾಗ ಈ ಕ್ರಾಂತೀವೀರ ಯಾರೋ ನೋಡುತ್ತಿದ್ದಾರೆಂದು ಗಾಬರಿಯಿಂದ ಎದ್ದು ಹೊರಡಲಿಕ್ಕೆ ಸಿದ್ಧನಾಗುತ್ತಾನೆ.

ಇದಿಷ್ಟನ್ನೂ ಗಮನಿಸಿದಾಗ ಕಪ್ಪು ಹುಡುಗನ ಕ್ರಾಂತಿಯು ಕನಸಿನಷ್ಟೇ ಪೊಳ್ಳಾದದ್ದು ಬಿಳಿಹುಡುಗಿಯ ಕ್ರಾಂತಿಯು ಮಾತುಗಳು ಎನ್ನಿಸುತ್ತದೆ. ಆದ್ದರಿಂದ "ಈ ಸಂಕಲನದ ಮುಖ್ಯಕವನವಾದ 'ಕರಾವಳಿಯಲ್ಲಿ ಗಂಗಾಲಗ್ನ'...ಕವನದಲ್ಲಿ ಕವಿಯ ರಾಜಕೀಯ ಸಾಮಾಜಿಕ ಆಸಕ್ತಿಗಳು, ಜನಜೀವನದ ಸಂದರ್ಭದಲ್ಲಿ, ಮಾನವೀಯ ಭಾವನೆ ಹಾಗೂ ಅನುಭವಗಳೊಡನೆ ಸಂಲಗ್ನವಾಗಿ ಅರ್ಥವಂತಿಕೆಯನ್ನು ಅರಸುವ ರೀತಿ ಅನನ್ಯವಾಗಿದೆ" ಎಂದು ಮುನ್ನುಡಿಕಾರರಾದ ಎಚ್. ಎಂ. ಚನ್ನಯ್ಯನವರು ಹೇಳುವಾಗ ಈ ಕವನದಲ್ಲಿ ಕಂಡುಬರುವ ರಾಜಕೀಯ ಸಾಮಾಜಿಕ ಆಸಕ್ತಿ ಬಂಡಾಯದ ಧೋರಣೆಯನ್ನು ಹೊಂದಿಲ್ಲ ಎನ್ನುವುದನ್ನು ಗಮನಿಸುವುದಿಲ್ಲ. ಕಪ್ಪು ಹುಡುಗನೊಬ್ಬ ಬಿಳಿ ಹುಡುಗಿಯೊಬ್ಬಳ ಜೊತೆಗೆ ಕಾಲಕಳೆದದ್ದನ್ನು, ಹಿನ್ನೆಲೆಯ ಸಮುದ್ರ ಮತ್ತು ಧಾರ್ಮಿಕ ಆಚರಣೆಯ ಘಟ್ಟಿಮುಟ್ಟಾದ ವಿವರಗಳೊಂದಿಗೆ, ಶುದ್ಧವಾದ ಲಯಗಳಲ್ಲಿ ಹಿಡಿದಿಡುವುದರಿಂದ ಮಾತ್ರ ಈ ಕವನ ಗಮನಾರ್ಹವಾಗಿದೆ. ಕಪ್ಪು ಕಾಮ್ರೇಡ್ ಮತ್ತು ಬಿಳಿಹುಡುಗಿ ಎನ್ನುವ ಸರಳೀಕರಣ ಈ ಕವನದ ಮಿತಿಯೂ ಆಗಿದೆ. ಈ ಮಿತಿಯಲ್ಲಿ, ಈ ಕವನದಲ್ಲಿ ಕ್ರಾಂತಿಯ ಬಗ್ಗೆ ಕನಸು ಕಾಣುತ್ತ ಅದನ್ನು ಫ್ಯಾಶನ್ನಾಗಿ ಬಳಸುವವರ ಬಗ್ಗೆ ವ್ಯಂಗ್ಯವೂ ಒಳಗೊಂಡಿದೆಯೇನೊ ಎಂದು ಅನುಮಾನವಾಗುತ್ತದೆ.

ಮನೆ ಮನೆಗೆ ಬೇಲಿ : ಬಿ. ಎ. ಸನದಿ

ಈ ಸಂಗ್ರಹದಲ್ಲಿ ಒಟ್ಟು ನಲವತ್ತು ಪದ್ಯಗಳಿವೆ. ಇವುಗಳಲ್ಲಿ 'ಮನೆ ಮನೆಗೆ ಬೇಲಿ' 'ಪವಾಡ' ಮತ್ತು 'ನಮ್ಮ ಸರಸತೀ ವಿಚಾರ' ಒಂದು ರೀತಿಯಲ್ಲಿ ಖುಷಿ ಕೊಡುತ್ತವೆ. ಬೇರೆ ಬೇರೆ ರೀತಿಯ ಬೇಲಿಯ ಒಂದು ತೋರಣವನ್ನು ಕಟ್ಟಿದಂತಿರುವ ಶೀರ್ಷಿಕೆಯ ಕವನದಲ್ಲಿ

ಇಲ್ಲಿ ಬದುಕ್ಕಿದ್ದವರ ಹೊಲ ಮನೆಗೆ ಬೇಲಿ
ಸತ್ತವರ ಗೋರಿಗಳ ಸುತ್ತಲೂ ಬೇಲಿ

ಎನ್ನುತ್ತ ಬೇಲಿಗಳ ಸಮೃದ್ಧಿಯನ್ನು ಚಿತ್ರಿಸಿದ ಮೇಲೆ ಈ ಕವನದ ಮುಕ್ತಾಯ ಈ ರೀತಿ ಇದೆ :

ಆಗ ಬೇಕೇತಕ್ಕೆ
ಬೇಲಿಯರಿಯದ ಮುಗಿಲ ಮಂಟಪದಡಿಗೆ
ಮನೆ ಮನೆಗೆ ಬೇಲಿ
ಮನ ಮನಕೆ ಬೇಲಿ?

ಈ ಮುಕ್ತಾಯದ ಮಾತುಗಳನ್ನು 'ನಮ್ಮ ಹಿತ್ತಲ ಬೇಲಿ ಹೇಳಿದ್ದು' ಎಂದು ಹೇಳು ವುದರಿಂದಲೂ ಈ ಮುಕ್ತಾಯ ನಮ್ಮನ್ನು ಚಕಿತಗೊಳಿಸುತ್ತದೆ. 'ಪವಾಡ' ಎನ್ನುವ ಕವಿತೆಯಲ್ಲಿ ಮಗುವಾಗಿದ್ದಾಗ ಎಲ್ಲರಿಂದಲೂ 'ಬಾ' 'ಬಾ' ಎಂದು ಕರೆಸಿ ಕೊಂಡವನನ್ನು ಎಲ್ಲರೂ ಬಾಬಾ ಎಂದು ಕರೆಯುತ್ತಾರೆ. ಆದರೆ ಈ ಬಾಬಾ ಸಾಯಿಬಾಬಾರ ಹಾಗೆ ಪವಾಡ ಪುರುಷನಲ್ಲ. ಆದರೆ ಈ ಬಾಬಾಗೆ ಪುಟ್ಟ ಮಗು, ಮಗುವಿನ ನಗು ಪವಾಡಗಳಾಗಿ ಕಾಣುತ್ತವೆ. ಈತ ತನ್ನ ಹತ್ತಿರ ಬರುವವರನ್ನೂ, ಅನುಮಾನದಿಂದ ದೂರ ಉಳಿದವರನ್ನೂ ಬಾಬಾ ಎಂದೇ ಕರೆಯುತ್ತಾನೆ. 'ನಮ್ಮ ಸರಸತೀ ವಿಚಾರ'ದಲ್ಲಿ ಈ ಕವಿ ಕಾವ್ಯದ ನಾನಾ ರೀತಿಗಳನ್ನು ಯೋಚಿಸುತ್ತ "ಮುಡಿ ವವರ ಮೌನಕ್ಕೆ ಹೊಸ ಧ್ವನಿಯ ನೀಡುವುದು' ತನ್ನ ಹವ್ಯಾಸ ಎಂದು ಹೇಳುತ್ತಾನೆ. ಹೀಗೆ ಆರೋಗ್ಯಕರವಾದ ಭಾವನೆಗಳನ್ನುಳ್ಳ ಈ ಸಂಗ್ರಹ ಸ್ವಾಗತಾರ್ಹವಾಗಿದೆ.

ಮೌನ ನುಂಗಿದ ಶಬ್ದಗಳು : ಪ್ರಭುರಾಜ ಅರಣಕಲ್

ಈ ಸಂಗ್ರಹದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಇಪ್ಪತ್ತು ಕವನ ಗಳಿವೆ ಮತ್ತು ಎರಡನೆ ಭಾಗದಲ್ಲಿ ಏಳು ಕವನಗಳಿವೆ. ಮೊದಲ ಭಾಗದ ಕವನಗಳು ಇತ್ತೀಚಿನ ನವ್ಯಕಾವ್ಯದ ಸ್ವಚ್ಛಂದ ಛಂದಸ್ಸಿನಲ್ಲಿದ್ದರೆ, ಎರಡನೆ ಭಾಗದ ಕವನಗಳು ನವ್ಯ ಜಾನಪದ ಮಾರ್ಗದ ಧಾಟಿಯನ್ನು ನೆನಪಿಗೆ ತರುತ್ತವೆ. ಚಂದ್ರಶೇಖರ ಕಂಬಾರ ಚನ್ನಣ್ಣ ವಾಲೀಕಾರ, ಸೋಮಶೇಖರ ಇಮ್ರಾಪೂರರ ಹಾಗೆ ಅರಣಕಲ್ಲರೂ ಕೂಡ ಜಾನಪದ ಧಾಟಿ ಮತ್ತು ಗತ್ತುಗಳನ್ನು ಬಳಸಿಕೊಂಡಿದ್ದಾರೆ. ಇವುಗಳನ್ನು ಹಾಡಿ ದಾಗ ಕಂಡುಬರುವ ಸೊಗಸು ಓದಿ ಕೊಂಡಾಗ ಕಾಣಿಸದೆ ಹೋಗುವುದು ಇವುಗಳ ಒಂದು ಮಿತಿಯಾಗುತ್ತದೆ. 'ತೋಂಡಿ' ಸಂಪ್ರದಾಯದಲ್ಲಿ ಜೀವಂತವಾಗುವ ಈ ಕವಿತೆಗಳು ಕಾವ್ಯವಾಚನದ ಶಿಷ್ಟ ಸಂಪ್ರದಾಯದಲ್ಲಿ ಬರಡಾಗಿ ಕಾಣುತ್ತವೆ. ಬೇಂದ್ರೆ ಯವರು ಈ ಕಂದಕವನ್ನು ದಾಟಿದ ಹಾಗೆ ಮಿಕ್ಕ ಕವಿಗಳೂ ದಾಟಿದಾಗ ಕನ್ನಡ ಕಾವ್ಯ ದಲ್ಲಿ ಹೊಸ ಜೀವನ ಸಂಚಾರವಾಗಬಹುದು.

ಕೇಳು ಜಗವಮಾದಿಗ ಹೊಲೆಯ : ಮನಜ

ಸೇಡು, ರೋಷ, ಆಕ್ರೋಷ, ಪ್ರತಿಭಟನೆ, ಹೊಸ ರೀತಿಯ ಸಮಾನತೆಯ ಬದುಕನ್ನು ಸೃಷ್ಟಿಮಾಡುವ ಛಲವನ್ನು ಮೈಗೂಡಿಸಿಕೊಂಡಿರುವ ಇಲ್ಲಿನ ಹತ್ತೊಂಬತ್ತು ಕವನಗಳಲ್ಲಿ 'ಕಮಲವ್ವ' ಎನ್ನುವ ನೀಳ್ಗವನವೂ ಸೇರಿದೆ. ವಚನಗಳು ಜಾನಪದ ಛಂದೋ ವಿನ್ಯಾಸಗಳು, ಆಧುನಿಕ ಭಾವಗೀತೆಯ ವಿವಿಧ ರೀತಿಗಳನ್ನು, ಈ ಕವಿ ಬಳಸಿಕೊಂಡಿದ್ದಾರೆ.

ಕಣ್ಣೀರು ಕಳಕೊಂಡವನು : ದೇಶಪಾಂಡೆ ಸುಬ್ಬರಾಯ

ಇಪ್ಪತ್ತೆಂಟು ಕವಿತೆಗಳ ಈ ಸಂಗ್ರಹದಲ್ಲಿ ಮೂರು ಭಾಗಗಳಿವೆ. ಈ ಕವಿತೆಗಳ ಅರ್ಥವಾಗಲೀ ಸಂದರ್ಭವಾಗಲೀ ಗೊತ್ತಾಗದಿದ್ದರೂ, ಈ ಕವಿಯ ತಲ್ಲಣಗೊಂಡ ಮನಸ್ಸು ಈ ಎಲ್ಲ ಕವಿತೆಗಳ ಹಿಂದಿದೆ ಎನ್ನಬಹುದು. "ಹೇಳಬೇಕಾದ್ದನ್ನು ಪ್ರಾಮಾಣಿಕವಾಗಿ ಹೇಳಿದ್ದೇನೆ" ಎಂದು ಮುನ್ನುಡಿಯಲ್ಲಿ ಈ ಕವಿ ಹೇಳಿದ್ದಾರೆ, ಅವರ ಪ್ರಾಮಾಣಿಕತೆಯನ್ನು ನಾವು ಪ್ರಶ್ನಿಸುತ್ತಿಲ್ಲ. ಅವರು ಹೇಳಬೇಕಾದ್ದು ನಮಗೆ ಸ್ಪಷ್ಟವಾಗುವ ಹಾಗಿಲ್ಲವಾದ್ದರಿಂದ, ಈ ಸಂಗ್ರಹದ ಬಗ್ಗೆ ಏನು ಹೇಳಲಿಕ್ಕೂ ತೋರುವುದಿಲ್ಲ.

ಸೀಯಾಳ : ಗುಂಡ್ಮಿ ಚಂದ್ರಶೇಖರ ಐತಾಳ

ಇದು ಶ್ರೀಕಡೆಂಗೋಡ್ಲು ಶಂಕರಭಟ್ಟರ ಸ್ಮಾರಕ ಕಾವ್ಯ ಪ್ರಶಸ್ತಿ ವಿಜೇತಕೃತಿ. ಇಪ್ಪತ್ತನಾಲ್ಕು ಪುಟಗಳ ಈ ಪುಸ್ತಕದ ಬೆಲೆ ಕೇವಲ ಹತ್ತು ರೂಪಾಯಿ. ಜಿ. ಟಿ. ನಾರಾಯಣರಾಯರ ಪ್ರಕಾರ ಈ ಶೀರ್ಷಿಕೆಗೆ SEA + ಆಳ ಎಂಬ ಅರ್ಥವಂತೆ. "See + ಆಳ" ಎಂದು "ಸಹೃದಯನಾಗಿ ನನಗೆ ಬೇರೊಂದು ಅರ್ಥವೂ ಹೊಳೆಯಿತು" ಎಂದು ಗುಂಡ್ಮಿಯವರು ಹೇಳಿಕೊಂಡಿದ್ದಾರೆ. ಇಲ್ಲಿನ ಕಾವ್ಯದ ಶಿಖರಗಳಲ್ಲೊಂದಾದ 'ಕೂವಲಿನಲ್ಲೇನಿದೆ !' ಎನ್ನುವ ಪದ್ಯ ಹೀಗಿದೆ :

ಕೂದಲಿನಲ್ಲೇನಿದೆ ?<br>
ಅದಕೇ<br>
ನನ್ನ ತಲೆ ಬೋಳಾಗಿದೆ !<br>
ಕೂದಲಲ್ಲಿ ಇರುವುದೆಲ್ಲ<br>
ನನ್ನ ತಲೆಯೊಳಗಿದೆ !<br>
ನಯವು ನವುರು ಹೊಳಪು ಮೆಲ್ಪು<br>
ಸ್ನಿಗ್ಧ ಶುದ್ಧ ಶುಭ್ರತೆ<br>
ಲಾವಣ್ಯದ ಕೃಷ್ಣನಿರತೆ<br>
ನನ್ನ ತಲೆಯ ತುಂಬಿದೆ !<br>
ಶಿವನ ತಲೆಯ ಮೇಲೆ ಜಡೆ<br>
ಅದಕೆ ಭವವು ಅವನ ಬಿಡೆ<br>
ಎಂದು ತೊಡೆಯನೇರಿ ಮೃಡೆ<br>
ಹಿಡಿದು ಬಂಧಿಸಿದೆ !<br>
ತಲೆಯ ಮೇಲೂ ವ್ಯೋಮ<br>
ತಲೆಯ ಒಳಗೂ ವ್ಯೋಮ<br>
ಶಶಿತಾರೆ ಗ್ರಹಗ್ರಹಗಳ<br>
ಬೆಳಕಿನ ಆರಾಮ !

1978ರಲ್ಲಿ ರಚಿಸಿದ ಈ ಕವಿತೆ 'ಮಧುಕರ' ಮಾಸ ಪತ್ರಿಕೆಯಲ್ಲಿ ಪ್ರಕಟವಾಗಿದೆ ಎಂದು ತಿಳಿದು ಬರುತ್ತದೆ. ಈ ಸಂಗ್ರಹದ ಮೂವತ್ತು ಪದ್ಯಗಳಲ್ಲಿ ಮಿಕ್ಕ ಪದ್ಯಗಳ ಆಳವೂ ಅಷ್ಟೇ ಇದೆ.

ಪ್ಯಾಂಥರ್ ಪದ್ಯಗಳು : ಚೆನ್ನಣ್ಣ ವಾಲೀಕಾರ

ಅನೇಕ ರೀತಿಯ ಅನ್ಯಾಯಗಳಿಗೆ ಮತ್ತು ಶೋಷಣೆಗೆ ಒಳಗಾದವರ ನೋವಿಗೆ ಮಾತು ಕೊಡುವ ಇಲ್ಲಿನ ಕವಿತೆಗಳು, ಸಹಾನುಭೂತಿಯನ್ನೂ, ಪ್ರತಿಭಟನೆಯನ್ನೂ. ಒಂದು ರೀತಿಯ ಅಸಹಾಯಕತೆಯನ್ನೂ ಜೊತೆಯಲ್ಲೇ ಕಟ್ಟಿ ಕೊಂಡು ಬರುತ್ತವೆ. ನರಗುಂದದ ಹೋರಾಟವಾಗಲಿ, ಸಿಕ್ಕಿಂ ಪ್ರಾಂತದ ಆಗು ಹೋಗುಗಳಾಗಲಿ, ವಡ್ಡರ, ಹೊಲೆಯರ, ಮೀನುಗಾರರ ಬದುಕಾಗಲಿ ಈ ಕವಿ ಹತ್ತಿರದಿಂದ ನೋಡುತ್ತಾರೆ. ಈ ಸಂಕಲನವನ್ನು ಕುರಿತು ಬರಗೂರು ರಾಮಚಂದ್ರಪ್ಪ ನವರು ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ಸಕಾಲಿಕವಾಗಿವೆ ಮತ್ತು ಈ ರೀತಿಯ ಕಾವ್ಯದ ಲಕ್ಷಣವನ್ನೂ ರೂಪಿಸುತ್ತವೆ ; "ಇಡೀ ಸಂಕಲನದಲ್ಲಿ ನನಗೆ ಅತಿ ವಾಚ್ಯದ ಅಪಾಯ ಮತ್ತು ಅದನ್ನು ಮೀರ ಬಯಸುವ ಹೋರಾಟ ಕಂಡು ಬರುತ್ತದೆ. ಇದೇ ಸಂದರ್ಭದಲ್ಲಿ ಇನ್ನೊಂದು ಮಾತನ್ನೂ ಹೇಳಬೇಕು. ಇಲ್ಲಿರುವ ಪದ್ಯಗಳೆಲ್ಲ ಹಾಡಲು ಬರುವಂಥವು. ಚಂಪೂ ಮಾದರಿಯ ಪ್ರಯೋಗವನ್ನೂ ಇಲ್ಲಿ ಮಾಡಲಾಗಿದೆಯಾದರೂ ಅದರ ಪದ್ಯ ಭಾಗಗಳನ್ನು ಹಾಡಬಹುದು ; ಗದ್ಯಕ್ಕೂ ಹಾಡಿನ ಗತ್ತು ಕೊಡಬಹುದು. ಈ ರೀತಿಯ ಪದ್ಯಗಳ ಬಗ್ಗೆ ತೀರ್ಮಾನಕ್ಕೆ ಬರುವಾಗ performance ಸಹ ಒಂದಂಶವಾಗಬೇಕೆನ್ನಿಸುತ್ತದೆ. ಯಾಕೆಂದರೆ ಕಾವ್ಯದ ಪರಿಣಾಮ performance ಅನ್ನು ಸ್ವಲ್ಪಮಟ್ಟಿಗೆ ಅವಲಂಬಿಸಿದೆ. ಈ ಅಂಶವನ್ನು ಪರಿಗಣಿಸಿಯೂ—ಕಾವ್ಯ ಅತಿವಾಚ್ಯವಾಗುವುದನ್ನು ಒಪ್ಪಲಾಗದು. performance ಕೇಂದ್ರೀಕೃತ ಕವಿ ಮನಸ್ಸು ಛಂದೋಬಂಧದ ಕಡೆ ಹೆಚ್ಚು ವಾಲಿಬಿಡಬಹುದು. ವಾಲೀಕಾರರೂ ಅನೇಕ ಕಡೆ ಇತ್ತಲೇ ವಾಲುವುದರಿಂದ ಕಾವ್ಯಕ್ಕೆ ತೊಡಕು ಉಂಟಾಗಿದೆ. ಇದು ಬಂಡಾಯ ಕವಿಗಳ ಸಮಸ್ಯೆಯ ಸೂಕ್ಷ್ಮತೆಯನ್ನು ತೋರಿಸುತ್ತದೆ." ಬರಗೂರರು ಈ ಮಾತುಗಳಲ್ಲಿ, ಪ್ರದರ್ಶನದಲ್ಲಿ ಪರಿಣಾಮಕಾರಿಯಾಗುವುದಕ್ಕೂ ಕಾವ್ಯವಾಗುವುದಕ್ಕೂ ನಡುವಿನ ರೂಪಾಂತರದ ಸಮಸ್ಯೆಯ ಬಗ್ಗೆ ನಮ್ಮ ಗಮನವನ್ನು ಸೆಳೆಯುತ್ತಾರೆ. ಚೆನ್ನಣ್ಣ ವಾಲೀಕಾರರ ಈ ಸಂಗ್ರಹ ಕನ್ನಡ ಕಾವ್ಯದ ಅವಸ್ಥಾಂತರವನ್ನೂ ಸೂಚಿಸುವುದರಿಂದ ಗಮನಾರ್ಹವಾಗಿದೆ.

ಒಣಮರದ ಗಿಳಿಗಳು : ಎಚ್. ಎಸ್. ವೆಂಕಟೇಶಮೂರ್ತಿ

'ಸಿಂದಾಬಾದಾನ ಆತ್ಮ ಕಥೆ'ಯಲ್ಲಿ ಭಾವಗೀತೆಯ ಸಾಧ್ಯತೆಯನ್ನು ತೋರಿಸಿದ ಎಚ್. ಎಸ್. ವೆಂಕಟೇಶ ಮೂರ್ತಿಯವರ 'ಕ್ರಿಯಾಪರ್ವ'ದಂತೆ ಈ ಸಂಗ್ರಹದಲ್ಲಿಯೂ ಭಾವಗೀತೆಯ ಲಕ್ಷಣಗಳು ಎದ್ದು ಕಾಣುತ್ತವೆಯಾದರೂ ಸಮಕಾಲೀನತೆ ಎಲ್ಲಿಯೋ ಮರೆಯಾಗಿದೆ ಅನ್ನಿಸುತ್ತದೆ. ಈ ಕವಿಯ ಮನಸ್ಸು ರಾಮಾಯಣದ ಕಾಲದಲ್ಲಿ,

ಪುರಾಣಗಳ ಕಾಲದಲ್ಲಿ, ದಂತಕತೆಗಳ ಕಾಲದಲ್ಲಿ ಸಹಜವಾಗಿ ಸಂಚಾರ ಮಾಡುವ ಹಾಗೆ ಆಧುನಿಕ ಜಗತ್ತಿನ ವರ್ತಮಾನದಲ್ಲಿ ಸಂಚರಿಸುವುದೇ ಇಲ್ಲ. ನೆಳಲು ನೀರು ಬೆಳುದಿಂಗಳಿನ ತಂಪಾದ ಈ ಕಾವ್ಯಲೋಕ. ನಾದಮಯವಾದ ಸ್ಪಷ್ಟ ಲಯಗಳಿಂದ ಸಂತೋಷವನ್ನು ಕೊಡುತ್ತದೆಯೆನ್ನುವುದೂ ನಿಜ. ಈ ಮಾತುಗಳಿಗೆ ಉದಾಹರಣೆಯಾಗಿ 'ಗಂಗೆಯಲ್ಲಿ ನಾವೆ' ಎನ್ನುವ ಕವಿತೆಯನ್ನು ಗಮನಿಸಬಹುದು—

ಪೃಥೆಯು ಬಳಿಗೆ ಬಂದ ರವಿ ತನ್ನ ಕರವ ಚಾಚುತ 1
ಹುಡುಗಿ ತಲೆಯು ತಗ್ಗಿಸಿದಳು ನಾಚಿ ನೀರಾಗುತ 2
ಬೆಟ್ಟಗಳಿಗೆ ಘಟ್ಟಗಳಿಗೆ ಹೂವು ಹಾಸ ಕೊಟ್ಟ ಗಳಿಗೆ 3
ರವಿಯು ಕರದ ಸ್ಪರ್ಶ ರೋಮಾಂಚ ಸಂದಿ ಸಂದಿಯೊಳಗೆ 4
ಬಾಚಿಕೊಂಡು ಚಾಚಿಕೊಂಡು ಕಾಲಕಾಲ ಮೀಟಿಕೊಂಡು 5
ಹಸುರಿನಲ್ಲಿ ಹೆಸರ ಬರೆದು ಚಿಗುರು ಚೀಪಿ ಚೀಟಿಕೊಂಡು 6
ಒಡಲಾಳಕ್ಕಿಳಿದು ತಾವು ಏನೊ ತಾಪ ತಳಮಳ 7
ಹಾಸಿ ಮುಚ್ಚುತಿರಲು ಮಲ್ಲುಬೆಳಕು ತನ್ನ ಬೆತ್ತಲ 8
ಅವನಿ-ಅವನ ನಡುವಿನಲ್ಲಿ ಕೂಡಿ ಕೊಳ್ಳೊ ಆಟದಲ್ಲಿ 9
ಪಟ್ಟು ಪಡೆದುಕೊಂಡು ಕಡೆದು ಕೆತ್ತಿ ಕೊಡುವ ಮಾಟದಲ್ಲಿ 10
ನೀರಿನಲ್ಲಿ ನೀರಜಾಕ್ಷಿ ಮಣ್ಣಿನಲ್ಲಿ ಮಲ್ಲಿಗೆ 11
ಕಲ್ಲು ಕಲ್ಲಲ್ಲಿ ಬಳ್ಳಿ ತೇಗ ಹೊನ್ನೆ ತೇರಿಗೆ 12
ಯೋನಿಯೋನಿಯೋಗ ಲಕ್ಷೋಪಲಕ್ಷ ಕಾವಿಗೆ 13
ತೇಲಿ ಮುಳುಗಿ ಸಾಗುವಾಟ ಗಂಗೆಯಲ್ಲಿ ನಾವೆಗೆ 14

ಮೂರು ಮೂರು ಮಾತ್ರೆಗಳ ಇಲ್ಲಿಯ ಲಯಗಾರಿಕೆಯಲ್ಲಿ ಮೊದಲ ನಾಲ್ಕು ಸಾಲುಗಳು ಅರ್ಥವಾಗುವ ಹಾಗಿವೆ. ಐದನೆಯ ಸಾಲನ್ನೂ, ಸ್ವಲ್ಪ ಹಿಗ್ಗಾಮುಗ್ಗಾ ಮಾಡಿ ಅರ್ಥ ಮಾಡಿಕೊಳ್ಳಬಹುದು. ಆದರೆ ಆರನೆಯ ಸಾಲಿನ 'ಚಿಗುರು ಚೀಪಿ 'ಚೀಟಿಕೊಂಡು' ಎನ್ನುವುದಕ್ಕೆ ಅರ್ಥವೇ ಇಲ್ಲ. 7 ರಿಂದ 10ನೇ ಸಾಲಿನವರೆಗೆ ಸೂರ್ಯ ಮತ್ತು ಕುಂತಿಯ ಸಮಾಗಮವನ್ನು ಚಿತ್ರಿಸಿದ್ದಾರೆಂದೂ ಸ್ಪಷ್ಟವಾಗುತ್ತದೆ. ಆದರೆ 11 ಮತ್ತು ಹನ್ನೆರಡನೆ ಸಾಲಿನಲ್ಲಿ 'ನೀರಿನಲ್ಲಿ ನೀರಜಾಕ್ಷಿ' ಎನ್ನುವುದು ಗಂಗೆಯ ನೀರಿನಲ್ಲಿ ಕುಂತಿಯ ಚಿತ್ರಕ್ಕೆ ಸಂಬಂಧಿಸಿದ ಮಾತಾದರೆ, ಮಿಕ್ಕ ಮಾತುಗಳಿಗೂ ಈ ಕಾವ್ಯ ಸಂದರ್ಭಕ್ಕೂ ಯಾವ ಸಂಬಂಧವೂ ಇಲ್ಲವಾಗಿದೆ. ಕೊನೆಯ ಎರಡು ಸಾಲುಗಳಲ್ಲಿ 'ಯೋನಿ ಯೋನಿ ಯೋಗ' ಎನ್ನುವಲ್ಲಿ ಯೋನಿಯೋನಿಯೋಗದಿಂದ ಏನೂ ಹುಟ್ಟುವುದಿಲ್ಲವೆಂದು ಕವಿಗೆ ತಿಳಿದಿಲ್ಲವೆನ್ನಿಸುತ್ತದೆ. 'ಲಕ್ಷೋಪಲಕ್ಷ ಕಾವಿಗೆ' ಎನ್ನುವುದು 'ಗಂಗೆಯಲ್ಲಿ ನಾವೆಗೆ' ಎನ್ನುವುದಕ್ಕೆ ಪ್ರಾಸಕ್ಕಾಗಿ ಮತ್ತು ಪಾದಪೂರಣಕ್ಕಾಗಿ ಮಾತ್ರ ಬಂದಿದೆ ಎನ್ನಿಸುತ್ತದೆ. ಹೀಗಿದ್ದರೂ ಈ ಸಂಗ್ರಹಕ್ಕೆ ಕುರ್ತಕೋಟಿಯವರು ಬರೆದ ಮುನ್ನುಡಿಯಲ್ಲಿ ಈ ಕವಿತೆಯ ವಿಶ್ಲೇಷಣೆ ಮಾಡುತ್ತ ಈ ಕವಿತೆ ಅತ್ಯುತ್ತಮವಾದದ್ದೆಂದು ಹೇಳಿದ್ದಾರೆ. ಕುರ್ತಕೋಟಿಯವರು ಪದಗಳನ್ನು ಹೇಗೆ

ಬೇಕೋ ಹಾಗೆ ಒಡೆದುಕೊಂಡು ಇಲ್ಲದ ಅರ್ಥಗಳನ್ನು ಹುಡುಕ ಹೊರಡುತ್ತಾರೆ. 'ಅವನಿ' ಎಂದರೆ 'ಅವನ' ಸರ್ವನಾಮದ ಸ್ತ್ರೀಲಿಂಗವೆನ್ನುತ್ತಾರೆ! ಅವರು ಸಂಸ್ಕೃತ ವನ್ನು ಬಲ್ಲವರಾದರೂ 'ನೀರಜಾಕ್ಷಿ' ಎಂದರೆ ನೀರು ಹಾಕಿಸಿಕೊಂಡ ಹೆಣ್ಣಾಗುತ್ತಾಳೆ ಎಂದು ಹೇಳುತ್ತಾರೆ. 'ರಜಸ್' ಎಂದರೆ ಮುಟ್ಟು ಎನ್ನುವ ಅರ್ಥವಿದೆ. ನೀರಜ ಎಂದರೆ ಮುಟ್ಟಿನಿಂದ ದೂರವಾದವಳು ಎನ್ನುವ ಅರ್ಥವಿದೆಯೇ ಹೊರತು ನೀರು ಹಾಕಿಸಿಕೊಂಡ ಹೆಣ್ಣಾಗುವುದಿಲ್ಲ. ನೀರಜ ಎನ್ನುವುದನ್ನು ನೀರು ಮತ್ತು ರಜ ಎಂದು ಒಡೆಯುವುದಕ್ಕೆ ಯಾವ ಸಮರ್ಥನೆಯೂ ಇಲ್ಲ, 'ಲಕ್ಷೋಪಲಕ್ಷ ಕಾವಿಗೆ' ಎನ್ನುವಲ್ಲಿ ಕಾವಿಯನ್ನುಟ್ಟವರಿಂದ ಎನ್ನುವ ಅರ್ಥವೂ ಹೊಳೆದಿದ್ದರೆ ಕುರ್ತಕೋಟಿಯವರಿಗೆ ಇನ್ನೊಂದು ಬಾರಿ ಪ್ರತಿಭದರ್ಶನವಾಗುತ್ತಿತ್ತೋ ಏನೊ! ಕುರ್ತಕೋಟಿಯವರಂಥ ಹೆಸರಾಂತ ವಿಮರ್ಶಕರು ಕವಿಗಳನ್ನು ಹೀಗೆ ಪ್ರೋತ್ಸಾಹಿಸುತ್ತ ಅಡ್ಡದಾರಿ ಹಿಡಿಸು ತ್ತಾರೇನೋ ಎಂದು ಭಯವಾಗುತ್ತದೆ. 'ಕಾವ್ಯ ಮತ್ತು ವಿಮರ್ಶೆಗಳ ಸಂಘರ್ಷ ದಿಂದ ಅನಿರೀಕ್ಷಿತವಾದದ್ದೊಂದು ಹುಟ್ಟಿ ಬರಲೇ ಬೇಕು' ಎನ್ನುವ ಹಟದಿಂದ ಇಲ್ಲದ ಅರ್ಥಗಳನ್ನು ಹುಟ್ಟಿಸಿದರೆ ಕಾವ್ಯಲೋಕದಲ್ಲೂ ಮತ್ತು ವಿಮರ್ಶಾ ಲೋಕದಲ್ಲೂ ಅನರ್ಥಗಳು ಸಂಭವಿಸುತ್ತವೆ. ಎಚ್. ಎಸ್. ವೆಂಕಟೇಶಮೂರ್ತಿ ಯವರಂಥ ಒಳ್ಳೆಯ ಕವಿಗಳು ಇಂಥ ವಿಮರ್ಶೆಯ ಅಪಾಯಗಳನ್ನು ದಾಟಿದರೆ ಇನ್ನಷ್ಟು ಬೆಳೆಯಬಲ್ಲರು ಎನ್ನುವುದರಲ್ಲಿ ಸಂಶಯವಿಲ್ಲ.

ಬೇರೆ ಬೇರೆ ಲಯಗಳನ್ನು ಉಪಯೋಗಿಸುವ ವೆಂಕಟೇಶ ಮೂರ್ತಿಯವರ ಪ್ರಯೋಗಶೀಲತೆ, ಪ್ರತಿಯೊಂದು ಕವಿತೆಯಲ್ಲೂ ಇರುವ ಭಾವಗೀತೆಯ ಗುಣ ಅವರ ವಿಶಿಷ್ಟತೆಯಾಗಿದೆ.

ಶಬ್ದದೊಳಗಣ ನಿಶ್ಶಬ್ದ : ಡಿ. ವಿ. ರಾಜಶೇಖರ್

ಈ ಸಂಗ್ರಹದ ಇಪ್ಪತ್ತೆರಡು ಕವಿತೆಗಳಲ್ಲಿ 'ಅನಾಥೆ'ಯೆನ್ನುವ ಒಂದು ಕವಿತೆ ಮಾತ್ರ ಕಾಲಿಲ್ಲದ ಅನಾಥೆಯೊಬ್ಬಳ ಜೀವನ ಚಿತ್ರವನ್ನು ತಾರ್ಕಿಕ ನೆಲೆಯಲ್ಲಿ ಕೊಡು ವುದರಿಂದ ಅರ್ಥವಾಗುವ ಹಾಗಿದೆ. ಮಿಕ್ಕ ಕವಿತೆಗಳನ್ನು ಓದಿದಾಗ ಟೀಕಿನ ನೆರ ವಿಲ್ಲದೆ ಬೆಡಗಿನ ವಚನಗಳನ್ನು ಓದಿದ ಹಾಗಾಗುತ್ತದೆ. ಈ ಸಂಗ್ರಹಕ್ಕೆ ಮುನ್ನುಡಿ ಬರೆದ ಕಿ.ರಂ. ನಾಗರಾಜರು ಬೆಡಗಿನ ವಚನಗಳನ್ನು ಉದಾಹರಣೆಯಾಗಿ ಕೊಟ್ಟು, "ಸಾಂಪ್ರದಾಯಕ ಅರ್ಥಗಳನ್ನು ಒಡೆದು ವಿಭಿನ್ನ ಭಾಷಿಕ ಸಾಧ್ಯತೆಗಳನ್ನು ಕಂಡು ಕೊಳ್ಳುವ ನೆಲೆ"ಯಲ್ಲಿ ರಾಜಶೇಖರ್ ಅವರ ರಚನೆಗಳು ಕೆಲಸ ಮಾಡುತ್ತವೆ ಎಂದು ಹೇಳಿದ್ದಾರೆ. ಪರಸ್ಪರ ವಿರುದ್ಧ ಅರ್ಥ ಹುಟ್ಟಿಸುವ ಶಬ್ದಗಳನ್ನು ಓದಿ ಸ್ತಬ್ಧನಾದ ಓದುಗ, ಈ ಸ್ತಬ್ಧತೆಯ ಮೂಲಕ ಮೌನವನ್ನು ಪ್ರವೇಶಿಸಿ ಆ ಮೌನದಲ್ಲಿ ಅರ್ಥ ಗ್ರಹಣಕ್ಕೆ ಸಿದ್ಧತೆಯನ್ನು ಮಾಡಿಕೊಳ್ಳಬೇಕೆಂದೂ ಕಿ. ರಂ ನಾಗರಾಜರು ಹೇಳು ತ್ತಾರೆ. ಹೀಗೆ ಮೌನವನ್ನು ಪ್ರವೇಶಿಸಿ ಸಿದ್ಧರಾದ ಮೇಲೆ ಏನು ಅರ್ಥ ಬರುತ್ತದೆಂದು ಕಿ.ರಂ. ನಾಗರಾಜರು ತೋರಿಸಿದ್ದರೆ ಉಪಕಾರವಾಗುತ್ತಿತ್ತು. ರಾಜಶೇಖರ ಅವರ ಕಾವ್ಯರಚನೆಯ ರೀತಿಗೆ ಉದಾಹರಣೆಯಾಗಿ 'ತಾಯಿ' ಎನ್ನುವ ಕವಿತೆಯನ್ನು ಗಮನಿಸಬಹುದು :

ದಿನ ಬೆಳಗಾದರೆ ಚಿಕ್ಕೆಗಳ ನಡುವೆ
ಆಕಾಶದ ರೆಕ್ಕೆ, ತನ್ನ ಮುಲಾಮು ಕಣ್ಣಿನ
ರೆಪ್ಪೆಯಾಲಿಸಿ ಹೂವಿನ ಸುತ್ತ ಕೆದಕುವ
ಮರಿಮೊಗ್ಗು ಮುಳ್ಳಲ್ಲಿ ಕೂಗುವ ಪೊದರು

ಅಲ್ಲಿ ತೋಳಿಲ್ಲದ ಮುಳ್ಳು ಬಿದಿರಿನ ತೊಡೆ
ಪ್ರೀತಿಯೊಳಗಡೆ ಸುಟ್ಟ ಹಸಿಬೂದಿ
ಮುರುಕು ಮುಖ ಬೆಳೆದ ಉತ್ತರೆ ಮಳೆ ರುಚಿ

ಯಾರಿರಲಿ ಬಿರುಕು ಹೊರಳಿನ ಪಂಜು,
ಕೋಳಿ ಕೂಡುವ ಬುಟ್ಟಿ ರಾತ್ರಿ-ಹಗಲು
ಗಂಡಸೋ ಕಣ್ಣು ಪ್ರಾಣದವನು

ಮೂಳೆ ಬಾಗಿಲುಗಳಲ್ಲಿ ಹರಿದ ನೀರಿನ ನೆರಳು
ಕಸ ತುಂಬಿದವನ ಪ್ರೀತಿಯಲ್ಲಿ
ಸೂರ್ಯ ತುಂಬಿದ ಕೊಳ

ಇದನ್ನು ಒಳ್ಳೆಯ ಕವಿತೆಯೆಂದು ಕಿ.ರಂ. ನಾಗರಾಜರು ಹೇಳಿದ್ದಾರೆ. ಶಬ್ದ ಶಬ್ದಕ್ಕೆ ಅರ್ಥದ ಸಂಬಂಧವಿಲ್ಲದ ಇಂಥ ರಚನೆಗಳನ್ನು ಕವಿತೆಯೆಂದು ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ.

ಸುಳ್ಳಿನಾಚೆಯ ಸತ್ಯ : ಭಾಗ್ಯ

ಸ್ತ್ರೀಯಾಗಿ ತಮಗೆ ಸಹಜವಾದ ಭಾವನೆಗಳಿಗೆ ಶಬ್ದಶರೀರವನ್ನು ಕೊಡಲು ಪ್ರಯತ್ನಿಸುವ ಭಾಗ್ಯ ಅವರ ಈ ಸಂಗ್ರಹದಲ್ಲಿ ಇಪ್ಪತ್ತೈದು ಕವಿತೆಗಳಿವೆ. ಇಲ್ಲಿನ ಎಲ್ಲ ರಚನೆಗಳೂ ಸ್ವಚ್ಛಂದ ಛಂದಸ್ಸಿನಲ್ಲಿವೆ. 'ಕಂಬನಿ' ನಾನು-ನೀನು' 'ಬಳುವಳಿ' 'ಅಕ್ಕಮಹಾದೇವಿ' 'ಸ್ವಾತಂತ್ರ್ಯ' 'ಭಿನ್ನತೆ' 'ಜನಿಸಿದ ಮಗುವಿಗೆ' ಮುಂತಾದ ಕವಿತೆಗಳಲ್ಲಿ ತಮ್ಮನ್ನು ತಾವು ಕಂಡುಕೊಳ್ಳುವ ಸಿದ್ಧತೆಗಳು ಕಾಣಿಸುತ್ತವೆ.

ಸ್ವಂತ ಧಾಟಿ ಧೋರಣೆಗಳನ್ನು ರೂಪಿಸಿಕೊಳ್ಳುತ್ತ, ವಿವಿಧವಾದ ಲಯಗಳನ್ನೂ ಮತ್ತು ಛಂದೋಬಂಧಗಳನ್ನು ರೂಢಿಸಿಕೊಳ್ಳುತ್ತ ಹೋದಹಾಗೆ ಈ ಕವಯಿತ್ರಿ ವಿಶಿಷ್ಟ ಕಾಣಿಕೆಗಳನ್ನು ಕೊಡಬಲ್ಲರು ಎನಿಸುತ್ತದೆ. ಎರಡನೆಯ ಸಂಕಲನದಲ್ಲಿ ಭಾಗ್ಯ ಅವರ ಆಸಕ್ತಿಗಳೂ ಮತ್ತು ಭಾಷೆಯ ಮೇಲಿನ ಪ್ರಭುತ್ವವೂ ಮೊದಲನ ಸಂಕಲನದಲ್ಲಿ ಕಾಣಿಸುವುದಕ್ಕಿಂತ ಹೆಚ್ಚಾಗಿ ಬೆಳೆದಿರುವುದು ಆಶಾದಾಯಕವಾಗಿದೆ.

ತೊಗಲು ಗೊಂಬೆಯ ಆತ್ಮಕಥೆ : ಸ. ಉಷಾ

ಹದಿನೈದು ಕವನಗಳ ಈ ಸಂಕಲನದಲ್ಲಿ 'ಹುತ್ತದೊಳಗೆ' ಮತ್ತು 'ಬಂದಳಿಕೆಗಳು' ಗಮನಾರ್ಹವಾಗಿವೆ. ಕನಸಿನ ಲೋಕಕ್ಕೆ ಪ್ರವೇಶಿಸಿ ಹಾವಿನ ದರ್ಬಾರಿನಲ್ಲಿ ಕಳೆದ ಕಾಲವನ್ನು ನೆನಪು ಮಾಡಿಕೊಳ್ಳುವ 'ಹುತ್ತದೊಳಗೆ' ಗಟ್ಟಿಯಾದ ವಿವರಗಳ ಮೂಲಕ ಅನುಭವವೊಂದನ್ನು ಪುನಃ ಸೃಷ್ಟಿಸುತ್ತದೆ. ತೋಟದ ಮಾಲಿ ಬಂದಳಿಕೆಯನ್ನು

ಸವರಿದಾಗ, ಮರ ಹೊಸ ಚಿಗುರಿಗಾಗಿ ಕಾಯುತ್ತಿರುವಾಗ, ಮತ್ತೆ ಬಂದಳಿಕೆಗಳು ಕಾಯುತ್ತಿವೆ ಎನ್ನುವ ನಿಷ್ಠುರ ಸತ್ಯವನ್ನು 'ಬಂದಳಿಕೆಗಳು' ಎನ್ನುವ ಕವನದಲ್ಲಿ ಈ ಕವಿಯಿತ್ರಿ ಕಾಣುತ್ತಾರೆ.

ಈ ಸಂಗ್ರಹದಲ್ಲಿ 'ಆಲನೆಟ್ಟಜ್ಜನಿಗೆ' ಎನ್ನುವ ಕವಿತೆಯೊಂದಿದೆ. ಈ ಪುಸ್ತಕಕ್ಕೆ ಮುನ್ನುಡಿ ಬರೆದಿರುವ ಎಚ್. ಎಂ. ಚನ್ನಯ್ಯನವರು "ಆಲ ನೆಟ್ಟಜ್ಜನಿಗೆ' ಎಂಬ ಕವನ ಅಡಿಗರ ಮತ್ತು ಅಡಿಗ ಸಂಪ್ರದಾಯದ ವಿರೋಧಾಭಾಸಗಳ ದ್ವಂದ್ವಗಳ ಸಮರ್ಥಟೀಕೆಯಾಗಿದೆ ; ಪ್ರತಿಭಟನೆಯಾಗಿ, ಜನ್ಮತಾಳಿದ ನವ್ಯಕಾವ್ಯ ಹೇಗೆ ತನ್ನ ದ್ವಂದ್ವ ನಿಲುವಿನಿಂದ ವಸ್ತು ಸ್ಥಿತಿಯ ಪರವಾದದ್ದಾಯಿತು, ಯಾವುದನ್ನು ವಿರೋದಿ ಸಲು ಅದು ಹೊರಟಿತೊ ಅದರೊಂದಿಗೇ ಹೇಗೆ ಶಾಮೀಲಾಯಿತು, ಎನ್ನುವುದರ ವಿವೇಚನೆ ಅಲ್ಲಿದೆ...ಈ ಕವನದಲ್ಲಿ ಅಡಿಗರ ಕಾವ್ಯದಿಂದಲೇ ಎತ್ತಿಕೊಂಡ ಸಾಲು ಗಳನ್ನು ವ್ಯಂಗ್ಯಕ್ಕೆ ಬಳಸಿಕೊಂಡಿರುವುದು, ಕವನದ ಉದ್ದೇಶಿತ ಪರಿಣಾಮಕ್ಕೆ ಪೂರಕವಾಗಿ ಬಂದಿದೆ" ಎಂದು ಹೇಳಿದ್ದಾರೆ. 'ಆಲ ನೆಟ್ಟಜ್ಜನಿಗೆ' ಪದ್ಯದಲ್ಲಿ

ಆಲೂಗೆಡ್ಡೆ ತಿಂದು ಕೊರಳೆಲ್ಲ ಕಸ್ತೂರಿಯಾಗುವುದೆಂಬ ಭ್ರಮೆಹೊತ್ತವರೇ
ನಾಗಕನ್ಯೆಯರ ನಾಗಬಂಧದಲ್ಲಿ ಸ್ನಾನದ ಕ್ರಾಂತಿಗೆ ಕನವರಿಸಿದವರೇ
ಭೂತದ ಪ್ರಪಂಚದಲ್ಲಿ ಕಳೆದು ಹೋದವರೇ

ಎನ್ನುವ ಸಾಲುಗಳಲ್ಲಿ ಅಡಿಗರ ಸಾಲುಗಳನ್ನು ವಿನಾಕಾರಣ ವ್ಯಂಗ್ಯಕ್ಕೆ ತಿರುಗಿಸು ವುದು ಆರೋಗ್ಯಕರವಾದ ಧೋರಣೆಯಲ್ಲ.

ಮುಪ್ಪಿಲ್ಲ ನೆನಪುಗಳಿಗೆ : ಎಂ. ಗಂಗಾಧರ ಭಟ್ಟ

ಮೂವತ್ತು ಕವಿತೆಗಳ ಈ ಸಂಕಲನದಲ್ಲಿ ಒಂಭತ್ತು ಹನಿಕವನಗಳಿವೆ. ಮುನ್ನುಡಿ ಯಲ್ಲಿ ಸುಬ್ರಾಯ ಚೊಕ್ಕಾಡಿಯವರು ಹೇಳುವಂತೆ ಈ ಕವಿಯ 'ಸ್ವರ ಗಟ್ಟಿಯಾಗಿದೆ ಹೇಳುವುದಕ್ಕೆ ಖಚಿತತೆ ಬಂದಿದೆ, ಲಯದ ಮೇಲೆ ಯೋಗ್ಯ ಹಿಡಿತ ಪ್ರಾಪ್ತವಾಗಿದೆ' ಇವು ಅತ್ಯುತ್ತಮ ಕೃತಿಗಳಲ್ಲ, ಆದರೆ ಒಂದಿಷ್ಟು ಸಂತೋಷವನ್ನು ಕೊಡಬಲ್ಲವು. ಎನ್ನುವುದನ್ನೂ ಚೊಕ್ಕಾಡಿಯವರು ಗುರ್ತಿಸಿದ್ದಾರೆ. ಈ ಕವಿತೆಗಳನ್ನು ಓದಿದಾಗ ಈ ಕವಿಯ ಮುಂದಿನ ಕೃತಿಗಳನ್ನು ಎದುರು ನೋಡಬೇಕೆನ್ನಿಸುತ್ತೆ.

ಸಂವಾದ : ಪ್ರಭುಸ್ವಾಮಿಮಠ

ಈ ಸಂಗ್ರಹದಲ್ಲಿ ಹದಿನಾಲ್ಕು ಪದ್ಯಗಳಿವೆ. ವಚನಕಾವ್ಯ ಮತ್ತು ಜಾನಪದ ಕಾವ್ಯದ ಉಪಾಯಗಳನ್ನು ರೂಢಿಸಿಕೊಳ್ಳುವ ಪ್ರಯತ್ನವನ್ನು ಈ ಸಂಗ್ರಹದಲ್ಲಿ ಕಾಣುತ್ತೇವೆ. "ಸಹಜ ಬೆಳಕಿಗೆ ಮೈಯೊಡ್ಡದೆ ಸಂವಾದ ಹೇಗೆ ಸಾಧ್ಯ ?" ಎಂದು ಕೇಳುವ ಈ ಕವಿ ಆ ದಿಕ್ಕಿನಲ್ಲಿ ಹೆಜ್ಜೆಯಿಡುತ್ತಿದ್ದಾರೆ ಎನ್ನುವುದು ಈ ಸಂಕಲನದಲ್ಲಿ ಸ್ಪಷ್ಟವಾಗುತ್ತದೆ. ಇದಕ್ಕೆ ಟಿ. ಪಿ. ಅಶೋಕರ ಮುನ್ನುಡಿಯಿದೆ.

ಕಾದು ಅರಳು ; ಎನ್. ಆರ್. ನಾಯಕ

ಇದು ಈ ಕವಿಯ ಪ್ರಥಮ ಸಂಗ್ರಹ. 1956 ರಿಂದ 1979ರವರೆಗೆ ಬರೆದ ಇಪ್ಪತ್ತೇಳು ಕವನಗಳನ್ನು ಇಲ್ಲಿ ಆರಿಸಿಕೊಟ್ಟಿದ್ದಾರೆ. 'ಹಾಲಕ್ಕಿ' 'ನುಡಿಯೋದ್ ಕನ್ನಡ ಮಂತ್ರ' 'ನಿರಾಶೆ' ಇಂತಹ ಕವಿತೆಗಳಲ್ಲಿ ಈ ಕವಿ ಗ್ರಾಮ್ಯವನ್ನು ಬಳಸಿದ್ದಾರೆ. ಈ ಸಂಗ್ರಹದಲ್ಲಿ ಬೇರೆ ಬೇರೆಯ ಲಯಗಳನ್ನುಳ್ಳ ಪದ್ಯಬಂಧಗಳನ್ನು ಬಳಸಿದ್ದಾರೆ. 'ಕಾದು ಅರಳು' ಎನ್ನುವ ಅರ್ಥಪೂರ್ಣವಾದ ಶೀರ್ಷಿಕೆಯನ್ನು ಕೊಟ್ಟಿರುವ ಈ ಕವಿ ಮಿಕ್ಕಕವಿಗಳ ಪ್ರಯೋಗಗಳನ್ನು ಗಮನಿಸಿದಂತೆ ಕಾಣುವುದಿಲ್ಲ. ಸಮಕಾಲೀನ ಕವಿ ಗಳೊಂದಿಗೆ, ಕನ್ನಡ ಕಾವ್ಯ ಸಂಪ್ರದಾಯವನ್ನು ನಿರ್ಮಿಸಿದ ಕವಿಗಳೊಂದಿಗೆ ಈ ಕವಿ ಸಂವಾದದಲ್ಲಿ ತೊಡಗಿದಾಗ ಸಫಲತೆಯನ್ನು ಕಾಣಬಹುದು.

ಅನಾಮಿಕರು ; ಜಿ. ವಿಜಯಕುಮಾರ್

ಇದು ವಿಜಯಕುಮಾರ್ ಅವರ ಮೊದಲ ಸಂಕಲನ. ಇದಕ್ಕೆ ಮುನ್ನುಡಿ ಬರೆದಿರುವ ಎನ್. ಎಸ್. ಲಕ್ಷ್ಮೀನಾರಾಯಣಭಟ್ಟರು ಹೇಳುವ ಹಾಗೆ ಇಲ್ಲಿ "ಪುಟ್ಟ ಪುಟ್ಟ ವಾಕ್ಯಗಳ ಲಯಬದ್ಧ ಮರು ಹೂಡಿಕೆಯಿಂದಾಗಿ ಹುಟ್ಟುವ ವಾಕ್ಯಲಯ, ಸಾಲಿನ ಕಡೆಯಲ್ಲಿ ಮಾತ್ರವಲ್ಲದೆ ನಡುನಡುವೆ ಯೋಗ್ಯ ಅಂತರದಲ್ಲಿ ಹುಟ್ಟಿಕೊಳ್ಳುವ ಒಳಪ್ರಾಸಗಳು" ಈ ಕವನಗಳ ಲಕ್ಷಣಗಳಾಗಿವೆ. ಮೊದಲ ಪ್ರಯತ್ನಗಳಾಗಿ ಈ ಕವಿತೆ ಗಳು ಮೆಚ್ಚುವ ಹಾಗಿವೆ.

ಒಗ್ಗರಣೆ ; ವಿಡಂಬಾರಿ

ಐನೂರು ಚುಟಕಗಳ ಈ ಸಂಗ್ರಹ "ಕನ್ನಡದ ಮೂರನೇ ಇಯತ್ತೆ"ಯವರೆಗೆ ಮಾತ್ರ ಕಲಿತವರು ಬರೆದದ್ದು. ಈ ಚುಟಕಗಳ ಬಗ್ಗೆ ಪ್ರಸ್ತಾವನೆಯಲ್ಲಿ ಅವರು ಹೇಳುವ ಮಾತು ಗಮನಾರ್ಹವಾಗಿವೆ :

ಚೌಪದಿಗೆ ಜನಕನೇ ದಿನಕರನು ನೋಡಿ
ಬರೆಯುವೆನು ದಿನಕರನ ಸ್ಮರಣೆಯನು ಮಾಡಿ
ಆದರೂ ಇನ್ನೊಂದು ಮಾತುಂಟು ಕೇಳಿ
ತುಂಬಿಹೆನು ಇದರೊಳಗೆ ನನ್ನದೇ ಗಾಳಿ

ಈ ಮಾತಿನಲ್ಲಿ ಕಂಡು ಬರುವ ಸ್ವಂತಿಕೆಯ ಅರಿವು ಮತ್ತು ಸ್ವಾಭಿಮಾನ ಈ ಚುಟಕ ಗಳಿಗೆ ಹಿಂದೆ ಕೆಲಸ ಮಾಡುತ್ತಿವೆ. ಈ ಒಂದು ಪ್ರಕಾರದಲ್ಲೆ ತಮ್ಮೆಲ್ಲ ಭಾವನೆಗಳಿಗೂ ಅಭಿವ್ಯಕ್ತಿ ಕೊಡುವುದಕ್ಕೆ ಈ ಕವಿ ಇಲ್ಲಿ ಪ್ರಯತ್ನಿಸಿದ್ದಾರೆ. ತಮ್ಮ ಊರಿನ ಪ್ರೇಮ ವನ್ನು ಹೇಳಿಕೊಳ್ಳುವ ಈ ಚುಟಕವನ್ನು ನೋಡಿ :

ಓ ನನ್ನ ಅತಿಮಮತೆ ಇಡುಗುಂಜಿ ಊರೆ
ಉಪಾಯ ಬೇರಿಲ್ಲ ನಾನಾದೆ ದೂರೆ
ನಾ ಹುಟ್ಟಿ ಆಡಿರುವ ನಿನ್ನನ್ನು ಬಿಟ್ಟೆ
ಏನು ಮಾಡುವ ಹೇಳು ಸುಡುಗಾಡು ಹೊಟ್ಟೆ

ಹೊಟ್ಟೆಯ ಪಾಡಿಗಾಗಿ ಹುಟ್ಟಿದ ಊರನ್ನು ಬಿಡಬೇಕಾದ ನೋವನ್ನು ಇಲ್ಲಿ ತೋಡಿಕೊಂಡಿದ್ದಾರೆ. ತಾವು ಚುಟುಕಗಳನ್ನು ಬರೆಯುವುದಕ್ಕೆ ಅವರು ಕೊಡುವ ಕಾರಣ ಇದು :

ಕವಿಯೆಂದು ಕರೆಯದಿರಿ ಮಹನೀಯರೆಲ್ಲ
ಆ ಮಹಾಯೋಗ್ಯತೆಯ ನಾನು ಪಡೆದಿಲ್ಲ
ನನ್ನ ಮನ ಕುದಿಕುದಿದು ಸಿಡಿದುಕ್ಕೆ ಬಂದು
ಚೆಲ್ಲುತಿದೆ ಆಗೀಗ ಒಂದೊಂದು ಹುಂಡು

ಈಚೆ ದಡದಲಿ ನಿಂತು : ಟಿ. ಜಿ. ಭಟ್ಟ

ಟಿ. ಜಿ. ಭಟ್ಟರು ಕವಿ ಎನ್ನುವುದಕ್ಕೆ 'ಹ್ಯಾಂಗೆ ಹೇಳಲೆ?' ಎನ್ನುವ ಒಂದು ಕವನ ಸಾಕು :

ನನ್ನ ಗತಿ ನಿನಗೆ ಸಖಿ ಹ್ಯಾಂಗೆ ಹೇಳಲೆ?
ಹೇಳದೆ ಹ್ಯಾಂಗೆ ನಾನಿರಲೆ?
ಮನದ ಬಯಕೆ ಭಯಕೆ ಸಿಕ್ಕಿ
ಬಸಿವ ನನ್ನ ಹಸಿರು ಉಸಿರ
ಹ್ಯಾಂಗೆ ಹಿಡಿಯಲೆ ಸಖೀ ಹ್ಯಾಂಗೆ ಹಿಡಿಯಲೆ?
...................................
ಶಬ್ದ ಸತ್ತ ಕತ್ತಲಲ್ಲಿ
ಹತ್ತಿ ಬಂದ ಕುದುರೆ ಏರಿ
ಧೀರ ತೆರೆದ ದಿವ್ಯಲೋಕ ಎಷ್ಟು ಚಂದವೆ!
ಹುತ್ತ ಹೊಕ್ಕ ಹೊಳೆವ ಹಾವು
ಮೀರಿ ಕ್ಷಣದ ಚಿಂತೆ ಸಾವು
ಬಿಟ್ಟ ಉಸಿರೆ ಸ್ವರ್ಗ ! ಅಮೃತ!! ಎಲ್ಲ ಸ್ವಪ್ನವೆ?

ಐದು ಚರಣಗಳ ಇಡೀ ಕವಿತೆ ಪ್ರತಿಯೊಂದು ಪದದ, ಪ್ರತಿಮೆಯ ಆಯ್ಕೆಯಲ್ಲಿ ಸಂಪೂರ್ಣವಾಗಿ ಯಶಸ್ವಿಯಾಗಿಲ್ಲವಾದರೂ ಶಬ್ದದ ನಾದಶಕ್ತಿಯನ್ನು, ಉದ್ದೀಪನಾ ಸಾಮರ್ಥ್ಯವನ್ನು ಇಷ್ಟು ಪರಿಣತಿಯಿಂದ ಹಿಡಿಯಬಲ್ಲ ಈ ಕವಿಯಿಂದ ನಿರೀಕ್ಷಿಸಬಹುದಾದ್ದು ಬಹಳಷ್ಟಿದೆ.

ಹಣೇಬಾರದ ಹಾಡು : ಶಿವಶರಣ ಜಾವಳಿ

ನಮ್ಮ ಸುತ್ತಲೂ ಇರುವ ಜಾತೀಯತೆ, ಲಂಚಗುಳಿತನ, ಕ್ರೌರ್ಯ ಮತ್ತು ಬೂಟಾಟಿಕೆ ಇಲ್ಲಿನ ಮುಖ್ಯ ವಸ್ತುಗಳಾಗಿವೆ.

ಈ ಸಂಗ್ರಹದ ಕವಿತೆಗಳು ಮೂರು ವಿಭಾಗಗಳಲ್ಲಿ ವಿಂಗಡನೆಗೊಂಡಿವೆ. ಮೊದಲ ಭಾಗದ ಪದ್ಯಗಳು ಆರು. ಅವು ಮುಖ್ಯವಾಗಿ ಸುತ್ತಣ ಪರಿಸರವನ್ನು ಕುರಿತವು. ವಿಷಾದ-ವಿಡಂಬನೆಯೇ ಅವುಗಳ ಮುಖ್ಯ ಧ್ವನಿಯಾಗಿದೆ. ಅಲ್ಲಲ್ಲಿ ಸಮ ಕಾಲೀನ ಕವಿಗಳ ಆಲೋಚನೆಯ ಅನುಕರಣವೂ ಇವೆ. ಎರಡನೆ ಭಾಗದಲ್ಲಿ ಎಂಟು ಮಿನಿ ಕವನಗಳಿವೆ. ಇವೂ ಪರಿಸರಕ್ಕೆ ತೋರಿದ ಪ್ರತಿಕ್ರಿಯೆಗಳಾಗಿವೆ. ಮೂರನೆ ಭಾಗದಲ್ಲಿ ಮತ್ತೆ ಏಳು ಪದ್ಯಗಳಿವೆ. ಇವುಗಳು ಭ್ರಷ್ಟಾಚಾರವನ್ನು ಕುರಿತವು. ಈ ಮೂರೂ ವಿಭಾಗಗಳನ್ನೂ ಹೀಗೆ ಮಾಡಿಕೊಂಡಿರುವುದರ ಔಚಿತ್ಯವೇನೋ ತಿಳಿಯದು. ಅಂತೂ ಸಾಮಾಜಿಕ ಪ್ರಜ್ಞೆಯ ಕವಿತೆ ಸಮೃದ್ಧವಾದ ಹಾಗೆ, ಎಷ್ಟೋ ವೇಳೆ ಕವಿತ, ಕೇವಲ ಪ್ರತಿಕ್ರಿಯೆಗಳ ಹಂತದಲ್ಲೇ ನಿಲ್ಲುತ್ತ, ಉಪನ್ಯಾಸದ ಧಾಟಿ ಹಿಡಿಯಬಹುದೆಂಬುದಕ್ಕೆ ಈ ಸಂಗ್ರಹದಲ್ಲಿ ತಕ್ಕಷ್ಟು ನಿದರ್ಶನಗಳಿವೆ.

ಕೊರಗ (ಕೆಲವು ಕವನಗಳು) ; ಕಯ್ಯಾರ ಕಿಞ್ಞಣ್ಣ ರೈ

ನಶಿಸಿ ಹೋಗುತ್ತಿರುವ 'ಕೊರಗ' ಜನಾಂಗದ ಪ್ರತಿನಿಧಿಯೊಬ್ಬನನ್ನು ಮೊದಲನೆ ಕವಿತೆ ಚಿತ್ರಿಸುತ್ತದೆ. ಮಿಕ್ಕ ಇಪ್ಪತ್ತು ಕವಿತೆಗಳಲ್ಲಿ ನವೋದಯ ಭಾವಗೀತೆಗಳನ್ನು ನೆನಪಿಗೆ ತರುವ ಛಂದೋವಿಲಾಸವಿದೆ. ಕಾವ್ಯರಚನೆಯ ಬಗ್ಗೆ ಈ ಕವಿಯ ಧೋರಣೆ ಯನ್ನು 'ಗೆರೆ ತಪ್ಪದಿರೆ ಬರೆವೆ' ಎನ್ನುವ ಕವಿತೆ ಹೇಳುತ್ತದೆ :

ನೇಗಿಲನ ಸಮಕೆ ಲೇಖನಿ ಹಿಡಿದ ಕೈಯಲ್ಲಿ
ಗೆರೆ ತಪ್ಪದಿರೆ ಬರೆವೆ ಭೂಪಟದಿ, ಪುಟದಿ ;
ತಲೆಯ ತೂಗಿತು ತೆನೆಯ ಭಾರದಲಿ ನವಶಾಲಿ,
ಅರಳಿ ಬಂದಿತೊ ಕವಿತೆ, ಹೊಸತು ಸಂಪುಟದಿ !

ಮೆಚ್ಚುಗೆಯೊ ಚುಚ್ಚುಗೆಯೊ ಬಂದದ್ದು ಬರಲಿ
ನೇಗಿಲಿನ ಜತೆಗೆ ಲೇಖನಿ ಕಯ್ಯೊಳಿರಲಿ !

ರೈ ಅವರು ನವೋದಯ ಕಾಲದ, ಕಲ್ಪನಾ ವಿಲಾಸ ಹಾಗೂ ಛಂದೋಗತಿಗಳನ್ನು ಇಲ್ಲಿ ಮುಂದುವರಿಸಿಕೊಂಡು ಬಂದಿದ್ದಾರೆ.

ಗಾಂಧಿ ಗಾಂಧೀಜಿ ; ಬಾಲಚಂದ್ರ ಬಡಿಗೇರ

ಈ ಸಂಗ್ರಹದಲ್ಲಿ ಇಪ್ಪತ್ತೈದು ಕವಿತೆಗಳಿವೆ. ಗದ್ಯದಲ್ಲಿ ಹೇಳಬಹುದಾದ್ದನ್ನು ಗದ್ಯದಲ್ಲೇ ಹೇಳುವಂತೆ ಹೇಳಿ ಸಾಲುಗಳನ್ನು ಒಡೆದಿಡುವ ಇವರ ರೀತಿಗೆ ಉದಾ

ಹರಣೆಯಾಗಿ 'ಈ ಯುಗದ ಹೆಣ್ಣುಗಳು' ಎನ್ನುವ ಕವಿತೆಯ ಪ್ರಾರಂಭವನ್ನು ನೋಡಬಹುದು :

"ಹೆಣ್ಣುಗಳು"
ಅಯ್ಯೋ ಹೆಣ್ಣುಗಳಲ್ಲ
ಇವು ಪಿಶಾಚಿಗಳು
ಏಳು ಪಟ್ಟು ಕಾಮಶಕ್ತಿಯನ್ನು
ಹೊಂದಿದ ಪೆಡಂಭೂತಗಳು
ಇವರನ್ನು ಕಂಡಾಗ ಭಯ
ಪಾತಾಳಕ್ಕಿಳಿದಷ್ಟು ಭಯ

ತರಂಗ ; ಸಂಜೀವ ಶೆಟ್ಟಿ

ಮುಂಬಯಿ ನಗರದಲ್ಲಿ ಕಾವ್ಯವನ್ನು ರಚಿಸುತ್ತಿರುವ ಸಂಜೀವ ಶೆಟ್ಟರ ಬರವಣಿಗೆಗೆ ಮಾದರಿಯಾಗಿ 'ಕಾಲ ಮಹಿಮೆ' ಎನ್ನುವ ಪದ್ಯದ ಈ ಸಾಲುಗಳನ್ನು ನೋಡಿ :

ಕೇಶಕೆ ಕತ್ತರಿ ಕುಸುಮಕ್ಕೆ ಮುಕ್ತಿ ನಾಸಿಕ
ಕಂಠಕರ್ಣ ಬೆರಳಿಗೆ ಆಭರಣಕೆ ವಿರಕ್ತಿ
ಸೀರೆಗೆ ಅರ್ಧಪತನ ತುಂಡುಲಂಗಕ್ಕೆ ಬಾಲ್ಯ
ನವಚೇತನ ಪುನರುಜ್ಜೀವನವು ಸ್ತನನಾಭಿ

ಆಧುನಿಕತೆಯಿಂದ ನಮ್ಮ ಮಹಿಳೆಯರ ಸೌಂದರ್ಯಕ್ಕೆ ಯಾವ ಗತಿ ಬಂದಿದೆಯೆಂದು ಹೇಳುವ ಪ್ರಯತ್ನ ಈ ಸಾಲುಗಳಲ್ಲಿದೆ.

ನೋವು ನಲಿವು : ಚಂದ್ರಶೇಖರ ಬ. ತೇಲಿ

ತೇಲಿಯವರ ಸಂಗ್ರಹದಲ್ಲಿ ಉಪದೇಶದ ಅಂಶ ಪ್ರಧಾನವಾಗಿದೆ :

ಹಗಲು ಇರುಳು ಎಂಬ ಈ ಎರಡು
ಕಾಲ ಚಕ್ರಗಳು ಉರುಳುತ್ತಿರುವಾಗ
ನವಯುವಕರಿರಾ, ಕೋಗಿಲೆಯಂತೆ ಕೂಗಿರಿ
ಕಪಿಗಳಾಗಿ ಅಲೆದಾಡದಿರಿ

ಮಿಲನ ಮಹೋತ್ಸವ : ಸದ್ಯೋಜಾತ ಮೂರ್ತಿ

ಇದನ್ನು ಪ್ರಣಯೋಪನಿಷತ್ತು ಎಂದು ಈ ಕವಿ ಕರೆದಿದ್ದಾರೆ. ಈ ಉಪ ನಿಷತ್ತಿನ ಒಂದು ಸ್ಯಾಂಪಲ್ ಹೀಗಿದೆ :

ಹಣೆ ಹೆರಳು ಹುಬ್ಬು ಕಣ್ಣು
ಗಲ್ಲ ಕೆನ್ನೆ ಪಯೋಧರ
ಊರು-ನಿನ್ನ ಪ್ರೇಮಾಂಗಗಳು

ಓ ನನ್ನ ಪ್ರೇಮಾಂಗನೆ !
ನಿನಗೀವೆ ಅವುಗಳಿಗೆ
ನನ್ನ ತುಟಿಯಲಿ ತುತ್ತು
ಅದೇ ಮುತ್ತು !!

ನಾವು ಸರ್ವ ಸ್ವತಂತ್ರರು : ಎಂ. ಡಿ. ಗೋಗೇರಿ

ಇದು ಈ ಕವಿಯ ಐದನೆಯ ಕವನ ಸಂಗ್ರಹ. "ಇಲ್ಲಿಯವರೆಗೆ ರಮ್ಯ ಗೀತೆಗಳನ್ನು ಬರೆದು ಈಗ ತಮ್ಮ ಕೈಯಲ್ಲಿ ನವ್ಯಗೀತೆಗಳನ್ನು ಇರಿಸಿದ್ದೇವೆ" ಎಂದು ಈ ಕವಿ ಹೇಳಿದ್ದಾರೆ. ಇದರಲ್ಲಿ ಪ್ರೇಮ ಕವನಗಳಿವೆ, ರಾಜಕೀಯ ಅಣಕಗಳಿವೆ, ರೈತರ ಬಗ್ಗೆ, ಪೋಲೀಸರ ಬಗ್ಗೆ, ಹಾರುವರ ಬಗ್ಗೆಯೂ ಪದ್ಯಗಳಿವೆ.

ವಚನ ಚಿಂತನ : ಎಂ. ಎ. ಜಯಚಂದ್ರ

ಸಾಮಾನ್ಯವಾಗಿ ವಚನಗಳಲ್ಲಿ ದೈವಭಕ್ತಿ, ಅಂತರಂಗ ವೀಕ್ಷಣೆ, ಸಾಮಾಜಿಕ ವಿಮರ್ಶೆ ಮುಖ್ಯವಾಗಿದ್ದರೆ, ಈ ಸಂಗ್ರಹದಲ್ಲಿ ಈ ಪ್ರಕಾರವನ್ನು ಪ್ರೇಮದ ಭಾವನೆಯನ್ನೂ ಹೇಳಲಿಕ್ಕೆ ಉಪಯೋಗಿಸಿರುವುದು ಇಲ್ಲಿಯ ವೈಶಿಷ್ಟ್ಯ:

ಅನ್ನ ಅವಳಾಗಬೇಕು ; ಉಸಿರವಳಾಗಬೇಕು
ಮೈಗೆ ರಮಿಸುವ ತಂಗಾಳಿ ಅವಳಾಗಬೇಕು
ಕವಿ ತುಂಬುವ ಸವಿದನಿ ಅವಳಾಗಬೇಕು
ಪ್ರೇಮ ಕೂಪ ಮಂಡೂಕ ನಾನಾಗಬೇಕು—ಮನ್ಮನೋನಾಥ

ಕಳಕೊಂಡವರು : ಶ್ರೀಕೃಷ್ಣ ಚೆನ್ನಂಗೋಡ್

1980ರ ಮುದ್ದಣ ಸ್ಮಾರಕ ಬಹುಮಾನವನ್ನು ಪಡೆದ ಈ ಕೃತಿಯಲ್ಲಿ ಇಪ್ಪತ್ತು ಪದ್ಯಗಳಿವೆ. ಇಲ್ಲಿ ನವ್ಯಕಾವ್ಯ ರಮ್ಯಕಾವ್ಯದ ಬೇರೆ ಬೇರೆ ರೀತಿಯ ಪ್ರಯೋಗಗಳಿವೆ. ಖಚಿತವಾದ ಧಾಟಿ ಧೋರಣೆಗಳು ಇಲ್ಲಿ ಕಾಣುವುದಿಲ್ಲ.

ಕಾವ್ಯೋತ್ಸವ : ಹಾ.ಮಾ. ನಾಯಕ (ಸಂಪಾದಕ)

ಜಗನ್ಮೋಹನ ಅರಮನೆಯ ಸಭಾಂಗಣದಲ್ಲಿ, ದಸರಾ ಉತ್ಸವದಲ್ಲಿ ಇಪ್ಪತ್ತು ಜನ ಕನ್ನಡ ಕವಿಗಳು ಮತ್ತು ಸಂಸ್ಕೃತ, ತೆಲುಗು, ಉರ್ದು, ಮತ್ತು ಕೊಂಕಣಿಯಿಂದ ನಾಲ್ಕು ಕವಿಗಳು ಓದಿದ ಕವಿತೆಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ. ಪುಸ್ತಕ ಅಚ್ಚುಕಟ್ಟಾಗಿ ಮುದ್ರಣವಾಗಿದೆ. ಅಬ್ದುಲ್ ಮಜೀದ್ ಖಾನ್, ಕೆ. ವಿ. ತಿರುಮಲೇಶ್, ದೇಶಪಾಂಡೆ ಸುಬ್ಬರಾಯ, ವಿ. ಆರ್. ಪ್ರತಿಭಾ, ರಮಜಾನದರ್ಗಾ, ಲಕ್ಷ್ಮೀನಾರಾಯಣಭಟ್ಟ, ಎಚ್. ಎಸ್. ವೆಂಕಟೇಶಮೂರ್ತಿ ಮತ್ತು ಜಿ. ಎಸ್. ಶಿವರುದ್ರಪ್ಪನವರ ಕವಿತೆಗಳು ಓದುಗರನ್ನು ಆಕರ್ಷಿಸುತ್ತವೆ.

ಗರಿ (ಅಂಕಣ ಕಾವ್ಯಾಂಕ 1981) : (ಸಂಪಾದಕರು-ಅಂಕಣ ಕಾವ್ಯ ಬಳಗ)

ಈ ಸಂಗ್ರಹದಲ್ಲಿ ನಾಲ್ಕು ಭಾಗಗಳಿವೆ. ಮೊದಲ ಭಾಗದಲ್ಲಿ ಶಿಶುನಾಳ ಶರೀಫ, ಸಪ್ಪಣ್ಣ, ಮಧುರ, ಚನ್ನ, ಘೂಲಾ ಹಲಸಂಗಿ, ಪೇಜಾವರ ಸದಾಶಿವರಾಯ, ಶಿವೇಶ್ವರ ದೊಡ್ಡಮನಿ, ಯರ್ಮುಂಜ ರಾಮಚಂದ್ರ, ಪಂಜೆ ಮಂಗೇಶರಾವ್ ಮತ್ತು ಎಂ. ಆರ್. ಶ್ರೀನಿವಾಸಮೂರ್ತಿಯವರ ಕವಿತೆಗಳಿವೆ. ಎರಡನೆ ಭಾಗದಲ್ಲಿ ಒಂಭತ್ತು ಅನುವಾದಿತ ಕವಿತೆಗಳು ಮತ್ತು ಮೂರನೆ ಭಾಗದಲ್ಲಿ ಇಪತ್ತು ಕನ್ನಡ ಕವಿತೆಗಳೂ ಇವೆ. ಜಿ. ಎಸ್. ಶಿವರುದ್ರಪ್ಪ, ಲಕ್ಷ್ಮಣರಾವ್, ತಿರುಮಲೇಶ್, ಗೋಪಾಲಕೃಷ್ಣ ಅಡಿಗ ಮೊದಲಾದವರ ಕವಿತೆಗಳನ್ನು ಇಲ್ಲಿ ಪ್ರತಿನಿಧಿಸಲಾಗಿದೆ.

ಕನ್ನಡ ಪ್ರತಿಭಟನೆ ಕಾವ್ಯ : ಸಿ. ವೀರಣ್ಣ (ಸಂಪಾದಕ)

ಈ ಸಂಗ್ರಹದಲ್ಲಿ ನೂರಾರು ಕವಿಗಳ ರಚನೆಗಳಿವೆ. ಇವುಗಳನ್ನು ಪ್ರತಿಭಟನೆ ಕಾವ್ಯವೆಂದು ಸಂಪಾದಕರು ಹೆಸರಿಟ್ಟಿದ್ದಾರೆ. ಅವರ ನಲವತ್ತಾರು ಪುಟಗಳ ದೀರ್ಘ ವಾದ ಪ್ರಸ್ತಾಪನೆಯಲ್ಲಿ ಎಲ್ಲಿಯೂ 'ಪ್ರತಿಭಟನೆ' ಎಂದರೆ ಏನು ಅರ್ಥವಿಟ್ಟುಕೊಂಡಿ ದ್ದಾರೆ ಎನ್ನುವುದನ್ನು ವಿವರಿಸಿಲ್ಲ. ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದಿರುವ ಹಂಪ ನಾಗರಾಜಯ್ಯನವರು ಮಾತ್ರ "ಪ್ರತಿಭಟನೆ ಕಾವ್ಯ ಎಂದರೆ ಕೇವಲ ಧಿಕ್ಕಾರ ಹಾಕುವ ಪದ್ಯಗಳು ಮಾತ್ರ ಅಲ್ಲ. ನೊಂದವರ, ಶೋಷಿತರ ಬದುಕಿನ ಬಗ್ಗೆ ಕಣ್ಣು ಹಾಯಿಸು ವುದು ಕೂಡ ವ್ಯವಸ್ಥೆಯ ಬಗ್ಗೆ ಪ್ರತಿಭಟನೆ ತೋರಿಸುವುದಕ್ಕೆ ಪ್ರೇರಣೆ ನೀಡಬಹುದು" ಎಂದು ಹೇಳಿದ್ದಾರೆ. ಅವರು ಮುಂದುವರಿದು, ಇಂತಹ ಪ್ರತಿಭಟನೆಯ ಅಂಶವನ್ನು "ಸೂತ್ರವಾಗಿಟ್ಟುಕೊಂಡು ಸಮಗ್ರ ಸಂಕಲನ, ನನಗೆ ತಿಳಿದಮಟ್ಟಿಗೆ ಭಾರತೀಯ ಭಾಷೆಗಳಲ್ಲಿ ಇದೇ ಮೊದಲು" ಎಂದೂ ಹೇಳಿದ್ದಾರೆ.

ಈ ಸಂಗ್ರಹವನ್ನು ನೋಡಿದರೆ ಈ ಸಂಪಾದಕರ ಪ್ರಕಾರ ಎಲ್ಲವೂ ಪ್ರತಿ ಭಟನೆಯ ಕಾವ್ಯವೇ. ಇವರ ಪ್ರಕಾರ ಅಸಹಾಯತೆಯನ್ನು ಹೇಳಿಕೊಳ್ಳುವುದು ಪ್ರತಿಭಟನೆ, ನಿಟ್ಟುಸಿರುಬಿಡುವುದೂ ಪ್ರತಿಭಟನೆ, ಹೊಸ ಸಮಾಜ ಕಟ್ಟುತ್ತೇವೆ ಎನ್ನುವುದೂ ಪ್ರತಿಭಟನೆ, ಅಪ್ಪನ ಬಗ್ಗೆ ಕವಿತೆ ಬರೆದರೂ ಪ್ರತಿಭಟನೆ, ರೈತ, ಬಡವ, ಮಣ್ಣು ಇಂತಹ ಪದಗಳಿದ್ದರೆ ಅದೂ ಪ್ರತಿಭಟನೆಯ ಕಾವ್ಯ. ಈ ಸಂಪಾದಕರೇ ಬರೆದ ಪ್ರತಿಭಟನೆ ಕಾವ್ಯದ ಮಾದರಿಯೊಂದು ಹೀಗಿದೆ :

ತರಗಾದ ಎಲೆಗಳೊಳಗೆ
ಕರುಳು ಕುಯ್ವ ಸುದ್ದಿಗೆ
ಬಿದ್ದಿತಲ್ಲ ಇಳೆಗೆ ಮಳೆ
ಬಿದ್ದಹನಿಗೆ ಮಣ್ಣ ಕಂಪು
ಬಂದಿತಲ್ಲ ಗಾಳಿಗೆ
ತೇಲಿಬಂದ ಗಾಳಿಯೊಳಗೆ
ಚಿಮ್ಮಿತಲ್ಲ ಜೀವ ಜಂತು

ಉರುಳಿದ್ದ ನೀರಿನಲ್ಲಿ
ರಸದ ಬುಗ್ಗೆ ಉಕ್ಕಿತು
ಒಣಗಿ ಬಿದ್ದ ಮರಗಳಲ್ಲಿ
ಜೀವತಳಿತು ತಳಿರು ಮೂಡಿ
ರಾಗ ತುಂಬಿಕೊಂಡಿತು
ಆಕಾಶಕು ಬಳಿಯಿತು
ಕೆನ್ನೆ ಕೆಂಪಗಾಯಿತು
ನೆಲವನ್ನೆಲ್ಲ ಕೂಡಿತು
ಹರಿವ ನೀರಿನಲ್ಲಿ ಹಳ್ಳಕೊಳ್ಳ ಮುಳುಗಿತು
ಒಣಗಿದಂಥ ಕೊರಳಿನಲ್ಲಿ
ದನಿಯು ಮೂಡಿ
ಬಂದಿತು. (ಮುಂಗಾರು)

ಇದೂ ಪ್ರತಿಭಟನೆಯ ಕಾವ್ಯವೆಂದು ತಿಳಿದ ಸಂಪಾದಕರ ನಿಲುವು ಈ ಸಂಗ್ರಹದ ಬಗ್ಗೆ ಹಲವು ಅನುಮಾನಗಳನ್ನು ಹುಟ್ಟಿಸುತ್ತದೆ.

ರಂಗಗೀತೆಗಳು : ಕೆ. ವಿ. ಆಚಾರ್ (ಸಂಪಾದಕ)

1243 ಪುಟಗಳ ಈ ಪುಸ್ತಕಗಳಲ್ಲಿ ಸುಮಾರು ನಾಲ್ಕು ಸಾವಿರದಷ್ಟು ರಂಗ ಗೀತೆಗಳನ್ನು ಕಲೆಹಾಕಿ, ಪ್ರತಿಯೊಂದು ಗೀತಕ್ಕೂ ಅದು ಕಾಣಿಸಿಕೊಂಡ ನಾಟಕ, ನಾಟಕಕಾರರ ಹೆಸರು ಮತ್ತು ಅದರ ರಚನೆಯನ್ನು ಕಾಲವನ್ನು ಕೊಡುವ ಈ ಸಾಹಸ ಸ್ವಾಗತಾರ್ಹವಾದದ್ದು. ನಾಟಕದ ಬೆಳವಣಿಗೆಯಲ್ಲಿ ಆಸಕ್ತಿಯಿರುವವರಿಗೆ ಮತ್ತು ಸಂಶೋಧನಕಾರರಿಗೆ ಇದೊಂದು ನಿಧಿಯ ಹಾಗಿದೆ.

# ನಾಟಕ

## ಸಿದ್ಧಲಿಂಗಯ್ಯ

ಈ ವರ್ಷ ಸಾಹಿತ್ಯ ವಾರ್ಷಿಕದ ಸಮೀಕ್ಷೆಗೆ ಒಟ್ಟು ಹದಿನೆಂಟು ನಾಟಕಗಳು ಬಂದಿವೆ. ಹದಿನೈದು ಕನ್ನಡದ ಸ್ವಂತ ನಾಟಕಗಳಾಗಿದ್ದು ಮೂರು ಅನುವಾದ ಕೃತಿಗಳಾಗಿವೆ. ನಾಟಕದ ಬಗ್ಗೆ ಕುತೂಹಲ, ಉತ್ಸಾಹಗಳು ಹೆಚ್ಚಿ ನಿರಂತರ ರಂಗ ಪ್ರಯೋಗಗಳು ಆಗುತ್ತಿರುವ ಈ ಸಂದರ್ಭದಲ್ಲಿ ಪ್ರಕಟಣೆಯ ಈ ಪ್ರಮಾಣ ಕಡಿಮೆಯೆಂದೇ ಹೇಳಬೇಕು. ರಾಜಕೀಯ ವಸ್ತುವನ್ನುಳ್ಳ ನಾಟಕಗಳಿಗಂತೂ ಈಗ ಅಪಾರ ಬೇಡಿಕೆ. ಪ್ರಕಟವಾಗಿರುವ ಕನ್ನಡದ ಹದಿನೈದು ನಾಟಕಗಳಲ್ಲಿ ರಾಜಕೀಯ ನಾಟಕಗಳು ಕೇವಲ ನಾಲ್ಕು. ಉತ್ತಮ ಗುಣಮಟ್ಟದ ಈ ನಾಟಕಗಳು ಕನ್ನಡ ನಾಟಕ ಸಾಹಿತ್ಯದ ಒಲವು ಯಾವ ದಿಕ್ಕಿಗೆ ಹೋಗುತ್ತಿದೆ ಎಂಬುದನ್ನು ಸೂಚಿಸುತ್ತವೆ. ಕಲೆ ಸಾಹಿತ್ಯ ಜನ ಜೀವನದ ಸಂಕಷ್ಟಗಳಿಗೆ ಕೊರಳಾಗಬೇಕೆಂಬ ಮಾತು ಹೆಚ್ಚು ಹೆಚ್ಚು ಸ್ವೀಕೃತವಾಗುತ್ತಿರುವಾಗ ಈ ಧೋರಣೆಯನ್ನು ನಾಟಕ ಪ್ರಕಾರವೂ ರೂಪಿಸಿಕೊಳ್ಳುತ್ತಿರುವುದು ಸ್ವಾಗತಾರ್ಹವಾದ ವಿಚಾರ.

ಪೌರಾಣಿಕ ಚಾರಿತ್ರಿಕ ವಸ್ತುವನ್ನುಳ್ಳ ನಾಟಕಗಳಲ್ಲೂ ನಮ್ಮ ಪೌರಾಣಿಕ ಸಂದರ್ಭದಲ್ಲಿಯೇ ವರ್ಣ-ವರ್ಗ ಸಂಘರ್ಷದ ಎಳೆಗಳನ್ನು ಗುರುತಿಸುವ ಸೂಕ್ಷ್ಮ ದೃಷ್ಟಿ ಇರುವುದನ್ನು ಕಾಣಬಹುದು. ಸಾಮಾಜಿಕ ವಸ್ತುವನ್ನುಳ್ಳ, ಸರಳವಾದ ಸಮಸ್ಯೆಗಳನ್ನು ಸಂಕೀರ್ಣಗೊಳಿಸುವ ಯತ್ನವಿರುವ ಕೆಲವು ನಾಟಕಗಳೂ ಇವೆ. ಮೂರು ಅನುವಾದಿತ ನಾಟಕಗಳಲ್ಲಿ ಎರಡು ಷೇಕ್ಸ್‌ಪಿಯರನವು. ಒಂದು, ಆಂಟನಿ ಚೆಕಾವ್ ಅವರದು. ವಿಶ್ವ ಸಾಹಿತ್ಯದ ಶ್ರೇಷ್ಠ ನಾಟಕ ಕೃತಿಗಳು ಕನ್ನಡಕ್ಕೆ ಇನ್ನೂ ಬರಬೇಕಾಗಿವೆ ಎಂಬುದನ್ನು ಈ ವರ್ಷದ ಅನುವಾದದ ಪ್ರಮಾಣ ಸೂಚಿಸುತ್ತದೆ.

ಆಸ್ಫೋಟ : ಟಿ. ಎನ್. ಸೀತಾರಾಂ

ಇತ್ತೀಚೆಗೆ ಬಂದ ರಾಜಕೀಯ ನಾಟಕಗಳಲ್ಲಿ ಮುಖ್ಯವಾದುದು. ಕೃತಿಯಾಗಿ ಅಷ್ಟೇ ಅಲ್ಲ ರಂಗದ ಮೇಲೂ ಯಶಸ್ಸನ್ನು ಸಾಧಿಸಿದೆ. ಶೋಷಣೆಯ ವಿರುದ್ಧ ತಿರುಗಿ ಬಿದ್ದ ಕ್ರಾಂತಿಕಾರಿ ನಾಯಕನೊಬ್ಬ ಕ್ರಮೇಣ ಶೋಷಕ ವ್ಯವಸ್ಥೆಯ ಒಂದು ಭಾಗವಾಗುವ ಕ್ರಿಯೆ ನಾಟಕದ ವಸ್ತು. ನಾಟಕದ ಘಟನೆಗಳು ಅತ್ಯಂತ ನಾಟಕೀಯವಾಗಿ ಹೊಸ ತಿರುವುಗಳನ್ನು ಪಡೆದುಕೊಳ್ಳುತ್ತಾ ಹೋಗುತ್ತವೆ. ಚುರುಕಾದ ಸಂಭಾಷಣೆಯಲ್ಲಿ ವ್ಯಂಗ್ಯವು ತುಂಬಿದ್ದು ನೋಟಕನಲ್ಲಿ ವಿಷಾದವನ್ನು ಉಂಟು ಮಾಡು

ವಲ್ಲಿ ನಾಟಕ ಸಫಲವಾಗುತ್ತದೆ. ನಿರಾಶಾವಾದದವಲ್ಲಿ ನಾಟಕ ಅಂತ್ಯವಾಗುತ್ತದೆ ಎಂಬ ದೂರೂ ಈ ನಾಟಕದ ಬಗ್ಗೆ ಬರಲು ಸಾಧ್ಯ. ಆದರೆ ಶಿವ ಪ್ರಸಾದನ ಪಾತ್ರ ಈ ಕೊರತೆಯನ್ನು ನೀಗಿಸುತ್ತದೆ. ಸಮಾಜ ಬದಲಾವಣೆಯು ಸಾಧ್ಯವೆಂಬ ಆಶಾವಾದದ ಪ್ರತೀಕ ಈ ಪಾತ್ರ. ಎಲ್ಲೂ ಜಾಳಾಗದೆ ನಾಟಕ ಶಿಲ್ಪ ಬಿಗಿಯಾಗಿರುವುದಕ್ಕೆ ಕಾರಣ ಲೇಖಕರಿಗೆ ಮಾಧ್ಯಮದ ಮೇಲೆ ಇರುವ ಹಿಡಿತ ಎನ್ನಬಹುದು.

ಜೀವನಾನುಭವ ಮತ್ತು ಸಾಮಾಜಿಕ ಕಳಕಳಿ ಏಕಕಾಲದಲ್ಲಿ ಈ ನಾಟಕದಲ್ಲಿ ಕಂಡು ಬರುತ್ತವೆ. ನಾಟಕಕಾರರ ಖಚಿತವಾದ ಜನಪರ ರಾಜಕೀಯ ನಿಲುವನ್ನು ಪ್ರಶ್ನೆ ಮಾಡುವಂತಿಲ್ಲ. ನಟರೂ ಆಗಿರುವ ಸೀತಾರಾಂ ಕನ್ನಡಕ್ಕೆ ಒಂದು ಒಳ್ಳೆಯ ರಾಜಕೀಯ ನಾಟಕವನ್ನು ಕೊಟ್ಟಿದ್ದಾರೆ.

ಭಾರತ ಭಾಗ್ಯ ವಿಧಾತಾ : ಶ್ರೀರಂಗ

ಪ್ರಸಿದ್ಧ ನಾಟಕಕಾರ ಶ್ರೀರಂಗರು ರಾಜಕೀಯ ಸಾಮಾಜಿಕ ವಿಡಂಬನೆಯನ್ನು ವಸ್ತುವಾಗುಳ್ಳ ನಾಟಕಗಳನ್ನು ಕೊಡುವುದರಲ್ಲಿ ಸಿದ್ಧಹಸ್ತರು. ಅಂಥ ಇನ್ನೊಂದು ಗಮನಾರ್ಹ ನಾಟಕ ಭಾರತ ಭಾಗ್ಯ ವಿಧಾತ.

ಸ್ವಾತಂತ್ರ್ಯೋತ್ತರ ಭಾರತೀಯ ರಾಜಕಾರಣದಲ್ಲಿ ಉಂಟಾಗಿರುವ ವಿಪರ್ಯಾಸ ಈ ನಾಟಕದ ವಸ್ತು. ಅಧಿಕಾರ ಲಾಲಸೆಯೂ ಒಂದು ಮೌಲ್ಯವಾಗಿರುವ ದುರಂತ ವನ್ನು ನಾವಿಲ್ಲಿ ಕಾಣುತ್ತೇವೆ. ಶ್ರೀರಂಗರ ಎಲ್ಲ ನಾಟಕಗಳಂತೆ ಚುಚ್ಚುವ ಮಾತು ಗಾರಿಕೆ ಇಲ್ಲಿಯೂ ಎದ್ದು ಕಾಣುತ್ತದೆ. ನಮ್ಮ ರಾಜಕಾರಣಿಗಳ ಚದುರಂಗದಾಟವನ್ನು ಮನಮುಟ್ಟುವಂತೆ ಮಾಡುವಲ್ಲಿ ಪ್ರೇತದ ಪಾತ್ರದ ಬಳಕೆ ಯಶಸ್ವಿಯಾಗಿ ಆಗಿದೆ. ಶ್ರೀರಂಗರಿಗೆ ಪ್ರಿಯವಾದ ಸಮತಾವಾದವೂ ಇಲ್ಲಿ ಪ್ರವೇಶಿಸಿದೆ. ರಂಗದ ಮೇಲೂ ಪ್ರೇಕ್ಷಕರನ್ನು ರಂಜಿಸಿದ ಈ ನಾಟಕ ಗಮನಾರ್ಹವಾದದ್ದು.

ಹುಯ್ಯೋಲವೊ ಡಂಗುರವ : ಎಚ್. ಎಂ. ಚನ್ನಯ್ಯ

'ಎಲ್ಲರಂಥವನಲ್ಲ ನನಗಂಡ'ದಂಥ ಸತ್ವಶಾಲಿ ನಾಟಕವನ್ನು ಕೊಟ್ಟ ಚನ್ನಯ್ಯ ನವರ ಇನ್ನೊಂದು ಉತ್ತಮ ನಾಟಕ ಇದು. ಜನಪದ ಭಾಷೆ ಹಾಡು, ಲಯಗಳನ್ನು ಬಳಸಿಕೊಂಡು ಜಂಗಮ ಪಾತ್ರವೊಂದನ್ನು ಕೇಂದ್ರವಾಗಿಟ್ಟುಕೊಂಡು ವಿಶಿಷ್ಟರಂಗ ತಂತ್ರದಿಂದ ಈ ನಾಟಕ ರಚಿತವಾಗಿದೆ. ನಾಟಕದಲ್ಲಿ ಬಳಸಲಾಗಿರುವ 'ಸಿಂಹಾವ ಲೋಕನ ತಂತ್ರ' ಅತ್ಯಂತ ಸೂಕ್ತವಾಗಿದ್ದು ನಾಟಕದ ಆಶಯವನ್ನು ಮನನ ಮಾಡಿ ಸುವಲ್ಲಿ ನೆರವಾಗಿದೆ. ನಾಟಕದ ಭಾಷೆ ಸತ್ವಶಾಲಿಯಾಗಿದ್ದು ಚನ್ನಯ್ಯನವರು ಅದನ್ನು ದುಡಿಸಿಕೊಂಡಿರುವ ರೀತಿ ಮೆಚ್ಚುವಂತಿದೆ.

"ನಾಟಕ ಪ್ರೇಕ್ಷಕರಿಗೆ ಸಂತೋಷ ಕೊಡಬೇಕು, ಹಾಗೇ ಅವರನ್ನು ಆಲೋಚಿ ಸಲೂ ಪ್ರಚೋದಿಸಬೇಕು" ಎಂಬ ನಿಲುವನ್ನು ನಂಬಿದ ಚನ್ನಯ್ಯನವರು ಇದನ್ನು ಖಚಿತ ಪಡಿಸಲೆಂದೇ ಈ ನಾಟಕವನ್ನು ಬರೆದಂತಿದೆ. ಆದರೆ ಎಲ್ಲೂ ಸಿದ್ಧಾಂತ ಅಥವಾ

ನಂಬಿಕೆಯನ್ನು ಹೇರಿದಂತೆ ಓದುಗನಿಗೆ ಭಾಸವಾಗುವುದಿಲ್ಲ. ಭ್ರಷ್ಟಗೊಂಡ ಸಮಾಜ ವ್ಯವಸ್ಥೆಯನ್ನು ಬದಲು ಮಾಡುವ ಆಶಯದಲ್ಲಿ ಮುಗಿಯುವ ನಾಟಕ ಖಚಿತವಾದ ಜನಪರ ನಿಲುವನ್ನು ನಾಟಕದುದ್ದಕ್ಕೂ ಪ್ರಕಟಿಸುತ್ತದೆ.

ಬೆಕ್ಕು–ಬಾವಿ : ಶಾ. ಬಾಲೂರಾವ್

ಒಂದು ಸಣ್ಣ, ಸ್ವಾರಸ್ಯಕರವಾದ ಘಟನೆಯಿಂದ ಶುರುವಾಗುವ ಈ ನಾಟಕ ಬದುಕಿನ ಗಮನವನ್ನು ಹೇಳುತ್ತಾ ಮುಕ್ತಾಯವಾಗುತ್ತದೆ. ಬದುಕಿಗಾಗಿ ನಡೆಯುವ ಹೋರಾಟ ಈ ನಾಟಕದ ವಸ್ತು. ನಾಟಕಕಾರರು ಎಲ್ಲೂ ಅಪ್ಪಿ ತಪ್ಪಿಯೂ ದೊಡ್ಡ ಮಾತುಗಳನ್ನು ಬಳಸದೆ ಅಪೂರ್ವ ಸಂಗತಿಯನ್ನು ಹಾಸ್ಯದಲ್ಲಿ ಸರಳವಾಗಿ ಇಲ್ಲಿ ಹೇಳಿದ್ದಾರೆ. ಬೆಕ್ಕು ಈ ನಾಟಕದಲ್ಲಿ ಕಾಣಿಸಿಕೊಳ್ಳದಿದ್ದರೂ ಅದು ಬಾವಿಗೆ ಬಿದ್ದಿದೆ ಎಂಬ ಭ್ರಮೆ ಎಷ್ಟೋಂದು ಅವಾಂತರಗಳಿಗೆ ಕಾರಣವಾಗುತ್ತದೆ ಎಂಬುದು ನಾಟಕೀಯವಾಗಿ ಮೂಡಿ ಬಂದಿದೆ. ಈ ನಾಟಕದ ಅಳಸಿಂಗಾಚಾರ್ಯರ ಪಾತ್ರವಂತೂ ವಿಶಿಷ್ಟವಾಗಿದೆ. ಬದುಕಿಗಾಗಿ ನಡೆಸುವ ಸಂಘರ್ಷದ ಪ್ರತೀಕದಂತಿದೆ.

"ಯಾವುದೇ ನಾಟಕ ಅಚ್ಚಾಗುವ ಮೊದಲು ಒಮ್ಮೆ ರಂಗದ ಮೇಲೆ ಬರ ಬೇಕು. ಆಗ ಅದರ ಅರೆಕೊರೆಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತವೆ" ಎಂದು ಆರಂಭದಲ್ಲಿ ನಾಟಕಕಾರರು ಹೇಳಿದ್ದಾರೆ. ಇದೇನೇ ಇದ್ದರೂ ಈ ಸುಂದರ ನಾಟಕ ಯಶಸ್ವಿ ರಂಗ ಪ್ರಯೋಗದ ಭರವಸೆಯನ್ನೂ ಹುಟ್ಟಿಸುತ್ತದೆ.

ಹೆಜ್ಜೆಗಳು : ಎಚ್. ಎಸ್. ವೆಂಕಟೇಶಮೂರ್ತಿ

ಕಾವ್ಯದಲ್ಲಿ ಪುರಾಣ ವಸ್ತುವನ್ನು ಬಳಸಿಕೊಳ್ಳುವುದರ ಮೂಲಕ ಉತ್ತಮ ಕಾವ್ಯವನ್ನು ಕೊಡುತ್ತಿರುವ ಎಚ್. ಎಸ್. ವೆಂಕಟೇಶಮೂರ್ತಿಯವರು ಪುರಾಣ ಪ್ರಸಂಗವೊಂದನ್ನು ಬಳಸಿಕೊಂಡು ಕುತೂಹಲಕರವಾದ ನಾಟಕವನ್ನು ರಚಿಸಿದ್ದಾರೆ. ಭಾಷೆಯ ಮೇಲೆ ಅವರಿಗೆ ಇರುವ ಹಿಡಿತ ಪಾತ್ರ ನಿರ್ಮಾಣದಲ್ಲಿರುವ ಕುಶಲತೆ ನಾಟಕದ ಉದ್ದಕ್ಕೂ ಕಂಡು ಬರುತ್ತದೆ. ಈ ಕೃತಿಯನ್ನು 'ಕಾವ್ಯನಾಟಕ' ಎಂದು ಕರೆದಿರುವುದು ಔಚಿತ್ಯಪೂರ್ಣವಾಗಿದೆ.

ಪುರಾಣವನ್ನು ಪ್ರಸ್ತುತ ಬದುಕಿಗೆ ಒಡ್ಡಿ ಹೊಸ ದೃಷ್ಟಿಕೋನದಿಂದ ಅರ್ಥೈಸುವ ಇಲ್ಲಿಯ ಪ್ರಯತ್ನ ಶ್ಲಾಘನೀಯ, ಸಂಕೀರ್ಣವಾದ ಪ್ರೇಮಕಾಮದಂಥ ವಸ್ತುಗಳ ನಿರ್ವಹಣೆ ಇಲ್ಲಿ ಎಲ್ಲಿಯೂ ಅತಿರೇಕಕ್ಕೆ ಹೋಗದೆ ಸರಳವೂ ಆಗದೆ ನಾಟಕದ ಆಶಯದ ಸಫಲತೆಗೆ ನೆರವಾಗಿದೆ. ನಾಟಕದಲ್ಲಿ ಏರ್ಪಟ್ಟಿರುವ ಸಂಘರ್ಷವೂ ಅತ್ಯಂತ ಗಂಭೀರ ಸ್ವರೂಪದ್ದಾಗಿದ್ದು ಕೃತಿಯ ಮಹತ್ವಕ್ಕೆ ಕಾರಣವಾಗಿದೆ.

ಸ್ವರ್ಗಸ್ಥ : ನಿಸರ್ಗಪ್ರಿಯ

ಪುರಾಣ ವಸ್ತುವೊಂದನ್ನು ಸಮಕಾಲೀನ ದೃಷ್ಟಿಯಿಂದ ನೋಡುವ ಪ್ರಯತ್ನ ಇಲ್ಲಿದೆ. ನಾಟಕದ ಕಥೆ ಕುತೂಹಲವನ್ನು ಬೆಳೆಸುತ್ತಾ ಹೋಗುತ್ತದೆ. ಪಾತ್ರಗಳು, ಘಟನೆಗಳು ಸೊಗಸಾದ ನಾಟಕೀಯ ತಿರುವುಗಳನ್ನು ಪಡೆದುಕೊಳ್ಳುತ್ತಾ ನಾಟಕದ ಶಿಲ್ಪವನ್ನು ಗಟ್ಟಿಯಾಗಿಸಿವೆ. ನಾಟಕದ ವಸ್ತು ಮತ್ತು ನಾಟಕದ ನಟ ಇವೆರಡರ ನಡುವೆ ಒಂದು ಸಂಘರ್ಷವೇರ್ಪಡಿಸಿ ಕಥೆಯನ್ನು ಮುಂದುವರಿಸುವುದು ಇಲ್ಲಿಯ ತಂತ್ರ. ತ್ರಿಶಂಕು ರಾಜನಾಗಿದ್ದುಕೊಂಡು ಚಂಡಾಲನ ಅನುಭವವನ್ನು ಪಡೆಯ ಬೇಕು ಎಂದರೆ, ಈ ನಾಟಕದ ನಟ ಸ್ವಯಂ ಚಂಡಾಲನಾಗಿದ್ದು ರಾಜನ ಅನುಭವ ವನ್ನು ಪಡೆಯಬೇಕೆನ್ನುವವನು. ಈ ಬಗೆಯ ಕಲ್ಪನೆಯೇ ನಾಟಕದ ಓಟಕ್ಕೆ ಪುಷ್ಟಿ ತಂದುಕೊಟ್ಟಿದೆ ಎನ್ನಬಹುದು.

ನಿಸರ್ಗ ಪ್ರಿಯರ ಇತರ ನಾಟಕಗಳಂತೆ ಇಲ್ಲಿಯೂ ಒಂದು ಬಗೆಯ ವೈಚಾರಿಕತೆ ಕೆಲಸ ಮಾಡಿದೆ. ಇವರ ನೆಲೆ ಸಾಮಾಜಿಕ ಸಂದರ್ಭದ್ದು, ಅದಕ್ಕಾಗಿಯೇ ಸ್ವರ್ಗಸ್ಥ ನಾಟಕದಲ್ಲಿ ನಮ್ಮ ಪುರಾಣ ಪ್ರಪಂಚದ ವರ್ಗ ಸಂಘರ್ಷದ ಎಳೆಗಳನ್ನು ಗುರುತಿಸಲು ಸಾಧ್ಯವಾಗಿದೆ. ಓದುವಾಗ ಮೌಲಿಕವಾಗಿದ್ದು ರಂಗದ ಮೇಲೂ ಉತ್ತಮ ಪ್ರಯೋಗದ ಭರವಸೆ ಹುಟ್ಟಿಸುವ ಸ್ವರ್ಗಸ್ಥ ಒಂದು ವಿಶಿಷ್ಟ ಕೃತಿ.

ಕ್ರಮ : ಕೆ. ಸತ್ಯನಾರಾಯಣ

ಭಿನ್ನ ಬಗೆಯ ವಸ್ತುವನ್ನುಳ್ಳ ನಾಟಕ. ನಮ್ಮ ಸಮಕಾಲೀನ ಸಂದರ್ಭ ದಲ್ಲಿಯೇ ಸೀಮಿತ ವಲಯವೊಂದರಲ್ಲಿ ನಿತ್ಯವೂ ಕಾಣುವ ಚಿತ್ರಗಳಿಗೆ ಇಲ್ಲಿ ನಾಟಕ ಸ್ವರೂಪವನ್ನು ಕೊಡಲು ಯತ್ನಿಸಲಾಗಿದೆ. ಬುದ್ಧಿಜೀವಿಯೂ. ಬರಹಗಾರನೂ ಆದ ಕನಸುಗಾರ ಕ್ರಾಂತಿಕಾರಿಯೊಬ್ಬ ಅಂತ್ಯದಲ್ಲಿ ಆಶಾಭಂಗಕ್ಕೆ ಒಳಗಾಗಿ ಇಕ್ಕಟ್ಟಿಗೆ ಸಿಕ್ಕುವ ಕಥೆ ಈ ನಾಟಕದ್ದು, ಈ ನಾಟಕದಲ್ಲಿ ಏರ್ಪಡುವ ಸಂಘರ್ಷ ಗಂಭೀರ ಸ್ವರೂಪದ್ದಾಗದೆ ಇರುವುದರಿಂದ ಓದುಗನ ಮೇಲೆ ಅಂಥ ಪ್ರಬಲವಾದ ಪರಿಣಾಮ ಉಂಟಾಗುವುದಿಲ್ಲ. ಭ್ರಮಾ ಲೋಕದ ಬುದ್ಧಿಜೀವಿ ಕ್ರಾಂತಿಕಾರಿಗಳ ಗೇಲಿಯಂತೂ ನಾಟಕಕಾರರ ಉದ್ದೇಶವನ್ನು ಮೀರಿ ಯಶಸ್ವಿಯಾಗಿದೆ.

ನಾನಲ್ಲದ ನಾನು : ಭರತೇಶ

ಅಥೆನ್ಸಿನಲ್ಲಿ ಭಿನ್ನಾಭಿಪ್ರಾಯವನ್ನು ವ್ಯಕ್ತಪಡಿಸುವ ಕಾರಣಕ್ಕೆ ಬಲಿಯಾದ ಸಾಕ್ರೆಟೀಸನ ಜೀವನ ಈ ನಾಟಕದ ವಸ್ತು. ಡಿ. ಡಿ. ಕೋಸಾಂಬಿಯವರ ಅಭಿಪ್ರಾಯ ವೊಂದಕ್ಕೆ ಪ್ರತಿಕ್ರಿಯಿಸುವ ಸಲುವಾಗಿ ಈ ನಾಟಕ ಬರೆಯಬೇಕಾಯಿತೆಂದು ಭರತೇಶರು ಹೇಳಿಕೊಂಡಿದ್ದಾರೆ. ಅದಕ್ಕಾಗಿ ಅವರು ನಡೆಸಿದ ಆಳವಾದ ಅಧ್ಯಯನದ ಪ್ರಸ್ತಾಪವಿದೆ. ಸಾಕ್ರೆಟೀಸನ ಉನ್ನತ ವ್ಯಕ್ತಿತ್ವವನ್ನು ಜಾಹೀರುಗೊಳಿಸುವ, ಆತನ

ಬದುಕಿನ ದುರಂತವನ್ನು ಹೃದಯ ವಿದ್ರಾವಕವಾಗಿ ಚಿತ್ರಿಸುವ ಇವರ ಉದ್ದೇಶ ಸಫಲವಾಗಿದೆ. ಮಾತುಗಾರಿಕೆ ಅತಿಯಾಗಿ ರಂಗದ ಮೇಲೆ ಈ ನಾಟಕ ಸೊರಗುವ ಸಾಧ್ಯತೆಯೂ ಇದೆ.

"ಅಥೆನ್ಸಿನ ಪರಿಸ್ಥಿತಿ ನಮ್ಮ ಸಮಕಾಲೀನ ಪರಿಸ್ಥಿತಿಗೆ ಹೆಚ್ಚು ಭಿನ್ನವಾಗಿಲ್ಲದಿರುವುದರ ಹಿನ್ನೆಲೆಯ ಪ್ರೇರಣೆಯೊಂದಿಗೆ ರಚನೆಯಾದ ಈ ನಾಟಕದಲ್ಲಿ ನಮ್ಮ ರಾಜಕೀಯ ಸಾಮಾಜಿಕ ಜೀವನದಲ್ಲೂ ಮೌಲ್ಯ ಅಪಮೌಲ್ಯಗಳಿಗೆ ನಡೆಯುತ್ತಿರುವ ಸಂಘರ್ಷದಲ್ಲಿ ಅವನತಿಯಲ್ಲಿರುವ ಶಕ್ತಿಗಳು ಮೌಲ್ಯಗಳನ್ನು ತುಳಿದು ಹಾಕುತ್ತಿರುವುದು, ಒಳದನಿಯಾಗಿ ಸೂಚಿತವಾಗಿದೆ" ಎಂಬ ಹಿಂಪುಟದ ಮಾತುಗಳನ್ನು ಗಮನಿಸಬಹುದು.

ಮಸಣದಲ್ಲೊಂದು ನಾಟಕ : ಹ.ಮ. ಶಿವಲಿಂಗಯ್ಯ

ಮನುಷ್ಯ ಸಂಬಂಧಗಳಲ್ಲಿ ಉಂಟಾಗುವ ಏರುಪೇರುಗಳು, ಇದರ ಪರಿಣಾಮವಾದ ಆಘಾತ, ಸಂಕಟಗಳು ಈ ನಾಟಕದ ವಸ್ತು. ಚಕ್ರವರ್ತಿ ಚಿತ್ರಪಾಲನಿಗೆ ತನ್ನ ಮತ್ತು ರತ್ನಾಜಿಯ ಸಂಬಂಧದ ಸೂಕ್ಷ್ಮ ಎಳೆಗಳು ಗೊತ್ತಾಗುವ ದುರಂತದೊಂದಿಗೆ ನಾಟಕ ಮುಕ್ತಾಯವಾಗುತ್ತದೆ. ಇನ್ನೊಂದು ಮುಖ್ಯ ಪಾತ್ರವಾದ ಶೂದ್ರಕ ಭಾವುಕತೆ, ಅದೇ ಸಂದರ್ಭದಲ್ಲಿ ಸಂಘರ್ಷದ ಪ್ರತೀಕವೂ ಆಗಿದ್ದಾನೆ. ಅತ್ಯಂತ ಮಹತ್ವದ ಪಾತ್ರ ಇದು. ಭಾವುಕತೆಯೇ ಪಾತ್ರದ ಒಂದು ದೋಷವಾಗಿ ಬೆಳವಣಿಗೆಯನ್ನು ಕಾಣದೆ ದುರ್ಬಲ ಪಾತ್ರವಾಗಿದೆ. "ರಾಜ ರಾಣಿಯರ ವೈಯಕ್ತಿಕ ದುರಂತಕ್ಕಿಂತ ಹೆಚ್ಚಿನ ವ್ಯಾಪ್ತಿ ಉಳ್ಳದ್ದು ಕವಿ ಶೂದ್ರಕನದ್ದು" ಎಂದು ನಾಟಕವನ್ನು ಕುರಿತು ಆರ್ಯರು ಹೇಳಿದ್ದರೂ ಶೂದ್ರಕ ರಕ್ತಮಾಂಸದ ಪಾತ್ರವಾಗಿ ಮೂಡಿ ಬಂದಿಲ್ಲ. ಇಂತಹ ಒಳ್ಳೆಯ ವಸ್ತುವನ್ನು ಹ.ಮ.ಶಿ.ಯವರು ಪರಿಣಾಮಕಾರಿಯಾಗಿ ದುಡಿಸಿಕೊಂಡಿಲ್ಲವೆಂದೇ ಹೇಳಬೇಕು. ಕೊನೆಯಲ್ಲಿ ಅಲ್ಲಲ್ಲಿ ಕೇಳಿಬರುವ ರಾಜತ್ವ ವಿರೋಧಿ ಘೋಷಣೆಗಳಂತೂ ನಾಟಕ ಸಂದರ್ಭದಲ್ಲಿ ಮೈ ತಳೆಯದೆ ನಾಟಕಕಾರರೇ ತಮ್ಮ ಖುಷಿಗೆ ಹಾಕಿದಂತಿವೆ.

ಹೊಸಗನ್ನಡ ಮಿತ್ರವಿಂದಾ ಗೋವಿಂದ : ಟಿ. ವಿ. ವೆಂಕಟಾಚಲಶಾಸ್ತ್ರಿ

ಚಿಕ್ಕದೇವರಾಜ ಒಡೆಯರ ಕಾಲದಲ್ಲಿದ್ದ ಸಿಂಗರಾರ್ಯ (ಸು. 1680) ಎಂಬ ಕವಿಯಿಂದ ರಚಿತವಾದ ಹಳಗನ್ನಡ ಮಿತ್ರವಿಂದಾ ಗೋವಿಂದಾ ನಾಟಕದ ಹೊಸಗನ್ನಡ ರೂಪ ಇದು. ಟಿ. ವಿ. ವೆಂಕಟಾಚಲಶಾಸ್ತ್ರಿಗಳು ಆಡುನುಡಿಗೆ ಹತ್ತಿರವಾದ ಭಾಷೆಯನ್ನೇ ಬಳಸಿದ್ದಾರೆ. ಹಾಡುಗಳು ಒಂದೆರಡು ಕಡೆ ಮನ ಮುಟ್ಟುವಂತಿವೆ. ಮೂಲದ ರಂಗ ತಂತ್ರವನ್ನು ಅನುಸರಿಸಿಯೇ ಈ ನಾಟಕದ ಶಿಲ್ಪ ನಿಂತಿದೆ. ಇಲ್ಲಿಯ ಕಥಾ ವಸ್ತು ಸಾಮಾನ್ಯವಾದದ್ದು. ಮಿತ್ರವಿಂದೆಯು ತವರು ಮನೆಯಿಂದ ವಸುದೇವನ ಮನೆಗೆ ಹೊರಟು, ನಡುವೆ ನಡೆದ ಹಡಗಿನ ಆಘಾತದಲ್ಲಿ ಸಿಕ್ಕಿ ನಂತರ ಹೇಗೋ ಕಷ್ಟಪಟ್ಟು ವಸುದೇವನ ಅರಮನೆ ಸೇರುತ್ತಾಳೆ. ವಸುದೇವನಿಗೆ ಇವಳ

ಮಿತ್ರವಿಂದೆ ಎಂದು ತಿಳಿಯುವ ವೇಳೆಗೆ ಈಕೆ ಅನೇಕ ಕಷ್ಟ ಪರಂಪರೆಗಳನ್ನು ಎದುರಿಸ ಬೇಕಾಗುತ್ತದೆ. ಮುಕ್ತಾಯವು ಸುಖಾಂತವಾಗಿದೆ. ಕನ್ನಡದ ಮೊಟ್ಟಮೊದಲ ನಾಟಕ ಎನ್ನುವ ಹೆಮ್ಮೆಯೊಂದೇ.

ಈ ನಾಟಕಕ್ಕೆ ಕೋಡು ಎನ್ನಬಹುದು.

ನಹುಷ ವಿಜಯ ನಾಟಕ : ತ್ಯಾಮಗೊಂಡ್ಲು ಸೀತಾರಾಮ ಸೋಮಯಾಜಿ

ಪದ್ಮಪುರಾಣದ ಅಶೋಕ ಸುಂದರ್ಯುಪಾಖ್ಯಾನದದಿಂದ ಈ ನಾಟಕದ ಕಥಾ ಭಾಗವನ್ನು ಆರಿಸಲಾಗಿದೆ. ಪಾರ್ವತಿಯ ಮಾನಸ ಪುತ್ರಿಯೂ, ಕಲ್ಪವೃಕ್ಷದ ಕೊಡುಗೆಯೂ ಆದ ಅಶೋಕ ಸುಂದರಿಯನ್ನು ಕಾಡುತ್ತಿದ್ದ ಹುಂಡನೆಂಬ ದೈತ್ಯ ನನ್ನು ನಹುಷನು ವಧೆ ಮಾಡುವುದೇ ನಹುಷ ವಿಜಯದ ಕಥಾವಸ್ತು. ಅಶೋಕ ಸುಂದರಿಯ ಸಿದ್ಧಿ, ದೈತ್ಯ ವಧೆ, ಇಲ್ಲಿಯ ಪ್ರಮುಖ ಘಟನೆಗಳು. ಪ್ರೀತಿ-ವಾತ್ಸಲ್ಯ, ಗುರುಭಕ್ತಿ ದೈವ ನಿಷ್ಠೆಯ ಪ್ರತೀಕವಾಗಿ ಉಳಿದ ಪಾತ್ರಗಳು ಬಂಧಿವೆ. ಪ್ರಸಿದ್ಧ ಪುರಾಣದ ಕಥೆಯನ್ನು ನಾಟಕ ಮಾಡುವ ಪ್ರಯತ್ನವಿದು.

ಪ್ರಸ್ತುತ ನಾಟಕವನ್ನು ಪ್ರೌಢ ತರಗತಿಗಳಿಗೆ ಪಠ್ಯಗ್ರಂಥವಾಗಿ ಆರಿಸಿಕೊಳ್ಳಲು ಒಳ್ಳೆಯ ಅವಕಾಶವಿದೆ ಎಂಬ ಮುನ್ನುಡಿಕಾರರ ಮಾತು ಅಪ್ರಸ್ತುತವೆನ್ನಿಸುತ್ತದೆ.

ಮಹಾರಾವಣ ಅಥವಾ ಪೌಲಸ್ತ್ಯ ಪರ್ವಾಣ : ರಾ. ಗೋಪಾಲಕೃಷ್ಣ

ಈ ನಾಟಕದ ಕಥಾ ವಸ್ತುವನ್ನು ರಾಮಾಯಣದಿಂದ ತೆಗೆದುಕೊಳ್ಳಲಾಗಿದೆ. ರಾವಣನನ್ನು ರುದ್ರನಾಯಕನನ್ನಾಗಿ ಚಿತ್ರಿಸಲಾಗಿದೆ. ಕೃತಿಯಲ್ಲಿ ಪ್ರಕಟವಾಗಿರುವ 'ಗೆಳೆಯನ ಮಾತು' ಎಂಬ ಶೀರ್ಷಿಕೆಯ ಕೆಳಗೆ "ರುದ್ರನಾಯಕನ ಬಗ್ಗೆ ಅನುಕಂಪ ಮೂಡಿಸುವಲ್ಲಿ ಈಗಾಗಲೆ ರನ್ನ, ನಾಗಚಂದ್ರ, ಬಿ. ಎಂ. ಶ್ರೀ, ಕೈಲಾಸಂ ಮೊದಲಾದ ಹಿರಿಯ ಕವಿಗಳು ಯಶಸ್ವಿ ಪ್ರಯತ್ನ ಮಾಡಿದ್ದಾರೆ. ನಾಟಕದ ಉತ್ತರಾರ್ಧದಲ್ಲಿ ಅದರಲ್ಲೂ ನಾರದರ ಮೂಲಕ ರಾವಣನ ಪೂರ್ವ ಜನ್ಮದ ನೆನಪನ್ನು ಅರಿವು ಮಾಡಿಕೊಡುವಲ್ಲಿ ಕವಿಯ ಹಿರಿಮೆಯನ್ನು ವಿಶೇಷವೆಂದೇ ಹೇಳ ಬಹುದು" ಎಂದು ಹೇಳಲಾಗಿದೆ. 'ಗೆಳೆಯನ್ನು ಮಾತು' ಎಂದು ಪ್ರಕಟವಾಗಿರುವುದ ರಿಂದ ಈ ಸಾಲುಗಳ ಔಚಿತ್ಯ ಪ್ರಶ್ನಾತೀತವಾಗಿದೆ.

ಕರುಣೆಯ ಕುಡಿ : ಎಂ. ವಿ. ಸೀತಾರಾಮಯ್ಯ

ಸಿದ್ಧಾರ್ಥ ಬುದ್ಧನಾಗುವ ಪೂರ್ವ ಸ್ಥಿತಿಯನ್ನು ಅರ್ಥಾತ್ ಗೌತಮನ ಬಾಲ್ಯ ವನ್ನು ಚಿತ್ರಿಸುವ ನಾಟಕ, ಮಹಾತ್ಮನ ಬಾಲ್ಯದ ಘಟನೆಗಳನ್ನು ಚೊಕ್ಕವಾಗಿ ಜೋಡಿಸಿದ್ದಾರೆ. ಭಾಷೆ ಸರಳ ಸುಂದರವಾಗಿದೆ. ಗೌತಮ ಮುಂದೆ ಕರುಣೆಯ ಮಹಾನ್ ವೃಕ್ಷವಾಗಲಿರುವುದರ ಸೂಚನೆಯೆಂಬಂತೆ ನಾಟಕಕ್ಕೆ 'ಕರುಣೆಯ'ಕುಡಿ, ಎಂದು ಹೆಸರಿಟ್ಟಿರುವುದು ಸೂಕ್ತವಾಗಿದೆ.

ಹರಿಶ್ಚಂದ್ರಮತಿ : ಗೋಪಾಲಕೃಷ್ಣ ಪಿ. ನಾಯಕ

ವಸ್ತು, ಕಥಾಸಂವಿಧಾನಗಳನ್ನು ರಾಘವಾಂಕನ ಹರಿಶ್ಚಂದ್ರ ಕಾವ್ಯದಿಂದ ಆಯ್ದುಕೊಂಡು ಕುತೂಹಲಕರವಾಗಿ ರಚಿತವಾದ ಕಾವ್ಯರೂಪಕ. ಹರಿಶ್ಚಂದ್ರ ಕಾವ್ಯ ದಲ್ಲಿ ಅಡಗಿರುವ ನಾಟಕವನ್ನು ಹೊರಗೆಳೆಯುವ ಒಂದು ಕಿರು ಪ್ರಯತ್ನ ಎಂದರೂ ನಡೆಯುತ್ತದೆ. "ಮೂಲದ ವಾರ್ಧಕ ಷಟ್ಪದಿಯ ಪಂಕ್ತಿಗಳನ್ನು ಗಣ ಸಾಮ್ಯದಲ್ಲಿ ಸರಳ ರಗಳೆಯಾಗಿ ಬಳಸುವಲ್ಲಿಯೂ ಈ ನಡುಗನ್ನಡದ ಸೊಬಗಿಗೆ ಆಡುನುಡಿಯ ಲಯಗಾರಿಕೆಯ ಸೊಗಸನ್ನು ತುಂಬುವಲ್ಲಿಯೂ ಈ ಲೇಖಕರು ಸಾಕಷ್ಟು ಯಶಸ್ವಿ ಯಾಗಿದ್ದಾರೆ" ಎಂಬ ಗೌರೀಶ ಕಾಯ್ಕಿಣಿಯವರ ಮಾತಿಗೆ ನಾವೂ ದನಿಗೂಡಿಸ ಬಹುದು.

ರಾಧಾ ನಿವಾಸ : ಕವಿತಾ ಕೃಷ್ಣ

ಮನೆಯ ಬಾಡಿಗೆಯನ್ನು ಕೊಡದೆ ಮನೆಯನ್ನೂ ಬಿಡದೆ ಮಾಲೀಕನಿಗೆ ಕಿರುಕುಳ ಕೊಡುತ್ತಿದ್ದ ಬಾಡಿಗೆದಾರರನ್ನು ಮನೆಖಾಲೀ ಮಾಡಿಸಿದ್ದು ನಾಟಕದ ವಸ್ತು. ಪ್ರೇಮಿಗಳಿಬ್ಬರ ಬುದ್ಧಿಶಕ್ತಿಯೇ ಈ ಸಾಹಸದ ಮೂಲ. ಪ್ರಸ್ತುತ ನಾಟಕದ ಹೆಸರೇ ಬಾಡಿಗೆ ಮನೆಯ ಹೆಸರೂ ಆಗಿದೆ. ಸಂಭಾಷಣೆ ಹಾಡುಗಳು ಸಿನಿಮೀಯ ವಾಗಿವೆ. ನಾಟಕಕಾರರಿಗೆ ರಾಯಲ್ಟಿ ಕೊಡದೆ ನಾಟಕಗಳನ್ನು ಅಭಿನಯಿಸುತ್ತಿರುವುದು ಇವರ ಗಮನಕ್ಕೆ ಬಂದಿದೆ. ಈ 'ಕಲಾದ್ರೋಹಿ'ಗಳ ವಿರುದ್ಧ ಐ.ಪಿ.ಸಿ. ರೀತ್ಯಾ ಕ್ರಮ ಕೈಗೊಳ್ಳುವುದಾಗಿ ಪ್ರಕಾಶಕರು ಎಚ್ಚರಿಕೆ ಕೊಟ್ಟಿದ್ದಾರೆ.

ಚೆರಿತೋಟ : ಅನು : ಶ್ರೀನಿವಾಸ ವಿ. ಸುತ್ರಾವೆ

ಪ್ರಸಿದ್ಧ ನಾಟಕಕಾರ ಆಂಟನ್ ಚೆಕಾವ್‌ನ ನಾಟಕವನ್ನು ಅನುವಾದಿಸಿಕೊಡ ಲಾಗಿದೆ. ಒಂದು ಸಂಸ್ಕೃತಿಯ ನಾಟಕ ಇನ್ನೊಂದು ಸಂಸ್ಕೃತಿಗೆ ಬಂದಾಗ ಭಾಷೆಗೆ ಮೂಲ ಸಂಸ್ಕೃತಿಯ ವಿವರಗಳನ್ನು ವ್ಯಕ್ತಗೊಳಿಸುವುದು ಕಷ್ಟದಾಯಕವಾಗುತ್ತದೆ. ಆದ್ದರಿಂದ ಅನುವಾದ ಶ್ರಮದ ಕ್ರಿಯೆ. ಇಂಥ ಸವಾಲನ್ನು ಸುತ್ರಾವೆ ಎದುರಿಸಲು ಯತ್ನಿಸಿದ್ದಾರೆ.

ಹೊಸ ವರ್ಗದ ಪ್ರತಿನಿಧಿಯಾದ ಲೋಫಾಹಿನ್, ಹಳೆಯ ವ್ಯವಸ್ಥೆಯ ಪ್ರತೀಕವಾದ ಮೇಡಂ ಇವರ ನಡುವೆ ಭಾಷೆಯ ವ್ಯತ್ಯಾಸವಿದೆ. ಆಳುಗಳು ಒಡೆ ಯರು ಎಲ್ಲರೂ ಒಂದೇ ಭಾಷೆಯಲ್ಲಿ ಮಾತನಾಡುವುದು ಇಲ್ಲಿ ಕಾಣುವ ಒಂದು ಕೊರತೆ. ಚೆಕಾವನ ಈ ನಾಟಕದಲ್ಲಿ ದೊಡ್ಡ ಘಟನೆಗಳು ಸಂಭವಿಸುವುದಿಲ್ಲ, ಭಾವನಾ ಮೂಲಗಳ ನಿರ್ಮಾಣದ ಮೂಲಕ ಕ್ರಿಯೆ ಸಾಗುತ್ತದೆ. ನಾಟಕದ ಭಾಷೆಯ ಬಳಕೆ ಇಲ್ಲಿ ಮುಖ್ಯವಾದದ್ದು. ಕನ್ನಡ ಅನುವಾದದಲ್ಲಿ ಗ್ರಾಂಥಿಕ ಮತ್ತು ಆಡುನುಡಿ ಇವೆರಡರ ನಡುವೆ ಗೊಂದಲ ಉಂಟಾಗಿ ಓದುವಾಗ ಇರುಸು ಮುರಿಸುಂಟಾಗುತ್ತದೆ. ಇದು ರಂಗದ ಮೇಲೂ ಆಗುವ ಸಂಭವ ಇಲ್ಲದಿಲ್ಲ.

ಚಂಡಮಾರುತ : ಅನು : ಎ. ಎನ್. ಮೂರ್ತಿರಾವ್

ವಿಶ್ವವಿಖ್ಯಾತ ನಾಟಕಕಾರ ವಿಲಿಯಂ ಷೇಕ್ಸ್‌ಪಿಯರನನ್ನು ಕನ್ನಡ ಓದುಗರಿಗೆ ಪರಿಚಯಿಸುವಲ್ಲಿ ಪ್ರಸಿದ್ಧರಾಗಿರುವ ಎ. ಎನ್. ಮೂರ್ತಿರಾಯರು ಈ ನಾಟಕವನ್ನು ಅನುವಾದಿಸಿದ್ದಾರೆ. ಮೂರ್ತಿರಾಯರ ಪಾಶ್ಚಾತ್ಯ ಸಾಹಿತ್ಯ ಪ್ರತಿಭೆ ಪ್ರಶ್ನಾತೀತವಾದದ್ದು. 'ಚಂಡಮಾರುತ'ವನ್ನೇ ಮೆಚ್ಚಿ ಅನುವಾದಿಸಿರುವ ಅವರು ಕೃತಿಯ ಅವತರಣಿಕೆಯಲ್ಲಿ ಕೃತಿಯ ಕಾಲ, ದೇಶ, ಕಥಾ ಸಂವಿಧಾನ, ಕೃತಿಕಾರನ ಹಿನ್ನೆಲೆ ಇತ್ಯಾದಿಗಳನ್ನು ವಿವರವಾಗಿ ಚರ್ಚಿಸಿದ್ದಾರೆ. ಕೊನೆಯಲ್ಲಿರುವ ಟಿಪ್ಪಣಿಗಳು ನಾಟಕವನ್ನು ಅರ್ಥಮಾಡಿಕೊಳ್ಳಲು ಸಹಾಯಕವಾಗಿದೆ. ಷೇಕ್ಸ್‌ಪಿಯರನಿಗೆ ಅನುವಾದಕರು ತೋರಿರುವ ವಿದ್ವತ್ ನಿಷ್ಠೆ ಮೆಚ್ಚುವಂಥಾದ್ದಾಗಿದೆ.

ಷೇಕ್ಸ್‌ಪಿಯರನ ಅತ್ಯಂತ ತೀವ್ರ ರೀತಿಯ ಕಾವ್ಯ ಪ್ರಕಟವಾಗಿರುವುದು ಚಂಡಮಾರುತದಲ್ಲಿಯೇ. ಈ ನಾಟಕವನ್ನು ಷೇಕ್ಸ್‌ಪಿಯರ್ ಚರಿತ್ರೆಯನ್ನು ಅರ್ಥಮಾಡಿಕೊಳ್ಳಲು ಬಳಸಿದ ರೂಪಕ ಎನ್ನಲಾಗಿದೆ. ಈ ಕಾವ್ಯಗುಣ ಅನುವಾದದಲ್ಲಿ ಮೂಡಿಬಂದಿಲ್ಲ ಎನ್ನದೆ ಅನ್ಯಮಾರ್ಗವಿಲ್ಲ. 'ಆಡುನುಡಿಯನ್ನು ತೀವ್ರವಾಗಿ ಬಳಸಬಲ್ಲ ಕವಿಯೊಬ್ಬ ಇದನ್ನು ಚೆನ್ನಾಗಿ ಅನುವಾದ ಮಾಡಬಲ್ಲ. ಮೂಲದಲ್ಲಿ ಪೂರ್ಣ ಸಂಗೀತಮಯವಾಗಿರುವ ಇಲ್ಲಿಯ ಹಾಡುಗಳನ್ನು ಪ್ರಸ್ತುತ ಅನುವಾದದಲ್ಲಿ ಹಾಡಲು ಸಾಧ್ಯವಾಗುವುದಿಲ್ಲ. (ಈ ಸಂದರ್ಭದಲ್ಲಿ ಬೇಂದ್ರೆಯವರ ಏರಿಯಲ್‌ನ ಹಾಡನ್ನು ಸ್ಮರಿಸಬಹುದು) ಈ ಅಂಶಗಳ ನಡುವೆಯೂ ಷೇಕ್ಸ್‌ಪಿಯರನನ್ನು ಅರ್ಥಮಾಡಿಕೊಳ್ಳುವ ದಿಕ್ಕಿನಲ್ಲಿ ಈ ಕೃತಿಯ ಉಪಯುಕ್ತತೆಯನ್ನು ಅಲ್ಲಗಳೆಯಲಾಗುವುದಿಲ್ಲ.

ಕೊರಿಯೋಲೇನಸ್ : ಅನು : ಕ.ವೆಂ. ರಾಜಗೋಪಾಲ

ಕವಿ ಕ.ವೆಂ. ರಾಜಗೋಪಾಲರ ಈ ಅನುವಾದ ಹಲವು ಕಾರಣಗಳಿಂದ ಗಮನಾರ್ಹವಾಗಿದೆ. ಷೇಕ್ಸ್‌ಪಿಯರನ ಪ್ರಸ್ತುತ ನಾಟಕ ಪ್ರಜಾಪ್ರಭುತ್ವ ಶ್ರೀಮಂತ ಪ್ರಭುತ್ವ ಇವೆರಡರ ನಡುವಿನ ಸಂಘರ್ಷವನ್ನು ಹೇಳುತ್ತದೆ. ಇಲ್ಲಿಯ ಕೊರಿಯೋಲೇನಸ್ ಹಳೆಯ ಶ್ರೀಮಂತ ಪ್ರಭುತ್ವದ ಅತ್ಯುತ್ತಮ ಪ್ರಾತಿನಿಧಿಕ ವ್ಯಕ್ತಿಗಳಲ್ಲಿ ಒಬ್ಬ. ಆ ವ್ಯವಸ್ಥೆಯ ಗುಣ ದೋಷಗಳ ಸಂಗಮ. ನಾಟಕದ ಮಿಡಿತವನ್ನು ಹಿಡಿದ ಕ.ವೆಂ. ಆಡುನುಡಿಗೆ ಹತ್ತಿರವಾದ ಭಾಷೆಯನ್ನೇ ಅನುವಾದಕ್ಕೆ ಬಳಸಿಕೊಂಡಿರುವುದು ಅರ್ಥಪೂರ್ಣವಾಗಿದೆ. ಈ ಗದ್ಯಗಂಧೀ ಭಾಷೆ ಓದಲೂ ಸುಲಭವಾಗಿದೆ. ಸರಳ ಗದ್ಯದ ಮೂಲಕವೇ ಅತ್ಯಂತ ತೀವ್ರ ಪರಿಣಾಮವನ್ನು ಅನುವಾದಕರು ಉಂಟು ಮಾಡುತ್ತಾರೆ.

## ಸಣ್ಣ ಕತೆ-1

**ಎಸ್. ಎಸ್. ರೇಣುಕಾರಾಧ್ಯ**

ಉಳಿದೆಲ್ಲ ಸಾಹಿತ್ಯ ಪ್ರಕಾರಗಳಿಗಿಂತ ಸಣ್ಣಕತೆಗಳು ಪ್ರಕಟಣೆಗೆ ವಿಶೇಷವಾಗಿ ದಿನ ಪತ್ರಿಕೆ, ವಾರಪತ್ರಿಕೆ ಮಾಸಿಕಗಳನ್ನು ಆಧರಿಸುತ್ತವೆ. ಹೀಗೆ ಹಲವೆಡೆ ಚೆದುರಿಕೊಂಡ ಎಲ್ಲ ಕತೆಗಳನ್ನೂ ಆಯಾ ವರ್ಷದ ಸಣ್ಣ ಕತೆಗಳ ಸಮೀಕ್ಷೆಯಲ್ಲಿ ಒಳಗು ಮಾಡುವುದು ಸಾಧ್ಯವಲ್ಲದ ಕೆಲಸ. ಪ್ರಮಾಣದ ದೃಷ್ಟಿಯಿಂದ ಹಲವು ಕಾರಣಗಳಿಗಾಗಿ ಅತ್ಯಧಿಕ ವಾಗಿ ಸೃಷ್ಟಿಯಾಗುವ ಈ ಸಾಹಿತ್ಯ ಪ್ರಕಾರದಲ್ಲಿ ಕೆಲವು ಮಾತ್ರ ಸಂಕಲನಗಳ ಮೂಲಕ ಹೊರಬರುತ್ತವೆ. ಹೀಗಾಗಿ ಆಯಾ ವರ್ಷ ಪ್ರಕಟವಾಗುವ ಕಥಾ ಸಂಕಲನಗಳಲ್ಲಿ ಸೇರುವ ಕತೆಗಳು ಆ ವರ್ಷದವು ಮಾತ್ರ ಆಗಿರದೆ, ಆ ವರ್ಷದಲ್ಲಿ ಮತ್ತು ಆ ಹಿಂದಿನ ಕೆಲವಾರು ವರ್ಷಗಳಲ್ಲಿ ರಚಿತವಾದುವೂ ಆಗಿರುತ್ತವೆ. ಇದರಿಂದ ಈ ವರ್ಷದ ಕಥಾ ಸಂಕಲನಗಳು ವ್ಯಕ್ತ ಮಾಡುವ ಅಂಶಗಳು ಕೇವಲ ಈ ವರ್ಷದವಷ್ಟೇ ಆಗಿರದೆ ಈ ಹಿಂದಿನ ಕೆಲವು ವರ್ಷಗಳ ಸಣ್ಣಕತೆಗಳು ವ್ಯಕ್ತ ಮಾಡುವ ಅಂಶಗಳೂ ಆಗುವುದು ಸಹಜ.

ಎಂಬತ್ತೊಂದರ ಸಣ್ಣ ಕತೆಯ ಪ್ರಕಾರದಲ್ಲಿ ಹದಿನಾಲ್ಕು ಕಥಾಸಂಕಲನಗಳು ಪ್ರಕಟವಾಗಿವೆ. ಅವುಗಳಲ್ಲಿ ಸಮೀಕ್ಷೆಗೆ ಬಂದವು ಹದಿಮೂರು ಮಾತ್ರ. ಮೌಲಿಕತೆಯ ದೃಷ್ಟಿಯಿಂದ ಈ ವರ್ಷ ಹಲವು ಗಮನಾರ್ಹ ಕತೆಗಳಿವೆ. ಸಂಖ್ಯಾ ದೃಷ್ಟಿಯಿಂದ ಹಿಂದಿನ ವರ್ಷಕ್ಕೆ ಹೋಲಿಸಿದರೆ ಅಂಥ ಎದ್ದು ಕಾಣುವ ವ್ಯತ್ಯಾಸ ಇಲ್ಲವಾದರೂ ಹಿಂದಿನ ಎರಡು ಮೂರು ವರ್ಷಗಳಿಗೆ ಹೋಲಿಸಿದರೆ ಈ ವರ್ಷದ ಕಥಾಸಂಕಲನಗಳ ಎರಡರಷ್ಟು ಸಂಕಲನಗಳು ಬಂದಿದ್ದವು. ಅನುವಾದಗಳಿಲ್ಲದೆ 78ರಲ್ಲಿ ಸುಮಾರು ಮೂವತ್ತು ಸಂಕಲನಗಳಿದ್ದರೆ, 79ರಲ್ಲಿ ಅನುವಾದಗಳನ್ನು ಹೊರತು ಇಪ್ಪತ್ತೇಳು ಸಂಕಲನಗಳಿದ್ದವು.

ಈ ವರ್ಷದ ಕಥಾ ಸಂಕಲನಗಳನ್ನು ಗಮನಿಸಿದಾಗ ಅವನ್ನು ಸ್ಥೂಲವಾಗಿ ಮೂರು ವಿಭಾಗಗಳಲ್ಲಿ ವಿಂಗಡಿಸಬಹುದೆಂದು ತೋರುತ್ತದೆ. ವಸ್ತು ವೈವಿಧ್ಯದ ಜೊತೆಗೆ, ಅಥವಾ ಅದಕ್ಕಿಂತ ಮುಖ್ಯವಾಗಿ ಸೃಜನಶೀಲ ಸಾಧ್ಯತೆಗಳತ್ತ ಗಾಢವಾದ ಕಾಳಜಿಗಳನ್ನುಳ್ಳ ಕತೆಗಳು ಮೊದಲ ಗುಂಪಿನಲ್ಲಿ ಸೇರಿದರೆ, ಎರಡನೆಯ ವಿಭಾಗದಲ್ಲಿ ಸೇರಬಹುದಾದ ಕತೆಗಳು ಶೋಷಣೆ, ಸಾಮಾಜಿಕ ಅನ್ಯಾಯಗಳಂಥ ವಸ್ತುವನ್ನು ವಿಶೇಷವಾಗಿ ಆಧರಿಸಿವೆ. ಈ ಬಗೆಯ ಕತೆಗಳಲ್ಲಿ ಕೆಲವು ಪ್ರತಿಭಟನಾ ಸ್ವರೂಪದವೂ

ಆಗಿವೆ. ಉಳಿದವು ಇವೆರಡು ಬಗೆಗಳಿಗಿಂತ ಭಿನ್ನವಾಗಿದ್ದು ದೈನಂದಿನ ಸಣ್ಣಪುಟ್ಟ ಘಟನೆಗಳ ಸುತ್ತ ರಚಿತವಾದಂಥವು. ಈ ಬಗೆಯ ಕತೆಗಳಲ್ಲಿ ಕೆಲವು ಉತ್ತಮ ಕತೆಗಳಿದ್ದರೂ ಹಲವು ಪೇಲವವಾಗಿವೆ. ಅನೇಕ ಕಾರಣಗಳಿಗೆ ನೀರಸವೆನ್ನಿಸುತ್ತವೆ. ಇಂಥ ಸ್ಥೂಲ ವಿಭಾಗೀಕರಣ ಕುತೂಹಲಪೂರ್ವಕವಾದುದೆಂದು ಹೇಳ ಬೇಕಾಗಿದೆ. ಏಕೆಂದರೆ, ಒಂದು ಬಗೆಯ ಕತೆಗಳು ಮತ್ತೊಂದು ಬಗೆಯ ಕತೆಗಳ ಲಕ್ಷಣಗಳನ್ನು ಪ್ರಚ್ಛನ್ನವಾಗಿಯಾದರೂ ತೋರುವ ಸಾಧ್ಯತೆಗಳೂ ಇವೆ. ಈ ವರ್ಷ ಅನಂತಮೂರ್ತಿಯವರ ಸಮಗ್ರ ಕಥಾ ಸಂಕಲನವೊಂದು—'ಎರಡು ದಶಕದ ಕಥೆ ಗಳು'—ಪ್ರಕಟವಾಗಿರುವುದು ಒಂದು ವಿಶೇಷ. ಮೂವರು ಲೇಖಕಿಯರ ಸಂಕಲನಗಳು ಈ ವರ್ಷದಲ್ಲಿವೆ.

ಎರಡು ದಶಕದ ಕಥೆಗಳು : ಯು. ಆರ್. ಅನಂತಮೂರ್ತಿ

ಆಕಾಶ ಮತ್ತು ಬೆಕ್ಕು : ಯು. ಆರ್. ಅನಂತಮೂರ್ತಿ

ಯು. ಆರ್. ಅನಂತಮೂರ್ತಿಯವರು ಸುಮಾರು ಎರಡು ದಶಕಗಳ ಅವಧಿಯಲ್ಲಿ ಬರೆದ ಕತೆಗಳನ್ನೆಲ್ಲ ಒಂದೆಡೆಗೆ ಸಂಕಲಿಸಿ 'ಎರಡು ದಶಕದ ಕಥೆಗಳು' ಎಂಬ ಹೆಸರಿನಿಂದ ಪ್ರಕಟಿಸಲಾಗಿದೆ. ಅವರ ಮೊದಲ ಕಥಾ ಸಂಕಲನವಾದ 'ಎಂದೆಂದೂ ಮುಗಿಯದ ಕಥೆ' (1955) ಯಿಂದ ಹಿಡಿದು ಇತ್ತೀಚೆಗೆ ಬಂದ 'ಆಕಾಶ ಮತ್ತು ಬೆಕ್ಕು' (1981)ವರೆಗೆ ಹೊರಬಂದಿರುವ ನಾಲ್ಕು ಕಥಾಸಂಕಲನ ಗಳಲ್ಲಿನ ಎಲ್ಲ ಕಥೆಗಳನ್ನೂ ಇಲ್ಲಿ ಅನುಕ್ರಮವಾಗಿ ಸೇರಿಸಲಾಗಿದೆ. ಇಂಥದೊಂದು ಸಮಗ್ರ ಕಥಾ ಸಂಕಲನವನ್ನು ಸಿದ್ಧಪಡಿಸುವಲ್ಲಿ "ಅನಂತಮೂರ್ತಿಯವರ ಬರವಣಿಗೆಗಳ ಅಭ್ಯಾಸಕ್ಕೆ ಅಗತ್ಯವಿರುವಂತೆ, ಇದು ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯದ ಅಭ್ಯಾಸಕ್ಕೆ ಕೂಡ ಉಪಯುಕ್ತ" ಎಂಬ ಉದ್ದೇಶ ಇದ್ದಿತೆಂಬುದು ಒಂದೆಡೆಗೆ ಸೂಚಿತ ವಾಗಿದೆ. ಅನಂತಮೂರ್ತಿಯವರ ಎಲ್ಲ ಕತೆಗಳೂ ಒಂದೇ ಕಡೆ ದೊರೆಯುವಂತಾಗಿ ಅವರ ಸಣ್ಣಕತೆಗಳ ಅಭ್ಯಾಸಕ್ಕೆ ಪ್ರಯೋಜನ ಆಗುವುದರ ಉದ್ದೇಶ ಸಾರ್ಥಕ ವಾದುದು. ಅಲ್ಲದೆ ಅನಂತಮೂರ್ತಿಯವರ ಥರದ ಬರವಣಿಗೆಯನ್ನು ರೂಢಿಸಿ ಕೊಂಡ ಮತ್ತು ನೆಮ್ಮಿಕೊಂಡ ನಂಬಿಕೆಗಳ ಅಧ್ಯಯನಕ್ಕೆ ಕೂಡ ಇಂಥ ಸಮಗ್ರ ಸಂಕಲನದ ಉಪಯೋಗವಿರುವುದನ್ನು ಅಲ್ಲಗಳೆಯಲಾಗದು. ಇಂಥ ಕಾಲಾನುಕ್ರಮದ ಆಧಾರಿತ ಸಮಗ್ರ ಸಂಕಲನಕ್ಕಿಂತ—ಅವುಗಳು ಕಾಲಾನುಕ್ರಮವಾಗಿ ಸಂಕಲನಗಳಲ್ಲಿ ಈಗಾಗಲೇ ಪ್ರಕಟವಾಗಿರುವುದರಿಂದ—ಕೆಲಕೆಲವು ಕತೆಗಳು ಹೆಚ್ಚು ಕಡಿಮೆ ಸಮಾನವಾಗಿ ತೋರ್ಪಡಿಸುವ ಪ್ರಧಾನ ಲಕ್ಷಣಗಳನ್ನು ಆಧರಿಸಿದ ಸಂಕಲನ ಇನ್ನಷ್ಟು ಹೆಚ್ಚು ಪ್ರಯೋಜನಕರವಾಗುತ್ತಿತ್ತೆಂದು ತೋರುತ್ತದೆ.

ಎರಡು ದಶಕಗಳ ಹರಹನ್ನುಳ್ಳ ಈ ಕತೆಗಳನ್ನು ಪರಿಶೀಲಿಸುವಾಗ ತೋರಿ ಬರುವ ಕೆಲವೊಂದು ಪ್ರಧಾನವಾದ ಲಕ್ಷಣಗಳನ್ನು ಆಧಾರವಾಗಿರಿಸಿಕೊಂಡು ಕೆಲವು

ಘಟ್ಟಗಳಾಗಿ ವಿಂಗಡಿಸಿ ನೋಡಬಹುದಾಗಿದೆ. ಮೊದಲ ಘಟ್ಟದಲ್ಲಿನ ಕತೆಗಳು ವಸ್ತುವಿನ ಕಲ್ಪಕತೆಗೆ ಅನಿವಾರ್ಯವೆಂಬಂತೆ ಬರುವ ಭಾವ ತೀವ್ರತೆಯಿಂದ ತುಂಬಿಕೊಂಡಿರುವುದನ್ನು ಗಮನಿಸಬಹುದು. ಇಲ್ಲಿ ಹೆಚ್ಚು ಕಡಿಮೆ ಅನಂತಮೂರ್ತಿಯವರ ಆರಂಭದ—'ಎಂದೆಂದೂ ಮುಗಿಯದ ಕಥೆ' ಸಂಕಲನದ ಎಲ್ಲ ಕತೆಗಳೂ'—ಕತೆಗಳು ಸೇರುತ್ತವೆ. ಈ ಘಟ್ಟದ ಕತೆಗಳಲ್ಲಿ ಎದ್ದು ಕಾಣುವ ಅಂಶಗಳು : ಭಾವತೀವ್ರತೆ, ನಾಟಕೀಯತೆಯಿಂದ ಕೂಡಿಕೊಂಡ ಸಂಕೀರ್ಣತೆ, ಜೊತೆ ಜೊತೆಗೇ ವ್ಯಕ್ತವಾಗಿರುವ ಕಾವ್ಯಗಂಧಿತ್ವ. ಕೆಲವೇಳೆ ಕೆಲವು ಕವಿಗಳ ಉತ್ತಮ ಕವಿತೆಗಳ—ಇದರಿಂದ ಅನಂತಮೂರ್ತಿಯವರು ಕಥಾರಚನೆಗೆ ಕೈಹಾಕಿದ ತರುಣದಲ್ಲಿದ್ದ ಪ್ರಮುಖ ಕವಿಗಳ ಕಾವ್ಯದ ಪ್ರಭಾವವನ್ನು ಗುರುತಿಸಲು ಸಾಧ್ಯವಾಗಬಹುದೇನೋ !—ಸಾಲು ಸಾಲುಗಳೇ ಬರುವುದರೊಂದಿಗೇ ಗದ್ಯದ ಸಂಯೋಜನೆಯಲ್ಲಿ ಸುಳಿಯುವ ಕಾವ್ಯಗಂಧಿತ್ವ ಗಮನಾರ್ಹವಾದುದು. ಈ ಘಟ್ಟದ 'ತಾಯಿ', 'ಹುಲಿಯ ಹೆಂಗರುಳು'ವಿನಂಥ ಕತೆಗಳು ಈಗಾಗಲೇ ಪ್ರಶಂಸಿತವಾಗಿವೆ. ಅಬ್ಬಕ್ಕ ತನ್ನ ಮಗುವಿಗೆ ಹೇಳುವ ಕ್ರೂರಿ ತಾಯಿಯೊಬ್ಬಳ ಕತೆಯೊಂದಿಗೆಯೇ ಬಿಚ್ಚಿಕೊಳ್ಳುವ ಅಬ್ಬಕ್ಕನ ಕತೆ, ಅದರಲ್ಲಿ ತಾನು ತನ್ನ ಹಿರಿಯ ಮಗನೊಂದಿಗೆ ತೋರಿದ ಕ್ರೂರತೆ, ಹಾಗಾಗುವಲ್ಲಿ ತನ್ನ ವೈಧವ್ಯದ ನೋವಿನ ನಡುವೆ ಸುಳಿದ ಪ್ರೇಮದೆದುರು ಮಗನ ಬಗ್ಗೆಯ ವಾತ್ಸಲ್ಯ ಗೌಣವಾದದ್ದು, ಪರಿಣಾಮವಾಗಿ ಮಗ ದೂರ ಸರಿದದ್ದರ ಬಗೆಗಿನ ಅಳಲು ಇಷ್ಟೆಲ್ಲವನ್ನೂ ಸೂಚ್ಯವಾಗಿ ಹೇಳುವ 'ತಾಯಿ' ಕತೆಯಾಗಲಿ ; ತನ್ನ ಹೆಂಡತಿಯೊಂದಿಗೆ ಅನೈತಿಕ ಸಂಬಂಧ ಹೊಂದಿದ ಶೀನಶೆಟ್ಟಿಯನ್ನು ಅತ್ಯಂತ ಸಂಕಷ್ಟದ—ಹುಚ್ಚು ಪ್ರವಾಹದೆದುರು ಸಾವು ಬದುಕಿನ—ಸಂದರ್ಭದಿಂದ ಉಳಿಸಬೇಕಾಗಿ ಬಂದದ್ದರ ನಡುವೆ ಸಿದ್ದನ ಮನೋನೆಲೆಯಲ್ಲಿ ನಡೆವ ಕೋಲಾಹಲವನ್ನು ಹೇಳುವ 'ಹುಲಿಯ ಹೆಂಗರುಳು' ಕತೆಯಾಗಲಿ ವ್ಯಕ್ತಿಕೇಂದ್ರಿತ ಪ್ರವಹಣೆಯ ಮೂಲಕ ವಿಶೇಷ ಪರಿಣಾಮವನ್ನು ಉಂಟುಮಾಡುವಲ್ಲಿ ಸಾರ್ಥಕವಾಗಿವೆ. ಮತ್ತೊಂದು ಕತೆಯಾದ 'ಒಂದು ಹಿನ್ನುಡಿ'ಯನ್ನು ಕುರಿತು ಅಡಿಗರು "ಕಾವ್ಯಮಯತೆಯೊಂದಿಗೆ ಒಂದು ಸಣ್ಣ ಊಹೆಯನ್ನು ಅತಿಯಾಗಿ ಬೆಳೆಸಿರುವಂತೆ ಅನ್ನಿಸುತ್ತದೆ, ಉತ್ತಮ ಭಾಗಗಳು ಇಲ್ಲಿ ಹಲವು ಇದ್ದರೂ ಸಮಗ್ರ ಪರಿಣಾಮದಲ್ಲಿ ಸೋಲುತ್ತದೆ" ಎನ್ನುವರಾದರೂ ಅವರು ಒಂದು ಸಣ್ಣ ಊಹೆಯೆಂದು ಕರೆದದ್ದು ಕಾಲ್ಪನಿಕವೆಂಬ ನೆಲೆಯಲ್ಲಿ ಪ್ರವಹಿಸುತ್ತ ಹೋಗುವ ರೀತಿಯೇ ಪರಿಣಾಮಕಾರಿಯಾಗಿದೆ ಎನ್ನಿಸುತ್ತದೆ.

ಎರಡನೆಯ ಘಟ್ಟದವೆಂದು ಕರೆಯಬಹುದಾದ ಕತೆಗಳಲ್ಲಿ ದಟ್ಟವಾದ ಪ್ರಾದೇಶಿಕತೆ ತುಂಬಿಕೊಂಡಿದೆ. ಇದರೊಂದಿಗೆ ಗ್ರಾಮೀಣ ಪರಿಸರದ ಬದುಕಿನ ಹಿನ್ನೆಲೆಯಲ್ಲಿ ನಡೆಯುವ ಪರಂಪರಾಗತವಾದದ್ದರ—ವಿಶೇಷವಾಗಿ ಸಾಮಾಜಿಕ, ನೈತಿಕ ನಿಯಮ ನಂಬಿಕೆಗಳ ಪೊಳ್ಳುತನ, ನಂಬಿಕೊಂಡ ಮೌಲ್ಯಗಳ ಶೋಧ ಮತ್ತು ಅವನ್ನೆಲ್ಲ ಪರೀಕ್ಷೆಗೆ ಒಡ್ಡುವ ಕಾಳಜಿಗಳು ಮುಖ್ಯವಾಗಿವೆ. ಇಂಥದಕ್ಕೆ ಪೂರಕವೆಂಬಂತೆ ಈ ಘಟ್ಟದ ಕತೆಗಳಲ್ಲಿ ಆಚರಣೆಗಳು, ವಿಧ್ಯುಕ್ತ ಕ್ರಿಯೆಗಳು, ಪೌರಾಣಿಕ

ಆಶಯಗಳು ವಿಪುಲವಾಗಿ ಬಂದಿವೆ. ಮಹತ್ವದ ಚಿಂತನ ದ್ರವ್ಯವನ್ನು ಪರಂಪರಾಗತವಾದದ್ದರ ಅರ್ಥಹೀನತೆಯನ್ನು ಎತ್ತಿತೋರಿಸಲು ಬಳಸಿಕೊಂಡ ಲೇಖಕ ಸಾರ್ಥಕ ಪ್ರಯತ್ನಗಳನ್ನು ಮಾಡಿದ್ದಾರೆ ಎಂಬುದನ್ನು ಈ ಕತೆಗಳು ಹೇಳುತ್ತವೆ.

ಈ ಕತೆಗಳಲ್ಲಿ ಗಮನಿಸಬಹುದಾದ ಮತ್ತೊಂದು ಮುಖ್ಯ ಅಂಶ : ಪರಸ್ಪರ ವಿರುದ್ಧವಾದದ್ದರ—ಅರ್ಥಾತ್ ರೂಢಿಬದ್ಧ ಭಾರತೀಯವಾದದ್ದು ಮತ್ತು ವೈಚಾರಿಕತೆಯಿಂದ ಆಧುನಿಕವಾದದ್ದರ—ಮುಖಾಮುಖಿಗಳನ್ನು ತಂತ್ರದೋಪಾದಿಯಲ್ಲಿ ಅಥವಾ ಕೆಲವೆಡೆ ಅದಕ್ಕೆ ಪೂರಕವಾಗಿ ತರುವುದು. ಇಂಥದರ ಪ್ರಭಾವೀ ನೆಲೆಗಳನ್ನು 'ಪ್ರಶ್ನೆ', 'ಕಾರ್ತೀಕ'ದಂಥ ಕತೆಗಳಲ್ಲಿ ಗುರುತಿಸಬಹುದಾಗಿದೆ ಇಂಥೆಲ್ಲದರ ಹಿನ್ನೆಲೆಯಲ್ಲಿ 'ಪ್ರಶ್ನೆ' ಅತ್ಯಂತ ಯಶಸ್ವಿಯಾದ ಕತೆ. ಇದರೊಂದಿಗೆ 'ಪ್ರಸ್ಥ' 'ಘಟಶ್ರಾದ್ಧ' ಗಮನಾರ್ಹವಾದ ಇನ್ನಿತರ ಕತೆಗಳು. ವೈಧವ್ಯದ ನಡುವಿನ ಪ್ರೇಮ-ಕಾಮಗಳ ಮೂಲಕ 'ಘಟಶ್ರಾದ್ಧ'ದ ಯಮುನಕ್ಕ, 'ಪ್ರಕೃತಿ'ಯ ಲಕ್ಷ್ಮಿಯಂಥ ಪಾತ್ರಗಳಲ್ಲಿ ಮೌಲ್ಯಗಳ ಶೋಧದ, ಪೊಳ್ಳುತನವನ್ನು ಜಾಹಿರು ಪಡಿಸುವುದರ ಪ್ರಯತ್ನಗಳಿದ್ದರೆ 'ಪ್ರಶ್ನೆ'ಯ ಶಾರದ—ರಂಗರ ಮೂಲಕ ಆ ಎಲ್ಲವನ್ನೂ ಒಳಗೊಂಡಂತೆ ಮುಖಾಮುಖಿಯಿದ್ದು ದ್ವಂದ್ವಾತ್ಮಕತೆಯತ್ತಣ ಮುಖಗಳು ಕಾಣಬರುತ್ತವೆ.

ಇಂಥ ಮುಖಾಮುಖಿಗಳು, ದ್ವಂದ್ವಾತ್ಮಕತೆ ಇನ್ನಷ್ಟು ಗಾಢವಾಗುತ್ತ ಪ್ರಮುಖವಾಗುತ್ತ ಹೋಗುವುದು ಮುಂದಿನ ಘಟ್ಟದ ಕತೆಗಳಲ್ಲಿ. ಎರಡನೆಯ ಘಟ್ಟದ ಕತೆಗಳಿಗೂ ಈ ಘಟ್ಟದ ಕತೆಗಳಿಗೂ ಅಂಥ ಮಹತ್ವದ ಗೆರೆಯನ್ನು ಹಾಕುವುದು ಕಷ್ಟವಾದರೂ ಅಲ್ಲಿನ ವಿಪುಲವಾದ ಆಚರಣೆ, ವಿದ್ಯುಕ್ತ ಕ್ರಿಯೆಗಳ ಬಳಕೆ ಮತ್ತು ಗ್ರಾಮೀಣವಾದ ಪ್ರಾದೇಶಿಕತೆ ಹಿಂದೆ ಸರಿದಂತೆ ತೋರುತ್ತದೆ. 'ಕ್ಲಿಪ್ ಜಾಯಿಂಟ್' ಅಂಥ ಕತೆಗಳು, 'ಆಕಾಶ ಮತ್ತು ಬೆಕ್ಕು' ಸಂಕಲನದ ಬಹುಪಾಲು ಕತೆಗಳು ಹಿಂದಿನ ಕತೆಗಳಿಗಿಂತ ಅನೇಕ ಅಂಶಗಳಲ್ಲಿ ಭಿನ್ನತೆಯನ್ನು ತೋರುವುದರೊಂದಿಗೆ ಈಯೆರಡು ಘಟ್ಟಗಳ ನಡುವಿನ ಅಂತರವನ್ನು ಹೇಳುತ್ತವೆ. ಇಲ್ಲಿ ಸೂಚಿಸಬಹುದಾದ ಮುಖ್ಯ ಕತೆಗಳಲ್ಲೊಂದಾದ 'ಕ್ಲಿಪ್‌ಜಾಯಿಂಟ್' ಸಾಕಷ್ಟು ಮಹತ್ವಾಕಾಂಕ್ಷಿಯಾದ ಕತೆಯೆಂದು ಪ್ರಚಲಿತವಾಗಿದೆ. ಕೇಶವ ಮತ್ತು ಸ್ಟೂಅರ್ಟ್‌ರ ಮೂಲಕ ಎರಡು ಭಿನ್ನ ಸಾಂಸ್ಕೃತಿಕ ಮೌಲ್ಯಗಳ ಪ್ರತಿನಿಧೀಕರಣವನ್ನುಂಟುಮಾಡುವುದರಲ್ಲೇ ಅವೆರಡರ ಮುಖಾಮುಖಿಗಳನ್ನು ತೋರಿಸಲಾಗಿದೆ. ಇಂಗ್ಲೆಂಡಿನ ಸಂದರ್ಭದಲ್ಲಿ ಬಿಚ್ಚಿಕೊಳ್ಳುತ್ತ ಹೋಗುವ ಈ ಕತೆಯಲ್ಲಿ ಕೇಶವನ 'ಭೂತ'ದಲ್ಲಿನ ವಿವರಗಳು ಅಂತರ್ಮುಖವಾದ ಅನಿಸಿಕೆಗಳಲ್ಲಿ, ಬಹಿರ್ಮುಖವಾದ ಅಭಿಪ್ರಾಯಗಳಲ್ಲಿ ಪ್ರಕಟವಾಗುತ್ತವೆ. ಸಂಪೂರ್ಣ ಪಾಶ್ಚಾತ್ಯತೆಯ ಸಭ್ಯತೆಯನ್ನಾಗಲಿ, ಭಾರತೀಯವಾದ ಆದರ್ಶವನ್ನಾಗಲಿ ಸಂಪೂರ್ಣವಾಗಿ ಒಪ್ಪಲಾರದ ಅವನ ವ್ಯಕ್ತಿತ್ವದ ಮುಖೇನ ಜಾಹಿರಾಗುವ ದ್ವಂದ್ವ ಗಮನೀಯವಾಗಿದೆ. 'ರೂತ್ ಮತ್ತು ರಸುಲ್', 'ಆಕ್ರಮಣ'ದಂಥ ಕತೆಗಳೂ ಇದೇ ಬಗೆಯ ಕಾಳಜಿಗಳನ್ನು ಹೊಂದಿವೆ. 'ಬರ' ಕತೆ ಸಾಮಾಜಿಕ ಮಹತ್ವವನ್ನು

ಪಡೆದ ಒಂದು ಉತ್ತಮ ಕತೆ. ಕ್ಷಾಮವನ್ನು, ಅನ್ನ, ನೀರಿನ ಸಮಸ್ಯೆಯನ್ನು ಕೇಂದ್ರ ವಾಗಿರಿಸಿಕೊಂಡು ಹೊರಡುವ ಈ ಕತೆಯಲ್ಲಿ ಅನಂತಮೂರ್ತಿಯವರ ಕತೆಗಳಲ್ಲಿ ಕೆಲವೆಡೆಯಾದರೂ ಅಲ್ಲಲ್ಲಿ ಸುಳಿಯುವ—ಕಾದಂಬರಿಗಳಲ್ಲಿ ಹೆಚ್ಚಾಗಿಯೇ ಕಾಣ ಬರುವ—ರಾಜಕೀಯದ ಭ್ರಷ್ಟತನದ ವಿಸಂಗತಿಗಳು ಶೋಧಿತವಾಗುವಂತೆಯೇ ಸಿದ್ಧಾಂತ-ಕ್ರಿಯಾಶೀಲತೆಗಳ ಮಧ್ಯೆ ; ಅಧಿಕಾರ ಚಲಾಯಿಸುವ ಮತ್ತು ಆಳಿಸಿ ಕೊಳ್ಳುವವರ ನಡುವೆ ; ಬುದ್ಧಿಜೀವಿಯ ಸೂಕ್ಷ್ಮತೆ ಮತ್ತು ವಾಸ್ತವದ ಕಠೋರತೆಗಳ ನಡುವೆ ಇರುವ ಕಂದರಗಳ ಎಳೆಗಳೂ ಇಲ್ಲಿ ಪರಿಶೋಧಿತವಾಗುತ್ತವೆ. ಕೃಷ್ಣ ಮೂರ್ತಿಯ ಅನಿಸಿಕೆಗಳಲ್ಲಿ, ಅಭಿಪ್ರಾಯಗಳಲ್ಲಿ, ಮನೋಗತವಾದ ಸ್ವಗತಗಳಲ್ಲಿ ಪ್ರವಹಿತವಾಗುವ 'ಆಕಾಶ ಮತ್ತು ಬೆಕ್ಕು' ಕತೆಯಲ್ಲಿ ವೈಶಿಷ್ಟ್ಯಪೂರ್ಣವಾದ ಸೃಜನಶೀಲ ಪ್ರಬುದ್ಧತೆಯನ್ನು ಲೇಖಕರು ತೋರಿದ್ದಾರೆ. ಈ ಹಿಂದಿನ ಕೆಲವು ಕತೆ ಗಳಲ್ಲಿ ತೋರಿಬಂದ ಅನೇಕಾಂಶಗಳು—ಮುಖಾಮುಖಿಗಳು, ಅಸ್ವಸ್ಥತೆ, ಲೈಂಗಿಕತೆಯ ಚೌಕಟ್ಟಿನ—ಜಾತಿಯ ಚೌಕಟ್ಟಿನ ಹೊರ ಒಳಗುಗಳು, ಆಕಾಶ ಸದೃಶವಾದ ಏನೆಲ್ಲವನ್ನೂ ಒಳಗೊಳ್ಳುವುದರ, ಆದರೆ ಏನನ್ನೂ ಒಳಗೊಳ್ಳದ ಶೂನ್ಯದಂಥ ತೋರಿಕೆ-ಅದರೆದುರು ಕುಬ್ಜತೆಯಿದ್ದು ಮಹತ್ವದ್ದಕ್ಕೆ ತುಡಿವ ಬೆಕ್ಕಿನ ಸ್ಥಿತಿ ಇಂಥ ದೆಲ್ಲ ಏಕತ್ರ ತುಂಬಿಕೊಂಡಿದೆ. ಇಷ್ಟಾಗಿ ಈ ಕತೆ ಅಷ್ಟೊಂದು ಪರಿಣಾಮಕಾರಿಯಾಗ ಲಿಲ್ಲವೆಂದು ನನಗನ್ನಿಸಿದೆ.

ಒಟ್ಟಾರೆಯಾಗಿ ಕನ್ನಡದ ಕೆಲವೇ ಮಹತ್ವದ ಲೇಖಕರಲ್ಲೊಬ್ಬರಾದ ಅನಂತ ಮೂರ್ತಿಯವರ ಕತೆಗಳಿಗೆ ತಮ್ಮದೇ ಆದ ವಿಶಿಷ್ಟತೆಯಿದೆ. ವಸ್ತು ವೈವಿಧ್ಯತೆ ಗಿಂತಲೂ ಸೃಜನಶೀಲ ಸಾಧ್ಯತೆಗಳಲ್ಲಿ ಇರುವ ಮಹತ್ವದ ಕಾಳಜಿಗಳಿಂದಾಗಿ, ಭಾಷೆ ಯನ್ನು, ಚಿಂತನ ದ್ರವ್ಯವನ್ನು ದುಡಿಸಿಕೊಳ್ಳುವ ಗುಣಗಳಿಂದಾಗಿ ಅವರ ಹಲವು ಕತೆಗಳು ಪ್ರಭಾವಶಾಲಿಯಾಗಿವೆ ; ಮಹತ್ವದವಾಗಿವೆ.

ಸಂಬಂಧಗಳು : ಟಿ. ಜಿ. ರಾಘವ

ಇದು ಟಿ. ಜಿ. ರಾಘವ ಅವರ ಎರಡನೆಯ ಕಥಾಸಂಕಲನ. ರಾಘವರ ಇಲ್ಲಿನ ಕತೆಗಳನ್ನು ಗಮನಿಸಿದಾಗ ಅವರ ಮೂಲ ಕಾಳಜಿಗಳು ಮಾನವ ಸಂಬಂಧದ ಸೂಕ್ಷ್ಮ ಗಳು ಮತ್ತು ಇದರ ಹಿನ್ನೆಲೆಗಿರುವ ನೈತಿಕ ದ್ವಂದ್ವಗಳು ಎಂಬುದು ಸ್ಪಷ್ಟವಾಗುತ್ತದೆ. ಇಂಥವರ ಶೋಧನೆಯಲ್ಲಿ ಲೇಖಕರಿಗಿರುವ ಆಸಕ್ತಿ ಎದ್ದು ಕಾಣುವಂಥದಾಗಿದೆ. ರಾಘವರ ಎಲ್ಲ ಕತೆಗಳ ನಾಯಕರು ಅಸ್ವಸ್ಥತೆಯಿಂದ ಕೂಡಿದ, ತಮ್ಮಲ್ಲೇ ಮಾತಾಡಿ ಕೊಳ್ಳುವ, ಸ್ವಗತದಲ್ಲೇ ಮುಳುಗಿದ ದುರ್ಬಲರು. "ತನ್ನ ಮನೋಗತವನ್ನು ಇನ್ನೊಬ್ಬ ನಿಗೆ ಮುಟ್ಟಿಸಲಾರದ ಸಂವಾದದ ಸಾಧ್ಯತೆಗಳು ಮುರಿದುಬಿದ್ದ ಪ್ರಪಂಚ ಇವರದ್ದು. ಆದ್ದರಿಂದ ಪರಸ್ಪರ ಸಂವಾದದಿಂದ ಉದ್ಭವಿಸುವ ನಾಟಕ ಕ್ರಿಯೆಗೆ ಬದಲಾಗಿ, ಸ್ವಗತ ದಲ್ಲಿ ನಡೆಯುವ ದ್ವಂದ್ವದ ನಾಟಕ ಇವರ ಕತೆಯ ವಸ್ತು" ಎಂದಿದ್ದಾರೆ ಯು. ಆರ್. ಅನಂತಮೂರ್ತಿ. ತನ್ನ ಸುತ್ತಣ ಪ್ರತಿಯೊಂದರಲ್ಲೂ ತಪ್ಪು-

ಸರಿಗಳ; ನಿಜ-ಸುಳ್ಳುಗಳ ಲೆಕ್ಕ ಹಾಕುತ್ತ ಕೂರುವ ಇಲ್ಲಿನ ನಾಯಕರು 'ಸದ್ಯ'ವನ್ನು ಮಾತ್ರ ನಂಬುತ್ತಾ ಉಳಿದೆಲ್ಲವನ್ನೂ ನಿರಾಕರಿಸುವಂಥವರು. ತನ್ನ ಹಿಡಿತಕ್ಕೆ ದಕ್ಕದ್ದರ ಬಗ್ಗೆ, ಅರ್ಥಪೂರ್ಣವೆಂದು ತೋರದ್ದರ ಬಗ್ಗೆ ಪ್ರಶ್ನಾತ್ಮಕವಾಗಿ, ಸಂದೇಹಾತ್ಮಕವಾಗಿ ನೋಡುವುದರ ಮೂಲಕ ಗೌರವಾರ್ಹವೆಂದು ನಂಬಿದ್ದನ್ನು, ಪರಮ ಮೌಲ್ಯವೆಂದು ಬೆಲೆ ಕೊಟ್ಟದ್ದನ್ನು ಕೆದಕುತ್ತಾರೆ, ಇಲ್ಲವೆ ವಿರೋಧಿಸುತ್ತಾರೆ ಆಧುನೀಕರಣಕ್ಕೊಳಗಾದ ಇಂದಿನ ಪರಿವರ್ತನಶೀಲ ಬದುಕಿನ ನಡುವೆ ಪರಂಪರಾಗತವಾದದ್ದೆಲ್ಲವನ್ನೂ ಒಪ್ಪಲಾರದ, ಅದೇ ಸಂದರ್ಭದಲ್ಲಿ ವೈಚಾರಿಕವಾದುದಕ್ಕೆ, ಆಧುನಿಕವಾದುದಕ್ಕೆ ಸಂಪೂರ್ಣವಾಗಿ ಬಿಚ್ಚಿಕೊಳ್ಳಲೂ ಆಗದ ವಿದಾೀವಂತ ಸಂವೇದನಾಶೀಲ ಮನಸ್ಸೊಂದನ್ನು ಇಲ್ಲಿನ ಹಲವು ಕತೆಗಳಲ್ಲಿ ಗುರುತಿಸಲು ಸಾಧ್ಯವಿದೆ. 'ಶ್ರಾದ್ಧ'ದ ನಾಯಕ ಬ್ರಾಹ್ಮಣ್ಯದ ಒಂದು ಮುಖ್ಯ ಕ್ರಿಯೆಯಾದ ಶ್ರಾದ್ಧವನ್ನು, ಅದರ ಅರ್ಥಪೂರ್ಣತೆಯನ್ನು ಪ್ರಶ್ನಿಸುತ್ತಾ, ಕೆದಕುತ್ತಾ ಹೋಗುವುದರೊಂದಿಗೆ ತನ್ನ ತಂದೆಯ ಬಗ್ಗೆ ಇದ್ದ ಭಾವನೆ, ಮನುಷ್ಯ ಸ್ವಭಾವದ ಒಡೆಯಲಾಗದ ಒಗಟುಗಳ ಬಗ್ಗೆ ತನ್ನಲ್ಲೇ ಮಾತಾಡಿಕೊಳ್ಳುತ್ತ ಹೋಗುತ್ತಾನೆ. ಇಂಥೆಲ್ಲದರ ಬಗ್ಗೆಯ ಅಸಹನೆ, ಕಿರಿಕಿರಿ, ದ್ವಂದ್ವ ಪ್ರವೃತ್ತಿಗಳೊಂದಿಗೆ ಆತ ಸಾಮಾಜಿಕವಾಗಿ ಶ್ರಾದ್ಧವನ್ನು ನಿರಾಕರಿಸುವುದರಲ್ಲಿ ಅವನ ಆಳದಲ್ಲಿ ಪ್ರಶ್ನೆ ಮತ್ತು ಸಂದೇಹಗಳು ಕಾಡುವುದನ್ನು ಕಾಣುತ್ತೇವೆ. ಅವನ ಇಷ್ಟಗಳನ್ನು ಮೀರಿ 'ಶ್ರಾದ್ಧ'ದ ಕ್ರಿಯೆ ಕೂಡ ಬೆಳೆಯುತ್ತದೆ. 'ಅಪ್ಪ' 'ಸಾವು' ಅಂತಹ ಕತೆಗಳಲ್ಲೂ ಇಂಥ ಮೌಲ್ಯಗಳನ್ನು ಪ್ರಶ್ನಿಸಿ, ಬೆದಕುವ ಬಗೆಯನ್ನು, ಅದರೊಂದಿಗೇ ಅಲ್ಲಿನ ನಾಯಕನಲ್ಲಿ ಕಾಣುವ ಎಡಬಿಡಂಗಿತನಗಳನ್ನೂ ಗಮನಿಸಬಹುದು.

ಈ ಸಂಕಲನದ 'ಸಂಕರ' ಮತ್ತು 'ನಿಸ್ಸಹಾಯಕರು' ಕತೆಗಳು ಎಡ ಪಂಥೀಯ ನಿಲುವುಗಳನ್ನು ನೆಮ್ಮಿಕೊಂಡ ನಾಯಕರ ಸುತ್ತ ಹೆಣೆದಂಥವು. ಕ್ರಾಂತಿ, ಮಾರ್ಕ್ಸ್, ಸಮಾನತೆ ಹೇಳುತ್ತಿದ್ದ 'ಸಂಕರ'ದ ನಾಯಕ ಒಬ್ಬ ಉನ್ನತ ಅಧಿಕಾರಿಯಾದ ಮೇಲೆ ಅದಕ್ಕೆ ತದ್ವಿರುದ್ಧವಾದ ನಿಲುವನ್ನು—"ಈ ದೇಶ, ಈ ಜನ ಬದಲಾಯಿಸೋಕೆ ಸಾಧ್ಯ ಇಲ್ಲ. ಹಣ ಮಾಡಿ ಮಜ ಮಾಡೋನು ಬುದ್ಧಿವಂತ. ಸುಮ್ಮನಿರೋನು ಪೆದ್ದ"—ತಾಳುತ್ತಾನೆ. ತಮ್ಮ ತಮ್ಮ ವ್ಯಕ್ತಿತ್ವದ ವೈಭವೀಕರಣಕ್ಕೆ ಮಾತ್ರ ಹಾತೊರೆಯುವ, ಬೇರೆಯವರು ನಮ್ಮ ಬಗ್ಗೆ ತಪ್ಪು ತಿಳಿದರೆ? ಎಂಬ ಆತಂಕದಲ್ಲಿ ಮಾತ್ರ ಕ್ರಿಯಾಶೀಲರಾಗಿ, ನಿಜವಾದ ಅರ್ಥದಲ್ಲಿ ಕ್ರಿಯಾಶೂನ್ಯರಾಗುವ ಕಾಮ್ರೇಡುತನದ ಪೊಳ್ಳುತನವನ್ನು ಹೇಳುತ್ತದೆ, 'ನಿಸ್ಸಹಾಯಕರು' ಕತೆ. ಈ ಸಂಕಲನದ ಮತ್ತೊಂದು ಗಮನಾರ್ಹವಾದ ಕತೆ 'ಸಂಬಂಧಗಳು'.

ಇಲ್ಲಿನ ಎಲ್ಲ ಕತೆಗಳೂ—'ಸಂಕರ'ವೊಂದನ್ನು ಹೊರತು—ನಿರೂಪಕನನ್ನು ಕೇಂದ್ರದಲ್ಲಿರಿಸಿಕೊಂಡು ಪ್ರಥಮ ಪುರುಷದಲ್ಲಿ ಹೊರಡುವುದು ಕೇವಲ ಆಕಸ್ಮಿಕವಾಗಿರದೆ

ಆ ವಸ್ತುವಿಗೆ ಬಂದ ಅನಿವಾರ್ಯ ತಂತ್ರಕ್ಕೆ ಸಂಬಂಧಿಸಿದೆಯೆಂದು ತೋರುತ್ತದೆ. ಅಸಹನೀಯ ಸ್ಥಿತಿಯ ಡೋಲಾಯಮಾನವನ್ನು, ದ್ವಂದ್ವ ಪ್ರವೃತ್ತಿಗಳನ್ನು ಲೇಖಕ ತನ್ನ ಬೌದ್ಧಿಕ ನಿಯಂತ್ರಣಕ್ಕೆ ಒಳಪಡಿಸಿ ಪರಿಣಾಮಕಾರಿಯಾಗಿ ಹೇಳುವುದು ಹೀಗಲ್ಲದೆ ಸಾಧ್ಯವಾಗುತ್ತಿರಲಿಲ್ಲವೇನೊ. ಎರಡು ದಶಕಗಳ ಹರಹಿನ ಕಾಲಾವಧಿಯಲ್ಲಿ ರಚಿತವಾಗಿರುವ ಈ ಕತೆಗಳಲ್ಲಿ ಆರಂಭದಲ್ಲೇ ಬರುವ 'ಸತ್ಯ' (1961) ಕತೆ ಮತ್ತು, ನಂತರದ 'ಶ್ರಾದ್ಧ', 'ಅಪ್ಪ' ಮತ್ತು ಕೊನೆಗೆ ಬಂದಿರುವ ಈಚಿನ 'ಸಂಬಂಧಗಳು' (1980) ಇಂಥ ಕತೆಗಳನ್ನು ಗಮನಿಸಿದಾಗ ಆಗಿರುವ ಬದಲಾವಣೆಗಳು ಗಮನಾರ್ಹ ವಾಗಿವೆ. ಬಾಲ್ಯದ ಕುತೂಹಲ ಪೂರ್ಣ ವಿವರಗಳ ಮೂಲಕ ಆಗುವ ಶೋಧ ಆರಂಭದ ಕತೆಗಳಲ್ಲಿದ್ದರೆ, ನಂತರದ ಕತೆಗಳಲ್ಲಿ ಪ್ರಬುದ್ಧಾವಸ್ಥೆಯಲ್ಲಿ ನಿಂತ ವ್ಯಕ್ತಿಯ ವಿವಿಧ ಸಂಬಂಧಗಳ ಮೂಲಕ ನಡೆಯುವ ಶೋಧಗಳು ಕಾಣಬರುತ್ತದೆ.

ಒಂದಿಷ್ಟು ಕತೆಗಳು : ಬಿ. ಟಿ. ದೇಸಾಯಿ

ಎಂಟು ಕತೆಗಳಿರುವ ಈ ಸಂಕಲನದಲ್ಲಿ ಕೆಲವನ್ನು ಹೊರತು ಉಳಿದ ಬಹುಪಾಲು. ಕತೆಗಳ ಕೇಂದ್ರ ಕುಟುಂಬವಾಗಿದ್ದು. ಪ್ರೀತಿ, ಸಂತೋಷಗಳು ವ್ಯಕ್ತವಾದಂತೆಯೇ ಛಿದ್ರಗೊಂಡ ಮಾನವ ಸಂಬಂಧಗಳೂ ಚಿತ್ರಿತವಾಗಿವೆ. ಅವರ ಕತೆಗಳನ್ನು ಗಮನಿಸು ವಾಗ ಮುಖ್ಯವಾಗಿ ಎರಡು ಅಂಶಗಳು ಗಮನಕ್ಕೆ ಬರುತ್ತವೆ. ಬಾಲ್ಯದಿಂದ ಪ್ರೌಢಾವಸ್ಥೆಯವರೆಗಿನ ನೆನಪುಗಳಲ್ಲಿ ಸೇರಿದ ವಿವರಗಳನ್ನು ನಿರೂಪಕ ಹೇಳುತ್ತಾ ಹೋಗುವುದು, ಒಂದು. ಮತ್ತೊಂದು ಮಾನವ ಪ್ರಕೃತಿಯ ಶೋಧ. ಮೊದಲ ಅಂಶಕ್ಕೆ ಸಂಬಂಧಿಸಿದಂತೆ 'ಹೋರಿ', 'ಮೋಡಕಾ ಬಯಿಬಾರ್', 'ಅನೀತಿ' ಇಂಥ ಕತೆಗಳನ್ನು ಗಮನಿಸಬಹುದು. ನಿರೂಪಕನ ಬಾಲ್ಯ ಮಿತ್ರನಾದ ವ್ಯಕ್ತಿ ಹೋರಿ ಯೊಂವರ ದೆಸೆಯಿಂದ ಆತಂಕದ ಸ್ಥಿತಿಯಲ್ಲಿರುವುದರೊಂದಿಗೆ 'ಹೋರಿ' ಕತೆ ಆರಂಭವಾಗುತ್ತದೆ. ಅದಕ್ಕೆ ಪೂರಕವಾಗಿ ಬರುವ ಆ ಬಾಲ್ಯದ ನೆನಪುಗಳು, ಅದ ರೊಂದಿಗೆ ರಂಗಣ್ಣನ ಹಟವಾದಿತ್ವ, ಪ್ರೇಮ, ಹೋರಿ ಅವನ ಪ್ರತಿಷ್ಠೆಯ ಪ್ರಶ್ನೆ ಯಾಗುವುದು ಇವೆಲ್ಲ ಬಂದಿವೆ. ಹೋರಿ ಇಷ್ಟಕ್ಕೆ ಮಾತ್ರವೇ ಅಲ್ಲದೆ ಮಾನವನ ವಿಶಿಷ್ಟ ಮುಖವೊಂದರ ಸಂಕೇತ ಕೂಡ ಆಗಿದೆ. 'ಮೋಡಕಾ ಬಯಿಬಾರ್', 'ಅನೀತಿ'ಯಂಥ ಕತೆಗಳಲ್ಲೂ ಬಾಲ್ಯದ ವಿವರಗಳು ಮುಖ್ಯವಾಗಿವೆ.'ಅನೀತಿ' ಈ ಸಂಕಲನದ ಉತ್ತಮ ಕತೆಗಳಲ್ಲೊಂದು. ಲೌಕಿಕವನ್ನು ಗೌಣವಾಗಿ ಕಂಡ ನಿರ್ಲಿಪ್ತ ಜಂಗಮ ಪಡದಯ್ಯನ ಪಾರಮಾರ್ಥಿಕ ಒಲವಿನ ಕಾರಣದಿಂದಾಗಿ ಮತ್ತು ಅವನ ಒಟ್ಟು ಬದುಕಿನ ಬಡತನದ ಕಾರಣದಿಂದಾಗಿ ಅವನ ಕುಟುಂಬ ವಿಘಟಿತವಾಗುವುದು ಇಲ್ಲಿ ಚಿತ್ರಿತವಾಗಿದೆ. ಪಡಯ್ಯ ಲೌಕಿಕಕ್ಕೆ ಹೆಚ್ಚು ಹಚ್ಚಿಕೊಳ್ಳದ ನೆಲೆಯಲ್ಲಿ ಅವನ ಹೆಂಡತಿಗೆ ಅನ್ಯಾಯ ಮಾಡುವುದರಲ್ಲಿ ; ಅವನ ಹೆಂಡತಿಯನ್ನು ಬಸೆಟ್ಟೆಪ್ಪ, ಚಿನ್ನಪ್ಪನಂಥವರು ಬಯಸುವುದರಲ್ಲಿ ; ಅವಳೊಂದಿಗೆ ಸಂಬಂಧ ಇಟ್ಟುಕೊಂಡ ಚಿನ್ನಪ್ಪನನ್ನು

ಪುಂಡ ಗುಂಪೊಂದು ಮುಗಿಸುವುದರಲ್ಲಿ-ಹೀಗೆ ಅನೀತಿ ಹರಡಿಕೊಳ್ಳುತ್ತವೆ. 'ಹಿಂಸೆ' 'ತಾಯಿಯ ಪ್ರೀತಿ'ಯಂಥ ಕತೆಗಳಲ್ಲಿ ಮಾನವ ಪ್ರಕೃತಿಯ ಶೋಧ ತೀವ್ರವಾಗಿರು ವುದನ್ನು ಗಮನಿಸಬಹುದು. ಮನುಷ್ಯನ ವಿಚ್ಛಿದ್ರಕ ವರ್ತನೆಗಳು, ತತ್ಕಾರಣ ದಿಂದ ಕೌಟುಂಬಿಕ ಸಂಬಂಧಗಳಲ್ಲಿನ ಒಡಕುಗಳು, ಸಿಡುಕು, ಅಕಾರಣವಾದ ದ್ವೇಷಗಳು ಈ ಶೋಧದ ಹಿನ್ನೆಲೆಯಲ್ಲಿ ಬರುತ್ತವೆ. ಪ್ರಸ್ತುತ ಸಂದರ್ಭದ ಹೆಣ್ತನದ, ವಿಶೇಷವಾಗಿ ತಾಯ್ತನದ ವಿವರಣೆಯಿಂದ ಆರಂಭವಾಗುವ 'ತಾಯಿಯ ಪ್ರೀತಿ' ಕತೆಯಲ್ಲಿ ಮುಗ್ಧ ಕೌಟುಂಬಿಕ ಸಂಬಂಧಗಳ ವಿವರಗಳಲ್ಲಿ ತಾಯ್ತನದ ಮುಖಗಳ ಶೋಧ ಕಾಣಬರುತ್ತದೆ. ಬಾಲಕನೊಬ್ಬ ಪರಿಸರದ ಕಾರಣಗಳಿಂದ ಅಪರಾಧಿ ಪ್ರಜ್ಞೆಯಲ್ಲಿ ವಿಚ್ಛಿದ್ರಗೊಳ್ಳುವ, ಕೊನೆಯಲ್ಲಿ ಅನಿರೀಕ್ಷಿತ ಸಾವಿನಿಂದ ಒಂದು ಮಗುವನ್ನು ಬದುಕಿಸಿ ತಾನು ಅದಕ್ಕೆ ಬಲಿಯಾದ್ದನ್ನು ಕುರಿತು ಹೇಳುವ ಕತೆ 'ಆದರ್ಶವೀರ ಬಾಲಕ'.

ದೇಸಾಯಿಯವರ ಕತೆಗಳಲ್ಲಿ ನಿರೂಪಕ ಓದುಗನೊಂದಿಗೆ ಸಂವಾದಿಸುವುದು ಮತ್ತೊಂದು ಮುಖ್ಯವಾದ ಅಂಶ. ಅವರ ಎಲ್ಲ ಕತೆಗಳಲ್ಲೂ ಇದನ್ನು ಕಾಣಬಹು ದಾಗಿದ್ದು ಕೆಲವೆಡೆ ತೀರ ಸ್ಪಷ್ಟವಾಗಿ, ಕೆಲವೆಡೆ ಅಸ್ಪಷ್ಟವಾಗಿ ಪ್ರಶ್ನಾತ್ಮಕ ಮಾತಿನಲ್ಲೋ, ಆಶ್ಚರ್ಯದಲ್ಲೋ, ಹೇಳಿಕೆಗಳಲ್ಲೋ ಇದರ ಸ್ಪಷ್ಟವಾದ ಕುರುಹುಗಳನ್ನು ಗುರುತಿಸ ಬಹುದು. ನಿರೂಪಕ ಓದುಗನೊಂದಿಗೆ ಬೆಳೆಸುವ ಆತ್ಮೀಯ ಸಂವಾದದ ನೆಲೆಯಲ್ಲಿ ಇದರ ಸಾರ್ಥಕತೆಯಿದೆಯೆಂದು ತೋರುತ್ತದೆ.

ಇತಿಹಾಸ : ಎಸ್. ದಿವಾಕರ್

ಈ ವರ್ಷದ ಮತ್ತೊಂದು ಪ್ರಮುಖ ಕಥಾ ಸಂಕಲನ ಎಸ್. ದಿವಾಕರ್ ಅವರ 'ಇತಿಹಾಸ'. ಒಟ್ಟು ಒಂಬತ್ತು ಕತೆಗಳಿರುವ ಈ ಸಂಕಲನದ ಕತೆಗಳನ್ನು ಎರಡು ಭಾಗ ಗಳಲ್ಲಿ ಅಳವಡಿಸಲಾಗಿದೆ. ಒಂದೊಂದು ಬಗೆಯ ಕತೆಗಳು ಒಂದೊಂದು ಭಾಗದಲ್ಲಿವೆ. ಆಯಾ ವಿಭಾಗದ ಕತೆಗಳು ತೋರ್ಪಡಿಸುವ ಕೆಲವು ಸಾಮಾನ್ಯ ಲಕ್ಷಣಗಳ ಹಿನ್ನೆಲೆ ಯಲ್ಲಿ ಇಂಥ ವಿಭಾಗೀಕರಣ ಅರ್ಥಪೂರ್ಣವಾದುದಾಗಿದೆ. ಈ ಕುರಿತು ಶಾಂತಿನಾಥ ದೇಸಾಯಿಯವರು "ಮೊದಲನೆಯ ಭಾಗದಲ್ಲಿ ಮಾನವೀ ಜೀವನದ 'broken Images' ಗಳನ್ನು ಚಿತ್ರಿಸುವ, ನಿತ್ಯಜೀವನಕ್ಕೆ ಸಮೀಪವೆನಿಸುವ ಪಾತಳಿಯ ಕತೆಗಳಿದ್ದರೆ, ಎರಡನೆಯ ಭಾಗದಲ್ಲಿ 'controlled dreams' ಗಳಾದ ಕಾಲ್ಪನಿಕ ಕತೆಗಳಿವೆ. ಎರಡರಲ್ಲೂ ಅನ್ವೇಷಣೆಯ ದೃಷ್ಟಿ ಒಂದೇ ಆಗಿದ್ದರೂ ಅದರ ಕ್ರಮಗಳು ಮಾತ್ರ ಬೇರೆ ಬೇರೆ" ಎಂದಿದ್ದಾರೆ.

ಮೊದಲ ಭಾಗದ ಕತೆಗಳು ನಗರಕೇಂದ್ರಿತ ಪರಿಸರದ ಘಟನೆಗಳಲ್ಲಿ ನಡೆದಿರು ವಂಥವುಗಳಾಗಿ ಸಾಮಾಜಿಕ ಮಹತ್ವವನ್ನು ಪಡೆಯುತ್ತವೆ. ಶೋಷಣೆ, ಕ್ರೌರ್ಯ ಗಳಂಥ ಅಂಶಗಳ ಜೊತೆಗೆ ಅಸ್ವಸ್ಥತೆ, ಅಸಹಾಯಕತೆ, ಏಕಾಕಿತನ, ಪರಕೀಯತೆ,

ಅನರ್ಹವಾದುದರ ಮಹತ್ವ ಇತ್ಯಾದಿಗಳು ವಿಶೇಷವಾಗಿವೆ. ಇದನ್ನೆಲ್ಲ ಒಳಗೊಂಡಂತೆ ಆವರಿಸಿಕೊಂಡಿರುವ ಸಾಮಾಜಿಕ ಕಾಳಜಿಗಳು ಗಮನಾರ್ಹವಾಗಿವೆ. ಈ ಬಗೆಯ ಕತೆಗಳಲ್ಲಿ ಮುಖ್ಯವಾದುವೆನ್ನಬಹುದಾದ 'ಕ್ರೌರ್ಯ' 'ಇತಿಹಾಸ'ಗಳ ಬಗ್ಗೆ ಇಲ್ಲಿ ಚರ್ಚಿಸಬಹುದೆಂದು ತೋರುತ್ತದೆ. 'ಕ್ರೌರ್ಯ' ಕತೆಯಲ್ಲಿ ಬರುವ 'ಅಲಮೇಲು' ಪೋಲಿಯೋರೋಗಕ್ಕೆ ತುತ್ತಾದ, ವಿಕೃತರೂಪಿಯಾದ "ಮುವತ್ತಾರು ವರ್ಷವಾದರೂ ಅವಳೊಬ್ಬ ಮಹಿಳೆಯಾಗಿ" ಬೆಳೆಯಲಾರದ ನಿರ್ಭಾಗ್ಯಳು. ಸುಶಿಕ್ಷಿತ ತಂದೆ ತಾಯಿಗಳಿಗೆ ಮಗಳಾಗಿ ಹುಟ್ಟಿದ ಅಲಮೇಲು ಅವರ ವಾತ್ಸಲ ದಿಂದ ವಂಚಿತಳಾಗುತ್ತಾಳೆ. ಪರಿಸರದ ಪ್ರೀತಿಯಿಂದಲೂ ವಂಚಿತಳಾಗುತ್ತಾಳೆ. ತನ್ನದೇ ಆದ ಯಾವ ಕಾರಣವೂ ಇಲ್ಲದೆ ದುರ್ಬಲೆಯಾದುದರ ಅಸಹಾಯಕತೆಯ ನಡುವೆಯೇ ಪ್ರೇಮದ ತುಡಿತ, ಕೊನೆಯಲ್ಲಿ ಅನಿರೀಕ್ಷಿತವಾದ ಚೂರಿಯ ಇರಿತಕ್ಕೆ ಒಳಗಾಗುವುದು, ಆ ಸಾವಿನ ಸ್ಥಿತಿಯಲ್ಲಿ ಪಳನಿಚಾಮಿಯಂಥ ಅಪರಿಚಿತನಲ್ಲಿ ಕರುಣೆ, ಪ್ರೀತಿ, ವಾತ್ಸಲ್ಯದಂಥ ಏನೆಲ್ಲವನ್ನೂ ಕಾಣುವುದು—ಇಷ್ಟು ಕತೆಯ ಹಂದರದಲ್ಲಿ ಕ್ರೌರ್ಯ ಕೇಂದ್ರ ಸ್ಥಾಯಿಯಾಗಿದೆ. ವಿಶಿಷ್ಟಾದ್ವೈತದ ಚರ್ಚೆಯಲ್ಲಿ ತೋರುವ ಆಸಕ್ತಿ ಯನ್ನು ಮಗಳ ಬಗ್ಗೆ ತೋರಬಯಸದ ತಂದೆ ತಾಯಿಗಳಲ್ಲಿ ; ಅನಿರೀಕ್ಷಿತವಾಗಿ ಚೂರಿಯ ಇರಿತಕ್ಕೆ ಬಲಿಯಾಗುವಲ್ಲಿ ; ಹುಟ್ಟುತ್ತಲೇ ಪೋಲಿಯೋ ರೋಗಿ ಯಾಗಿ ಕುರೂಪಿಯಾದದ್ದರಲ್ಲಿ,—ಹೀಗೆ ಅದು ಬೇರೆ ಬೇರೆ ನೆಲೆಗಳಲ್ಲಿ ವ್ಯಕ್ತ ವಾಗುತ್ತದೆ.

'ಇತಿಹಾಸ' ಕತೆ ಏಕಮುಖವಾದ ಚರಿತ್ರೆ ಸುಳ್ಳು ಹೇಳುವುದನ್ನು ಅದು ಅಪೂರ್ಣವಾಗುವುದನ್ನು ಹೇಳುವಂಥದು. ಐತಿಹಾಸಿಕ ಕಾದಂಬರಿಗೆ ವಿವರಗಳನ್ನರಸಿ ಹೊರಟ ಲೇಖಕ 'ಮಾರಾನಾಯಕ'ನ ಪ್ರಜೆಗಳ ಮೇಲಿನ ಪ್ರೇಮ, ಅವನ ದಾನ ಧರ್ಮ, ದೈವ ಭಕ್ತಿ, ಶಕ್ತಿಪರಾಕ್ರಮ, ಕಟ್ಟಿಸಿದ ದೇವಾಲಯಗಳು, ಕೆರೆ, ಧರ್ಮ ಛತ್ರಗಳು—ಇಷ್ಟರ ಚಿತ್ರ ಮಾತ್ರ ಅವನ ಬಗೆಗಿನ ನೈಜ ಇತಿಹಾಸ ಆಗಲಾರದೆಂಬ ನಿಲುವನ್ನು ತಾಳಿ ತನ್ನ ಕಾದಂಬರಿಯನ್ನು ಹರಿದೆಸೆಯುತ್ತಾನೆ. ಯಾವುದನ್ನು ಅಷ್ಟು ಮುಖ್ಯವಲ್ಲವೆಂದು ಭಾವಿಸಿದ್ದನೋ ಅದು ಮುಖ್ಯವೆಂದು ನಂಬುತ್ತಾನೆ. ಇದು ಆಗುವುದು ಆ ಲೇಖಕ (ಸದಾನಂದ) ಕ್ರೂರಿಯಾಗಿಯೂ ಅದನ್ನು ಮುಚ್ಚಿ ವೈಭವ ವನ್ನು ತೋರುತ್ತಿದ್ದ ಗುರಪ್ಪನ ಕ್ರೂರ ಮುಖಗಳ ಪರಿಚಯವನ್ನು ಮಾಡಿಕೊಳ್ಳು ವುದರಿಂದ. ಮಾರಾನಾಯಕನ ವಿವರಗಳು ಗುರಪ್ಪನ ವಿವರಗಳೊಂದಿಗೆ ಸಮಾನಾಂತರವಾಗುವುದರಲ್ಲಿ ಅರ್ಥಪೂರ್ಣವಾದ ವ್ಯಂಗ್ಯ ಸೂಚಿತವಾಗುತ್ತದೆ. 'ಮೃತ್ಯುಂಜಯ' ಕತೆಯ ನಾಯಕ ಸತ್ತ ವ್ಯಕ್ತಿಯೊಬ್ಬನ ಬಗ್ಗೆ ಮಾಡುವ ಕಲ್ಪನೆಗಳು, ಅದನ್ನು ಸಮರ್ಥಿಸಿಕೊಳ್ಳಲು ಅರಸುವ ಕ್ರಿಯೆ ಕುತೂಹಲಕಾರಿಯಾಗಿದೆ. ವಿಶಿಷ್ಟವಾದುದೇನನ್ನೂ ಕಟ್ಟಿಕೊಡಲಾರದ ಈ ಕತೆ ಹುಡುಕುವ ಕ್ರಿಯೆಯಲ್ಲೇ ಅರ್ಥಪೂರ್ಣವಾಗುತ್ತದೆ. 'ನೆಲೆ' ಮತ್ತು 'ಅನಾಥರು' ಈ ಭಾಗದಲ್ಲಿ ಬರುವ ಇನ್ನಿತರ ಕತೆಗಳು.

ಮೊದಲ ಭಾಗದ ಕತೆಗಳಲ್ಲಿ ವ್ಯಾವಹಾರಿಕ ಜಗತ್ತಿನ ಘಟನೆಗಳು ಕಾಣಬಂದರೆ, ಎರಡನೆಯ ಭಾಗದ ಕತೆಗಳಲ್ಲಿ ಅಂತಲ್ಲದ, 'ಅಸಂಭಾವ್ಯ'ವೆಂಬಂಥ ಘಟನೆಗಳು ಬರುತ್ತವೆ. ಆದರೆ ಇಂಥ ಅಸಂಭಾವ್ಯತೆಗಳು ಮಹತ್ವದ ಸಾಮಾಜಿಕ ಕಾಳಜಿಗಳನ್ನು ಸಂಕೇತಿಸುತ್ತವೆ. ಉದಾ : ಕಾಲನೇಮಿ ಮತ್ತು ಕಣ್ಣುಗಳು ಕತೆಯಲ್ಲಿನ ಹಾರುವ ಮಂದಿ, ಭೂಮಿತಾಯಿಯ ಎದೆಗೇ ಬೇರು ಬಿಟ್ಟಿದ್ದ ಕಾಲನೇಮಿ, ಕನ್ನಡವಲ್ಲದ ಭಾಷೆಯಲ್ಲಿ ಬರೆದ ಕಡತಗಳು ಇಂಥವೆಲ್ಲ ಪಟ್ಟಭದ್ರ ಶಕ್ತಿಯೊಂದರ, ಆ ಬಗೆಯ ಮತ್ತಿತರ ವಿಸಂಗತಿಗಳ ಕಪಿಮುಷ್ಟಿಯನ್ನು ಸಂಕೇತಿಸುತ್ತವೆ. ಈ ಭಾಗದಲ್ಲಿ ಬಂದ 'ದಾರಿಯಲ್ಲಿ' ಮತ್ತು 'ಪ್ರಾಣದೇವರು' ಈ ಬಗೆಯ ಇನ್ನೆರಡು ಕತೆಗಳು. ಕೊನೆಗೆ ಬಂದ 'ಒಂದು ಘಟನೆ' ಒಂದು ಪುಟ್ಟ ಘಟನೆಯ ಸುತ್ತ ಇರುವಂಥದು. ಇಡೀ ಈ ಕತೆಯಲ್ಲಿ ಸೂಕ್ಷ್ಮಾತಿಸೂಕ್ಷ್ಮವಾದುದರ ವರ್ಣನೆ ಅನನ್ಯವೆಂಬಂತೆ ಮೂಡಿ ಬಂದಿದೆ. ಸಂಕೀರ್ಣತೆಯನ್ನು, ಕಾವ್ಯತ್ವವನ್ನು, ಮಹತ್ವದ ಸಾಮಾಜಿಕ ಕಾಳಜಿಗಳನ್ನು ಮೈಗೂಡಿಸಿಕೊಂಡ ದಿವಾಕರರ ಕತೆಗಳು ಕನ್ನಡ ಕಥಾಲೋಕಕ್ಕೆ ಮಹತ್ವದ ಕೊಡುಗೆಗಳಾಗಿವೆ.

ಬೆತ್ತಲೆ ಅರಸನ ರಾಜರಹಸ್ಯ : ಎಂ. ಎಸ್. ಕೆ. ಪ್ರಭು

ಎಂ. ಎಸ್. ಕೆ. ಪ್ರಭು ಅವರ ಆರು ಕತೆಗಳಿರುವ ಸಂಕಲನ. ಇಲ್ಲಿನ ಎಲ್ಲ ಕತೆಗಳೂ 'ಫ್ಯಾಂಟಸಿ'ಯ ತರಹದ ಬರಹಗಳು. ಅಸಂಭಾವ್ಯವೆಂಬಂಥ ಘಟನೆ, ವಿವರಗಳಲ್ಲಿ ಇಲ್ಲಿನ ಕತೆಗಳು ನಿರ್ಮಿತವಾಗಿವೆ. ಮನುಷ್ಯನನ್ನು ಎಂದೂ ಕಾಡುವ ಕುತೂಹಲಜನ್ಯ ಪ್ರಶ್ನೆಗಳು, ವಿಸ್ಮಯ, ಸುಪ್ತ ಪ್ರಜ್ಞೆಯ ಪಾತಳಿಯಲ್ಲಿನ ಮನೋ ವಿಭ್ರಮೆಗಳು ಚಿತ್ತಸ್ಥಿತಿಯ ವಿಕಾರತೆ—ಇತ್ಯಾದಿಗಳು ಪ್ರಭು ಅವರ ಕತೆಗಳಲ್ಲಿ ಕಾಣಬರುತ್ತವೆ. ಇಂಥದಕ್ಕೆ ಯಾವ ಕತೆಯೂ ಅಪವಾದವಾಗಿಲ್ಲ.

ಇಂಥ ಸುಪ್ತಪ್ರಜ್ಞೆಯ ಪಾತಳಿಗೆ ಸೇರಿದ ವಿಚಿತ್ರವರ್ತನೆಗಳು, ವ್ಯಾವಹಾರಿಕ ಬದುಕಿನಲ್ಲಿ ಅಸಂಭಾವ್ಯವೆಂಬಂಥ ಘಟನೆಗಳು ಬಿಚ್ಚಿಕೊಳ್ಳುವ ವಾಸ್ತವದ ನೆಲೆಗಳು, ಸಾಂಕೇತಿಕತೆಗಳು ಗಮನಾರ್ಹವಾಗಿವೆ. 'ಎರಡು ತೆಂಗಿನ ಮರದುದ್ದ ಮನುಷ್ಯ' ಕತೆಯಲ್ಲಿ ಬಾಲ್ಯ ಸಹಜವಾದ ಗುಪ್ತ ಸಂಗತಿಗಳ ಬಗೆಗಿನ ಕುತೂಹಲ, ಪ್ರಶ್ನಾತ್ಮಕತೆಯೊಂದಿಗೆ ಆರಂಭವಾಗುತ್ತ ಮುಂದುವರಿದಂತೆ ಸೃಷ್ಟಿ, ದೇವರು, ಹುಟ್ಟು, ಸಾವು, ಚೇತನಗಳತ್ತ ಬೆಳೆಯುತ್ತ ಹೋದ ಪ್ರಶ್ನಾತ್ಮಕತೆಯನ್ನು ಕಾಣಬಹುದು. ಹೀಗೆ ಪ್ರಶ್ನೆಗಳಲ್ಲೇ ಬದುಕುವ ವ್ಯಕ್ತಿ ತನಗೆ ತಾನೇ ಪ್ರಶ್ನೆಯಾಗುವಂತೆ ಬೆಳೆಯುವುದಲ್ಲದೆ ಪರಿಸರಕ್ಕೂ ಪ್ರಶ್ನೆಯಾಗುತ್ತಾನೆ. ಅವನು ಅನೇಕ ಕಾಲ ಶೋಧಿಸಿದ "ಒಮ್ಮೆ ಶುರು ಮಾಡಿ ಒಂದೇ ಉಸಿರಿಗೆ ಓದುತ್ತಾ ಹೋದರೂ, ಪ್ರಶ್ನಾತ್ಮಕ ಚಿಹ್ನೆ ಬರುವ ವೇಳೆಗೆ ಅನೇಕ ತಿಂಗಳು, ವರ್ಷಗಳೇ ಬೇಕಾಗುವಂಥ" ಬೀಜ ಪ್ರಶ್ನೆಯಾಗಲಿ, ಅವನನ್ನು 'ಎರಡು ತೆಂಗಿನ ಮರದುದ್ದ ಮನುಷ್ಯ' ಎಂದು ಕರೆದುದಾಗಲಿ ಕಥಾ ಚೌಕಟ್ಟಿನಲ್ಲಿ ಅತ್ಯಂತ ಕ್ರಿಯಾತ್ಮಕವಾಗಿವೆ. ಕುತೂಹಲಗಳು ಕುತೂಹಲವಾಗಿಯೇ ಉಳಿಯುತ್ತ ಪ್ರಶ್ನಾತ್ಮಕತೆ, ತನ್ಮೂಲಕ ಮನೋವಿಕೃತಿಗೆ ಕಾರಣವಾದುದು ನಮ್ಮ ಸಾಂಸ್ಕೃತಿಕ

ಸಂದರ್ಭದ ವಿಸಂಗತಿಯೊಂದನ್ನು ಹೇಳುತ್ತದೆ. "ಅವನು ಹತ್ತಿರ ಬಂದಂತೆ ಆಳಿನ ಉದ್ದ ಕೇವಲ ಐದೂವರೆ ಅಡಿ, ಮಿಕ್ಕ ಮೇಲಿನ ಎತ್ತರ ಅವನ ಪ್ರಶ್ನೆಯನ್ನು ದಾಖಲಿಸಿದ್ದ ಕಡತದ್ದೆಂದು ಊಹಿಸಲು ಜನರಿಗೆ ತುಂಬಾ ಕಾಲ ಹಿಡಿಯಲಿಲ್ಲ" ಎಂಬಂಥ ವಿವರಗಳಲ್ಲಿ ವಿಶಿಷ್ಟ ತರ್ಕವೊಂದು ರೂಪಿತವಾಗುತ್ತದೆ.

ಅದೇ ರೀತಿ 'ತೂಕ ಅಳತೆ ಇತ್ಯಾದಿ' ರಂಗಪ್ಪನ ಮನೋನೆಲೆಯಲ್ಲಿನ ವಿಚಿತ್ರ ಗಳನ್ನು ಕಟ್ಟಿಕೊಡುವಂಥದು. ಕನಸು ಇಲ್ಲಿ ಪ್ರಧಾನವಾಗಿದ್ದು, ಅದರ ಆವರ್ತನೆಯೇ ಇಲ್ಲಿನ ತಂತ್ರ ಕೂಡ ಆಗಿದೆ. ಈ ಆವರ್ತನೆಯಿಂದಾಗಿ ಒಂದು ಸ್ವಾಪ್ನಿಕ ಲೋಕವೇ ಕತೆಯೊಳಗೆ ನಿರ್ಮಿತವಾಗುತ್ತದೆ. ಅಸ್ಪಸ್ಥತೆ, ಏಕಾಕಿತನ, ಪರಕೀಯತೆ, ಭಯದಂಥ ಅಂಶಗಳು ಸೂಕ್ಷ್ಮವಾಗಿ ಪ್ರಕಟವಾಗುತ್ತವೆ. ವಾಸ್ತವ-ಅವಾಸ್ತವಗಳು ಪರಸ್ಪರ ಪೂರಕವಾಗಿದ್ದು ಮನೋವೈಚಿತ್ರ್ಯಗಳ ತಪ್ಪು—ಸರಿ, ನಿಜ—ಸುಳ್ಳುಗಳ ಲೆಕ್ಕಾಚಾರ ಗಳಿಗೆ ಅಳತೆ ತೂಕಗಳು ಸಂವಾದಿಗಳಾಗಿ ಬಂದು ಅರ್ಥಪೂರ್ಣವಾಗುತ್ತವೆ. ಸ್ವಸ್ಥ ನಾಗರಿಕ ಬದುಕನ್ನು ದುಷ್ಟಶಕ್ತಿಯೊಂದು ವಿಘಟಿತವಾಗಿಸುವುದರ, ವಿಕೃತವಾಗಿಸು ವುದರ ಸೂಕ್ಷ್ಮಗಳು 'ಹಕ್ಕಿಗಳು ಮತ್ತು ಕೈಗಳು' ಸೂಚಿಸುವುದಾದರೆ ; ಅರಸನ ವಿಕೃತ ರೋಗವೊಂದಕ್ಕೆ ಬದುಕಿನ ಎಲ್ಲ ಮುಖಗಳಲ್ಲೂ ಪರಿಹಾರವನ್ನರಸುವುದನ್ನು ಹೇಳುವ 'ಬೆತ್ತಲೆ ಅರಸನ ರಾಜ ರಹಸ್ಯ' ಪಟ್ಟಭದ್ರ ಶಕ್ತಿಯೊಂದರ ಅಮಿತ ದಾಹ ವನ್ನು ತಣಿಸಲು ಇಡೀ ಪರಿಸರದ ಬದುಕು ವಿಕೃತವಾಗುವುದರ ಸೂಕ್ಷ್ಮಗಳನ್ನು ಸೂಚಿಸುತ್ತದೆ.

ಪ್ರಭು ಅವರ ಕತೆಗಳಲ್ಲಿ ಕೆಲವೇಳೆ ಈ ಫ್ಯಾಂಟಸಿ ತಳಬುಡವಿಲ್ಲದಂತೆ ತೋರು ವುದೆಂಬುದಕ್ಕೆ 'ಗುಂಡು ಸೂಜಿ', 'ಸ್ಪರ್ಧೆ'ಯಂಥ ಕತೆಗಳನ್ನು ಉದಾಹರಿಸ ಬಹುದು. ಫ್ಯಾಂಟಸಿಯನ್ನು ಹರಿದತ್ತ ಹಾದಿಯೆಂಬಂತೆ ಬಿಡದೆ, ನಿರ್ಮಿತವಾಗುವ 'ಭ್ರಮಾತ್ಮಕತೆ' ವಿಶಿಷ್ಟವಾದ ತರ್ಕಬದ್ಧತೆಯನ್ನು ಹೊಂದಿದ್ದಾದರೆ ಮಾತ್ರ ಅದು ಅರ್ಥಪೂರ್ಣವಾಗುತ್ತದೆ. ಅಂಥ ತಾರ್ಕಿಕತೆಯನ್ನು ಈ ಎರಡು ಕತೆಗಳು ಪಡೆಯು ವುದರಲ್ಲಿ ವಂಚಿತವಾಗಿವೆಯೆಂದು ತೋರುತ್ತದೆ. ಇಷ್ಟೆಲ್ಲದರ ನಡುವೆ ಪ್ರಭು ಅವರ ಈ ಕಥಾ ಸಂಕಲನದಲ್ಲಿ ಫ್ಯಾಂಟಸಿಯ ಉತ್ತಮ ಕತೆಗಳಿವೆಯೆಂಬುದು ಗಮನಾರ್ಹ ವಾದ ಅಂಶ.

ಶಾಂತಿಗ್ರಾಮದ ರಾಜಕೀಯ : ವಿಜಯ ಸಾಸನೂರ

ಗ್ರಾಮೀಣ ಪರಿಸರದ ಶ್ರೀಮಂತಿಕೆಯ, ಎಲ್ಲ ಉತ್ಪಾದನಾ ಮೂಲಗಳನ್ನು ಹಿಡಿದುಕೊಂಡ ಗೌಡ ಮನೆತನಗಳು, ಬಡತನದ, ಶೋಷಣೆಯ ಸೂಕ್ಷ್ಮಗಳು ಮತ್ತು ಇತ್ತೀಚಿನ ಸಾಹಿತ್ಯದಲ್ಲಿ ತೋರಿಬರುತ್ತಿರುವ ರಾಜಕೀಯ ಪ್ರವೃತ್ತಿಗಳನ್ನು ಮುಖ್ಯವಾಗಿ ಉಳ್ಳ ಕತೆಗಳಿರುವ ವಿಜಯ ಸಾಸನೂರರ 'ಶಾಂತಿಗ್ರಾಮದ ರಾಜಕೀಯ' ಎಂಟು ಕತೆಗಳನ್ನು ಒಳಗೊಂಡಿದೆ. "ಈ ಶಾಂತಿಗ್ರಾಮ ಎಲ್ಲ್ಯದ ಅಂತ್ ಹುಡುಕ್ಯಾಡಕ ಹೋಗಬ್ಯಾಡ್ರಿ ಬೆಂಗಳೂರು ದಾರ್‍ಯಾಗ ಹಾಸನದ ಸಮೀಪ ಇದ್ದ ಹಳ್ಳಿ ಏನು ಅಂತ ನಿಮ್ಮ ಭೂಗೋಲದ ಜ್ಞಾನನೂ ತೋರಿಸಬ್ಯಾಡ್ರಿ.

ಯಾಕೆಂದರೆ ಇಂಥ ಶಾಂತಿಗ್ರಾಮ ನಿಮ್ಮೂರಾಗೂ ಅವ." (ಶಾಂತಿಗ್ರಾಮದ ರಾಜಕೀಯದ ಒಂದು ಅಧ್ಯಾಯ ಪು. 78) ಎಂಬಂಥ ಮಾತುಗಳು ಭಾರತ ವ್ಯಾಪ್ತಿಯಲ್ಲಿ ಶಾಂತಿಗ್ರಾಮದ ಪ್ರತಿನಿಧೀಕರಣವನ್ನು ಸೂಚಿಸುತ್ತವಲ್ಲದೆ, ಇಡೀ ಸಂಕಲನದ ಹಿನ್ನೆಲೆಯಲ್ಲೂ ಇದು ಸಾಧ್ಯವೆಂಬುದು ಲೇಖಕರ ಭಾವನೆಯಿದ್ದಂತಿದೆ. ಶೋಷಣೆ, ಭೂಮಿ, ವ್ಯಭಿಚಾರ, ಅನೈತಿಕ ಲೈಂಗಿಕ ಸಂಬಂಧಗಳು-ಇಂಥ ಸಮಸ್ಯೆಗಳ ಪೂರಕ ಅಂಶವಾಗಿ ಅಥವಾ ಮತ್ತೊಂದು ಮುಖವಾಗಿ ರಾಜಕಾರಣದ ನೆಲೆಗಳು ವ್ಯಕ್ತವಾಗುವುದನ್ನು ಪೆಚ್ಚುಕಡಿಮೆ ಇಲ್ಲಿನ ಎಲ್ಲ ಕತೆಗಳೂ ಹೇಳುತ್ತವೆ.

'ಕೃಷ್ಣ ಮತ್ತು ಗೋಮಾಳ' ಮತ್ತು 'ಶಾಂತಿಗ್ರಾಮದ ರಾಜಕೀಯದ ಒಂದು ಅಧ್ಯಾಯ' ಗಮನಿಸಬಹುದಾದ ಕತೆಗಳು. ಒಬ್ಬ ಶ್ರೀಮಂತ ಮತ್ತೊಬ್ಬನನ್ನು ಬಗ್ಗುಬಡಿಯಲು ಬಡವ, ಅಸ್ಪೃಶ್ಯರನ್ನು ಬಳಸುವುದು ಮತ್ತು ಅದರ ಜೊತೆಗೇ ವಿದ್ಯಾವಂತ ಯುವಕನೊಬ್ಬ ಯಾರಿಗೆ ಸಾಮಾಜಿಕ ನ್ಯಾಯವನ್ನು ದೊರಕಿಸಲು ಬದ್ಧನಾದ ನಿಸ್ವಾರ್ಥಿಯಾಗಿದ್ದನೋ ಅವನೇ ತನ್ನ ಸ್ವಾರ್ಥಕ್ಕಾಗಿ ಅವರನ್ನು ಬಳಸುವುದರ ಸೂಕ್ಷ್ಮ ನೆಲೆಗಳು ಈ ಕತೆಯಲ್ಲಿವೆ. ಸ್ವಾರ್ಥದ ಪ್ರಶ್ನೆ ಬಂದಾಗ ಅದರೆದುರು ಅವನು ಕಟ್ಟಿಕೊಂಡ ಆದರ್ಶ, ಪಿಎಚ್. ಡಿ., ಎಲ್ಲವೂ ಗೌಣವಾಗುತ್ತವೆ ಮತ್ತು ನಿರರ್ಥಕವಾಗುತ್ತವೆ. ಇದು ನಮ್ಮ ವಿದ್ಯಾವಂತ ವರ್ಗದ ಪ್ರಗತಿಪರ ಧೋರಣೆಗಳಿಗೆ ಖಚಿತ ನೆಲೆಗಟ್ಟಿಲ್ಲದ್ದನ್ನು ಕೂಡ ಸೂಚಿಸಬಲ್ಲದು.

ರಾಜಕಾರಣ, ಅರ್ಥಪೂರ್ಣ ಉದ್ದೇಶಗಳಿಲ್ಲದ ಕೇವಲ ಸ್ವಾರ್ಥದ ಉದ್ದೇಶಗಳಿಗೆ ಬಳಸಲಾಗುವ ಒಂದು ಅಂಶವಾಗಿದೆಯೆಂಬುದು 'ಶಾಂತಿಗ್ರಾಮದ ರಾಜಕೀಯದ ಒಂದು ಅಧ್ಯಾಯ' ಕತೆಯಲ್ಲಿ ವ್ಯಕ್ತವಾಗುತ್ತದೆ. ಈ ಕತೆಯಲ್ಲಿ ಬರುವ ಬಣ್ಣದ ಬಾವಿ ಮತ್ತು ಆತನ ಬಿನ್ನಾಣಗಿತ್ತಿ ಎಲ್ಲ ರಾಜಕೀಯ ತರಲೆಗಳಿಗೆ ಬೀಜ ಬಿತ್ತುತ್ತಿದ್ದರಾದರೂ ಅದು ಕರ್ಕಿಮಠದವರ ಮೇಲಿನ ಪೂರ್ವದ ಜಿದ್ದು ತೀರಿಸಿಕೊಳ್ಳಲು ಎಂಬುದು ಕತೆಯ ಕೊನೆಕೊನೆಗೆ ಸ್ಪಷ್ಟವಾಗುವುದು ಇದನ್ನು ಸೂಚಿಸುತ್ತದೆ. ಸಕ್ರಿ ಮಾಸ್ತರನಂಥವರು ಇಂಥೆಲ್ಲದರ ಆಚೆ ತುಡಿಯುವವರಾದರೂ ಅವನು ಹರಿಜನರಿಗೆ ಹೇಳುವ ತಿಳುವಳಿಕೆ ವೈಯಕ್ತಿಕ ಲಾಭದ ಕಾರಣದ್ದೇ ಆಗಿದೆ.

ಸರಳವಾದ ನಿರೂಪಣೆಯಲ್ಲಿ ಕಟ್ಟಲಾದ ಇಂಥವನ್ನು ಬಿಟ್ಟರೆ, 'ಶೋಷಿತರು' 'ರಾವಣ' (ಶೋಷಣೆ, ಶ್ರೀಮಂತಿಕೆಯ ದೌಲು ವಿಶೇಷವಾಗಿವೆ ಈಯೆರಡು ಕತೆ, ಗಳಲ್ಲಿ) 'ಸೇವೆ' (ಲೈಂಗಿಕ ಶೋಷಣೆಯನ್ನು ಹೇಳುತ್ತದೆ) ಇನ್ನಿತರ ಕತೆಗಳು. 'ಪಿಂಡ' ಈ ಎಲ್ಲ ಕತೆಗಳಿಗಿಂತ ಭಿನ್ನವಾಗಿದ್ದು ಮೃತ ವ್ಯಕ್ತಿ ತನ್ನ ಮರಣೋತ್ತರ ಸಂದರ್ಭದಲ್ಲಿ ತನ್ನ ಸಂಬಂಧಿಗಳ ಅನಿಸಿಕೆಗಳನ್ನರಸುವ ಆಶಯ ಹೊತ್ತಿದೆ. ಇಂಥ ಆಶಯದ ಮುಖೇನ ವ್ಯಕ್ತವಾಗುವ ವ್ಯಂಗ್ಯ ಮೆಚ್ಚುವಂಥದಾಗಿದೆ.

ಕಪ್ಪು ನೆಲದ ಕೆಂಪುಕಾಲು : ಬರಗೂರು ರಾಮಚಂದ್ರಪ್ಪ

ಬರಗೂರು ರಾಮಚಂದ್ರಪ್ಪನವರ ಈ ಕಥಾ ಸಂಕಲನದಲ್ಲಿ ಒಟ್ಟು ಹತ್ತು ಕತೆಗಳಿವೆ. ಬಹುಮಟ್ಟಿಗೆ ಅವೆಲ್ಲವೂ ಪ್ರತಿಭಟನಾ ಸ್ವರೂಪದವೇ ಆಗಿವೆ. ಈ ಪ್ರತಿಭಟನೆ ವ್ಯವಸ್ಥೆಯ ಸಾಮಾಜಿಕ ಅನ್ಯಾಯವನ್ನು ವಿರೋಧಿಸಿ ಬರುವಂಥದು. ಬಹುಶಃ ಇಂಥ ಕಾರಣಕ್ಕೋ ಏನೋ ಇಲ್ಲಿನ ಎಲ್ಲ ಕತೆಗಳಲ್ಲಿಯೂ ಶೋಷಕ—ಶೋಷಿತರಿದ್ದಾರೆ. ಇದಕ್ಕೆ 'ಟೆಲಿಗ್ರಾಂ' ಅಂಥ ಒಂದೆರಡು ಕತೆಗಳು ಅಪವಾದವಾಗಬಹುದಷ್ಟೆ. ಈಗಾಗಲೇ ತಮ್ಮ ಕತೆ, ಕಾದಂಬರಿಗಳ ಮೂಲಕ ತೋರ್ಪಡಿಸಿರುವ ಲೇಖಕರ ಸಾಹಿತ್ಯಕ ನಂಬಿಕೆಗಳು ಈ ಸಂಕಲನ ಕತೆಗಳಲ್ಲೂ ಕಾಣಬರುತ್ತವೆ. 'ಕಪ್ಪು ನೆಲದ ಕೆಂಪುಕಾಲು' ಎಂಬ ಕತೆಯಲ್ಲಿ ಬರುವ ಮಾತುಗಳು—ಅವು ಆ ಕತೆಯ ನಿರೂಪಕ ಹೇಳುವ ಮಾತುಗಳೇ ಆದರೂ—ಈ ಮಾತಿಗೆ ಸಮರ್ಥನೆಯನ್ನು ನೀಡುತ್ತವೆಂದು ತೋರುತ್ತದೆ. "ಏನೇ ಬರೀಲಿ ಅದು ನನ್ನ ಕಾಲದ್ದಾಗಬೇಕು. ವಿಮರ್ಶಕವರೇಣ್ಯರು ಸಾರ್ವಕಾಲಿಕ ಆಶಯ ಹುಡುಕಿ ಸುಸ್ತಾಗಿ ಕಡೆಗೆ ಇದನ್ನು ತಿಪ್ಪೆಗೆಸೆದರೂ ಚಿಂತೆಯಿಲ್ಲ, ನಾನು ನನ್ನ ಕಾಲದಲ್ಲಿ ಕಂಡುಂಡುದನ್ನು ಬರೀಬೇಕು. ಇವತ್ತಿನಲ್ಲಿ ಬೇರು ಬಿಡಬೇಕು. ಅವತ್ತಿನ ಇವತ್ತಿನ ಮತ್ತು ಯಾವೊತ್ತಿನದೊ ವಿಚಾರಗಳನ್ನೆಲ್ಲ ನುಡಿಯೋಕೆ ನಾನೇನು ಬೀದಿ ಬದೀಲಿ ಕೂತ ಜ್ಯೋತಿಷಿಯೂ ಅಲ್ಲ, ಪೊಳ್ಳು ಪ್ರವಾದಿಯೂ ಅಲ್ಲ...ನನ್ನಲ್ಲಿರೋ ನಿಲುವಿಗೆ, ನಾನು ತೋರಿಸೋ ಒಲವಿಗೆ ಪ್ರೇರಣೆ ನನ್ನ ಕಾಲದಲ್ಲಿ ಕಂಡ ಸತ್ಯದಲ್ಲಿದೆ."

ಇಂಥ ಮಾತುಗಳು ಬರಗೂರರ ಕತೆಗಳಿಗೆ ಬರೆದ ವ್ಯಾಖ್ಯಾನವಾಗಬಲ್ಲವೆಂದು ತೋರುತ್ತದೆ. 'ಸದ್ಯ'ದ ಬದುಕು ಮಾತ್ರ ಮುಖ್ಯ, ಉಳಿದೆಲ್ಲ ಮಿಥ್ಯೆ, ಎಂಬ ಮಾತು ಪೂರ್ಣ ಪ್ರಮಾಣದ ಸತ್ಯವಾಗದಿರಬಹುದು. ಹಾಗೆ ನೋಡಿದರೆ ಎಲ್ಲ ಸತ್ವಶಾಲಿ ಲೇಖಕನಿಗೂ ತನ್ನ ಕಾಲದ ಬದುಕು ಮುಖ್ಯವಾಗಿರುತ್ತದೆ ; ಪ್ರೇರಕವಾಗಿರುತ್ತದೆ. ತಾನು ಕಂಡಷ್ಟು ಬದುಕನ್ನು ಹೇಗಿದೆಯೋ ಹಾಗೆ ಇಟ್ಟು ಕೆಲ ಲೇಖಕರು ಹೊರಡಬಹುದು. ಮತ್ತೆ ಕೆಲವರು ಕಂಡಷ್ಟರ ನಡುವಿನ ನೋವಿಗೆ ಪ್ರತಿಯಾಗಿ ತನ್ನ ಬರಹದಲ್ಲಿ ಅದರ ವಿರುದ್ಧದ ದನಿ ಪ್ರಕಟಿಸಬಹುದು. ಇದರಿಂದ ಒಬ್ಬ ಲೇಖಕ ಹೆಚ್ಚು ಮತ್ತೊಬ್ಬ ಕಡಿಮೆ ಎಂಬುದು ಮುಖ್ಯವಲ್ಲ.

ಈ ಸಂಕಲನದಲ್ಲಿ ಸಾಮಾಜಿಕ ಬದಲಾವಣೆಯ ಆಶಯಗಳು ವಿಶೇಷವಾಗಿ ಪ್ರಕಟವಾಗಿವೆ. ಬಹುಪಾಲು ಕತೆಗಳು ಇದಕ್ಕೆ ಉದಾಹರಣೆಯಾಗಬಲ್ಲವು. ಇಂಥ ಕಾರಣಕ್ಕಾಗಿ ಅವು ಬಹುಮಟ್ಟಿಗೆ ಪ್ರತಿಭಟನಾತ್ಮಕ ಸ್ವರೂಪದವಾಗಿವೆ. 'ಒಂದೂರಲ್ಲೊಬ್ಬ ಯುವರಾಜ'ದ ರಾಮಪ್ಪ ಮಾಸ್ತರ, 'ಸ್ಫೋಟ'ದ ಮುದುಕಿ, ಒಂದು ಕಟ್ಟಡದ ಕತೆ'ಯ ಸೋಮು ಮತ್ತು ಅವನ ಬಳಗ—ಇಂಥ ಪಾತ್ರಗಳನ್ನು ಇಲ್ಲಿ ಉದಾಹರಿಸಬಹುದು. ಈ ಸಂಕಲನದ 'ಸ್ಫೋಟ', 'ಕ್ಷಾಮ', 'ಟೆಲಿಗ್ರಾಂ' ಮೊದ

ಲಾದ ಕತೆಗಳು ಗಮನಾರ್ಹವಾದವುಗಳಾಗಿವೆ. ಅರೆಹೊಟ್ಟೆಯ ಬದುಕು ಸಾಗಿಸುವ ಮುದುಕಿ ಎರಡು ರೂಪಾಯಿಯ ನಿರೀಕ್ಷೆಯಲ್ಲಿ ಸೋತಾಗ ಅವಳ ಸಹನೆಯ ಕಟ್ಟೆ ಯೊಡೆದು ಕಾಂತಯ್ಯನ 'ರಾಷ್ಟ್ರಪ್ರಶಸ್ತಿ ಫಲಕ'ವನ್ನು ಕಡ್ಡೊಯ್ಯುವ ಚಿತ್ರಣವಿರುವ 'ಸ್ಫೋಟ' ಕತೆಯಲ್ಲಿ ಮುದುಕಿಯ ಹೊಟ್ಟೆಯ ಚಿಂತೆಯ ಎದುರು ಕಾಂತಯ್ಯನ ದೇಶದ ಬಗೆಗಿನ, ಸಾಹಿತ್ಯದ ಬಗೆಗಿನ ಚರ್ಚೆ, ಪ್ರಶಸ್ತಿ ಫಲಕದ ಬಗೆಗಿನ ವೈಭವದ ಮಾತುಗಳು—ಇವೆಲ್ಲ ಬಂದಿದ್ದು, ಮುಖ್ಯ ವಿಪರ್ಯಾಸವೊಂದನ್ನು ಸೂಚಿಸುತ್ತವೆ. 'ಕ್ಷಾಮ' ಕತೆಯಲ್ಲಿನ ಕ್ಷಾಮ ಬಹುಮುಖ ಆಯಾಮಗಳನ್ನು ಪಡೆದುಕೊಂಡಿದೆ. ಒಲೆಯನ್ನು ಪದೇಪದೇ ಹತ್ತಿಸುವ ಪ್ರಯತ್ನದಲ್ಲಿ, ಬಾಗಿಲು ಭದ್ರಪಡಿಸುವ ಪ್ರಯತ್ನ ದಲ್ಲಿ, ಅಷ್ಟೇಕೆ ಊರಿನ ಕೆರೆಯ ಏರಿ ಬಿರುಕು ಬಿಡುವುದರಲ್ಲಿ ಸಾಂಕೇತಿಕತೆ ಅರ್ಥ ಪೂರ್ಣವಾಗಿ ವ್ಯಕ್ತವಾಗಿದೆ. 'ಟೆಲಿಗ್ರಾಂ' ಕತೆ ವ್ಯಂಗ್ಯದಿಂದ ತುಂಬಿಕೊಂಡಿದೆ. ಟೆಲಿಗ್ರಾಂ ಹಿನ್ನೆಲೆಯಲ್ಲಿ ತನ್ನ ಮಾವನ ಸಾವಿನ ಸುದ್ದಿಯನ್ನು ನಿರೀಕ್ಷಿಸುತ್ತಾ ಅದರಿಂದ ತನ್ನ ಭವಿಷ್ಯ ಉಜ್ವಲವಾಗುವುದರ ಆಲೋಚನೆಯಲ್ಲಿ ತೊಡಗಿದ ವಿದ್ಯಾವಂತ ತರುಣ ನೊಬ್ಬ ಇಲ್ಲಿನ ಕೇಂದ್ರವಾಗಿದ್ದಾನೆ. ಆ ನಿರೀಕ್ಷೆ, ಆಲೋಚನೆಯ ನಡುವೆ ಧುತ್ತೆಂದು ತನ್ನ ಮಗುವಿನ ಜನನದ ಸುದ್ದಿಯಿಂದ 'ದಿಕ್ಕು ತಪ್ಪಿದ ದೇಸಿಗ'ನಾಗುವಂಥ ಸ್ಥಿತಿ ಚಿತ್ರಿತವಾಗಿದ್ದು ವಸ್ತುವಿನಲ್ಲೇ ತುಂಬಿಕೊಂಡ ವ್ಯಂಗ್ಯವನ್ನು ಗುರುತಿಸಬಹು ದಾಗಿದೆ.

ಈ ಸಂಕಲನದ ಮತ್ತೆರಡು ಕತೆಗಳಾದ 'ಒಂದು ಕಟ್ಟಡದ ಕತೆ' ಮತ್ತು 'ಕಪ್ಪು ನೆಲದ ಕೆಂಪು ಕಾಲು'—ಇವುಗಳಲ್ಲಿ ಸಾಮಾಜಿಕ ಬದಲಾವಣೆಯ ಆಶಯ ವಿಶೇಷವಾಗಿದೆ. ಆದರೆ ಇಲ್ಲಿನ 'ಸಾಂಕೇತಿಕತೆ' ಅತ್ಯಂತ ಲೆಕ್ಕಾಚಾರದಿಂದ ರೂಪಿತ ವಾಗಿದೆಯೋ ಎನ್ನಿಸುತ್ತದೆ. ಈ ಎರಡೂ ಕತೆಗಳಲ್ಲಿನ ಕೆಲ ಚಿತ್ರಣಗಳು ಅನನ್ಯ ವೆಂಬಂತೆ ತೋರುತ್ತವೆಯಾದರೂ ಒಟ್ಟಾರೆಯ ಪರಿಣಾಮದಲ್ಲಿ ಒಂದು ಬಗೆಯ ಅರಕೆಯಿಂದ ಕೂಡಿವೆ. "ಈ ನಾಡಿನ ಮುಖ್ಯ ಕೇಂದ್ರ...ಅಂದ್ರೆ...ಸೆಂಟರ್ ಆಫ್ ಈಚ್ ಅಂಡ್ ಎವ್ವೆರಿ ಆಕ್ಟಿವಿಟಿ"ಯಾದ ಪ್ರಜಾಭವನವನ್ನು ನಾಶಮಾಡುವ ಉದ್ದೇಶ ವಿರುವ 'ಒಂದು ಕಟ್ಟಡದ ಕತೆ'ಯಲ್ಲಿ ಸಮಸ್ಯೆಯ ಸರಳೀಕರಣ ಕಾಣಬರುತ್ತದೆ. 'ಕಪ್ಪು ನೆಲದ ಕಪ್ಪುಕಾಲು' ಕತೆಯಲ್ಲಿನ ಸಂವೇದಕ ಮತ್ತು ಬುದ್ಧಿಜೀವಿಯ ಸಂಬಂಧದ ಚಿತ್ರಣಗಳು ಒಂದು ಬಗೆಯ ಸಿನಿಮೀಯ ಗುಣವನ್ನು ಪಡೆದಂತೆ ತೋರುತ್ತವೆ. ಕತೆಯ ಸಂಕೀರ್ಣತೆಯ ಮೂಲಕ ವ್ಯಕ್ತವಾಗಬೇಕಾದ್ದಕ್ಕೆ ಬದಲಾಗಿ ಬೌದ್ಧಿಕ ನಿಲುವುಗಳ, ವೈಚಾರಿಕತೆಯ ನಿಯಂತ್ರಣೆಯೇ ಕಥಾವಸ್ತುವಿನ ಮೇಲೆ ಹೆಚ್ಚಾದಾಗ, ಉತ್ತಮ ಕತೆಯಾಗಲು ಸಾಧ್ಯತೆಯಿದ್ದದ್ದು ಕೂಡ ಸೋಲುವ ಸಾಧ್ಯತೆಗಳೇ ಹೆಚ್ಚು:

ಸೀರೆಗೆ ಹುಟ್ಟಿದ ದೇವರ ಕೂಸು: ಜಿ. ಎಚ್. ಹನ್ನೆರಡು ಮಠ

ಈ ಕಥಾ ಸಂಕಲನ ಎರಡು ಕತೆಗಳನ್ನೊಳಗೊಂಡಿದೆ: 'ರೈತನನ್ನು ಕೊಂದ ರೈತ' ಮತ್ತು 'ಸೀರೆಗೆ ಹುಟ್ಟಿದ ದೇವರ ಕೂಸು'. ಈ ಎರಡೂ ಕತೆಗಳನ್ನು ಗಮನಿಸು

ವಾಗ ಲೇಖಕರ ಉದ್ದೇಶ ಸಾಮಾಜಿಕ ಅನ್ಯಾಯಗಳನ್ನು ಚಿತ್ರಿಸುವುದರತ್ತ ಕೇಂದ್ರಿತ ವಾಗಿದೆಯೆಂಬುದನ್ನು ಗಮನಿಸಬಹುದು. 'ರೈತನನ್ನು ಕೊಂದ ರೈತ' ಕತೆಯನ್ನು ಕುರಿತು ಲೇಖಕರು "ರೈತನನ್ನು ಕೊಂದರೈತ ನರಗುಂದ ನಾಡಿನ ರೈತ ಬಂಡಾಯದ ಕಿಡಿ. ಕತೆ ಕಾಲ್ಪನಿಕವಾದರೂ ಹೂರಣ ಮಾತ್ರ ಸತ್ಯ" ಎಂದಿದ್ದಾರೆ. ಈಗಾಗಲೇ ಐತಿಹಾಸಿಕ ಸಂಗತಿಯಾಗಿರುವ ನರಗುಂದ ರೈತ ಬಂಡಾಯದ ಹಿನ್ನೆಲೆಯಲ್ಲೇ ಈ ಕತೆಯನ್ನು ನೋಡಬೇಕಾದುದು ಅನಿವಾರ್ಯವೇನೂ ಅಲ್ಲ. ಹಾಗೆ ನೋಡಿದರೆ ಅದರ ಹೊರಗೇ ಅದು ಹೆಚ್ಚು ಅರ್ಥಪೂರ್ಣವಾದೀತು. ರೈತಬಂಡಾಯದ ಹಿನ್ನೆಲೆ ಯಲ್ಲಿಯೇ ಈ ಕತೆಯನ್ನು ಪರಿಶೀಲಿಸ ಹೊರಟಾಗ ಕತೆಯಾಗಿ ಕೆಲವು ಮಿತಿಗಳನ್ನು ತೋರ್ಪಡಿಸುತ್ತದೆ. ಎರಡು ಶ್ರೀಮಂತ ಕುಟುಂಬಗಳನ್ನಿರಿಸಿಕೊಂಡು ಶ್ರೀಮಂತಿಕೆಯ ಡೌಲು, ಅದರ ಹಿನ್ನೆಲೆಗಿರುವ ಕ್ರೂರ ಮುಖಗಳು, ತತ್ಕಾರಣದಿಂದ ಶೋಷಿತ ಬಹುಮುಖವಾಗಿ ತುಳಿತಕ್ಕೊಳಗಾಗುವುದರ ಚಿತ್ರಣವಿರುವ ಈ ಕತೆ ಮಹತ್ವದ ಸಾಮಾಜಿಕ ಕಾಳಜಿಗಳನ್ನು ಪ್ರಕಟಮಾಡುತ್ತದೆ.

'ಸೀರೆಗೆ ಹುಟ್ಟಿದ ದೇವರ ಕೂಸು' ಎಂಬ ಕತೆ ಒಂದು ಅನಾಥ ಮಗುವಿನ 'ಸುತ್ತ ಚಿತ್ರಿತವಾಗಿರುವಂಥದು. ನೇಕಾರ ಬದುಕಿನ ಹಿನ್ನೆಲೆಯಿರುವ ಈ ಕತೆಯಲ್ಲಿ ಆ ದುಡಿವ ಜನದ ಬದುಕಿನ ದುರಂತವನ್ನು, ನಿರಂತರ ಶೋಷಣೆಗೊಳಗಾಗು ವುದರ ಸೂಕ್ಷ್ಮಗಳನ್ನು ಲೇಖಕರು ಬಿಡಿಸಲೆತ್ನಿಸಿದ್ದಾರೆ. ಇಲ್ಲಿ ಶೋಷಕ ಶಕ್ತಿ ವ್ಯಕ್ತಿ ಯಾಗಿ ಬಾರದೆ ಒಂದು ಶಕ್ತಿಯಾಗಿ ಬರುತ್ತದೆ. ಅನೈತಿಕ ಸಂಬಂಧ, ಬಡತನ ಅಸಹಾಯಕತೆಯ ನಡುವೆ ಜನ್ಮತಾಳುವ ಶಿಶು ಯಾರದ್ದೂ ಆಗದ್ದರ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಕತೆಗಿತ್ತ ಹೆಸರು ತುಂಬಾ ಅರ್ಥಪೂರ್ಣವಾಗಿದೆಯೆನಿಸುತ್ತದೆ. ದೇವಕ್ಕಿ ಅನಾಥವಾಗುವುದರ ಹಿನ್ನೆಲೆಯಲ್ಲಿ ಅನೇಕ ಅಂಶಗಳು ಕಾರಣವಾಗಿವೆ.

ಇವೆರಡು ಕತೆಗಳನ್ನು ಗಮನಿಸಿದಾಗ ಒಂದು ನೆಲೆಯಲ್ಲಿ ದುಡಿವ ವರ್ಗ, ಮತ್ತೊಂದು ನೆಲೆಯಲ್ಲಿ ದುಡಿಸಿಕೊಳ್ಳುವ ವರ್ಗ ; ಒಂದೆಡೆಗೆ ಶೋಷಿತ, ಮತ್ತೊಂದೆಡೆಗೆ ಶೋಷಕನಿದ್ದಾನೆ. ಮಗು ಅನಾಥವಾಗುವುದಕ್ಕೆ ಕಾರಣವಾಗುವ ಅನೇಕ ಅಂಶಗಳು ಇಲ್ಲಿ ಪರಿಶೀಲಿತವಾಗಿವೆ.

ಹನ್ನೆರಡು ಮಠರ ಈ ಸಂಕಲನದ ಮೊದಲ ಕತೆಯಲ್ಲಿ ಭಾಷೆಯಲ್ಲಿನ ಪ್ರಾದೇಶಿಕ ವೈಲಕ್ಷಣ್ಯಗಳ ಅತಿಯಿಂದಾಗಿ ಓದುವಾಗ ಕಿರಿಕಿರಿಯಾಗುತ್ತದೆ. 'ಸೀರೆಗೆ ಹುಟ್ಟಿದ ದೇವರ ಕೂಸು' ಇಂಥದರಿಂದ ಪಾರಾಗಿದೆ, ನಡುನಡುವೆ ಬರುವ ಇಂಗ್ಲಿಷ್ ಪದ ಪುಂಜಗಳು ಅನಗತ್ಯ, ಅನರ್ಥಕಾರಿ.

ಬಡೇಸಾಬು ಪುರಾಣ : ಶಾಂತರಸ

ಶಾಂತರಸರ ಈ ಮೂರನೆಯ ಕಥಾ ಸಂಕಲನದಲ್ಲಿ ಒಟ್ಟು ಐದು ಕತೆಗಳಿವೆ. ಶಾಂತರಸರು ಬರಹಗಾರರಾಗಿ ಇರಿಸಿಕೊಂಡ ಕೆಲವೊಂದು ನಿಲುವುಗಳು ಈ ಸಂಕಲ ನದ ಕತೆಗಳಲ್ಲಿ ವ್ಯಕ್ತವಾಗಿವೆ. ಇಲ್ಲಿನ ಎಲ್ಲ ಕತೆಗಳೂ ಹೈದರಾಬಾದ್ ಕರ್ನಾಟಕದ

ಅದರಲ್ಲೂ ಹೆಚ್ಚಾಗಿ ರಾಯಚೂರು ಜಿಲ್ಲೆಯ ಪರಿಸರಕ್ಕೆ ಸಂಬಂಧಿಸಿದುವೆಂದೂ, ಅವೆಲ್ಲವೂ—ರೋಗಿಯೊಂದನ್ನು ಹೊರತು—ಸ್ವಾತಂತ್ರ್ಯಪೂರ್ವದ ಘಟನೆಗಳನ್ನು ಒಳಗೊಂಡುವೆಂದೂ ಲೇಖಕರೇ ಹೇಳಿಕೊಂಡಿದ್ದಾರೆ. ಇಲ್ಲಿನ ಬಹುಪಾಲು ಕತೆಗಳಲ್ಲಿ ಬರುವ ಘಟನೆಗಳು ಸ್ವಾತಂತ್ರ್ಯ ಪೂರ್ವದವೇ ಆದರೂ, ಅವು ಇಂದಿನವು ಕೂಡ ಎನ್ನುವಷ್ಟು ಸತ್ವಪೂರ್ಣವಾಗಿವೆ ಎಂಬುದನ್ನು ಕಂಡುಕೊಂಡಾಗ ಈ ಅವಧಿಯಲ್ಲಿ ಗ್ರಾಮ ಜೀವನದಲ್ಲಿ ಅಂಥ ವಿಶೇಷ ಬದಲಾವಣೆಗಳೇನೂ ಆಗಿಲ್ಲವೆಂಬುದು ತೋರಿಬಂದರೆ ಆಶ್ಚರ್ಯವಿಲ್ಲ.

'ರೋಗಿ' ಕತೆಯೊಂದನ್ನು ಹೊರತು ಉಳಿದೆಲ್ಲ ಕತೆಗಳಲ್ಲೂ ಗ್ರಾಮೀಣ ಹೆಣ್ಣು ಇದ್ದಾಳೆ. ಅವಳಿಗೆ ಅನೈತಿಕ ಲೈಂಗಿಕ ಸಂಬಂಧಗಳು ಒಂದಿಲ್ಲೊಂದು ಕಾರಣಕ್ಕೆ ಅನಿವಾರ್ಯವಾಗುವುದರ, ಮತ್ತು ಅಂಥದಕ್ಕೆ ಸಂಬಂಧಿಸಿದಂತೆ ಪುಂಡುಗಾರಿಕೆ ಸಣ್ಣತನ, ಸ್ವಾರ್ಥಪರತೆ ಇತ್ಯಾದಿ ವಿಚಿ!ದ್ರಕ ಬದುಕಿನ ಮುಖಗಳನ್ನು ಲೇಖಕರು ಸಮರ್ಥವಾಗಿ ಕಟ್ಟಿಕೊಟ್ಟಿದ್ದಾರೆ. ವೈವಾಹಿಕ ಚೌಕಟ್ಟಿನೊಳಗಿನ ಅರ್ಥಪೂರ್ಣ ದೈಹಿಕ ಸಂಬಂಧಗಳಿಂದ ವಂಚಿತಳಾದ ಹೆಣ್ಣು ಅದರಾಚೆಗಿನ ಅರ್ಥಪೂರ್ಣ ದೈಹಿಕ ಸಂಬಂಧಗಳಿಗಾಗಿ ತುಡಿಯುವುದು ಮತ್ತು ಅದರ ನಡುವೆ ಬಂದೇ ಬರುವ ನೈತಿಕ-ಸಾಮಾಜಿಕ ಕಟ್ಟಳೆಗಳ ಪ್ರಶ್ನೆ ಎಲ್ಲ ಕತೆಗಳ ಹಿಂದೆ ಇರುವಂಥದು. ಒತ್ತಾಯಪೂರ್ವಕ ವಿವಾಹದ ಚೌಕಟ್ಟಿನೊಳಗೆ ಸಿಕ್ಕಿ, ಅದಮ್ಯ ಬಯಕೆಯಿಂದ ತುಂಬಿದ ಹೆಣ್ಣು ಒಂದೆಡೆಗಿದ್ದರೆ (ಉದಾ : ರಾಚಮ್ಮ), ಓಡಿಹೋದ ಗಂಡಂದಿರ ತೃಪ್ತ ಹೆಂಡಂದಿರಾಗಿಯೋ ವಿಧವೆಯರಾಗಿಯೋ ಅತೃಪ್ತ ಕಾಮನೆಗಳಿಂದ ತುಂಬಿದ ಹೆಣ್ಣು ಮತ್ತೊಂದು ಕಡೆಗಿರುವುದನ್ನು(ಉದಾ : ಸೂಗಮ್ಮ, ಮಲ್ಕಮ್ಮ, ಮುಂ.) ಗಮನಿಸಬಹುದು.

'ಮಲ್ಕಮ್ಮ' ಎಂಬ ಕತೆಯಲ್ಲಿ ಈ ಸಂಕಲನದ ಉಳಿದ ಕತೆಗಳಲ್ಲಿ ಕಾಣಬರದ ಮಾನವೀಯ ಅನುಕಂಪೆಯ ಗಂಡು ಪಾತ್ರವೊಂದನ್ನು ಚಿತ್ರಿಸಲಾಗಿದೆ. ಬೂದಣ್ಣ ಈ ಸಂಕಲನದ ಕತೆಗಳಲ್ಲಿ ಬರುವ ಎಲ್ಲಾ ಗಂಡುಪಾತ್ರಗಳಿಗೂ ಅಪವಾದವಿದ್ದಂತೆ. ಅಸಹಾಯಕ ಹೆಣ್ಣನ್ನು ತನ್ನ ಸ್ವಾರ್ಥಕ್ಕೆ (ಅದು ಕಾಮುಕವೇ ಆಗಿದೆ) ಬಳಸಿಕೊಳ್ಳುವ ಗಂಡುಪಾತ್ರಗಳ ನಡುವೆ 'ಕೇವಲ ಅನುಕಂಪೆ'ಯನ್ನು ತೋರುವ ಬೂದಣ್ಣ ಭಿನ್ನನಾಗಿದ್ದಾನೆ. 'ರೋಗಿ' ಇತರ ಎಲ್ಲ ಕತೆಗಳಿಗಿಂತ ಭಿನ್ನವಾಗಿದೆ. ಇದಕ್ಕೆ,ಉಳಿದೆಲ್ಲ ಕತೆಗಳಲ್ಲಿ ಗ್ರಾಮೀಣ ಪರಿಸರದ ವಸ್ತುವಿದ್ದು ಈ ಕತೆಯು ನಗರದ ಮಧ್ಯಮ ವರ್ಗದ ಸಂಸಾರದ ಸುತ್ತ ಹೆಣೆಯಲ್ಪಟ್ಟಿರುವುದು ಒಂದು ಕಾರಣವಾದರೆ, ಅಲ್ಲಿ ಬರುವ ಸಾವಿತ್ರಿ ಆಧುನಿಕ ಹೆಣ್ಣು ಆಗಿರುವುದು, ಸ್ವಚ್ಛಂದ ಬದುಕಿನ ಆಕಾಂಕ್ಷೆಯ ನಡುವೆ ಮನುಷ್ಯನ ವಿಚಿತ್ರ ನಡಾವಳಿಗಳು, ಪಾತ್ರಗಳಲ್ಲಿನ ಅಸ್ವಸ್ಥತೆ ಇವೆಲ್ಲ ಚಿತ್ರಿತವಾಗಿರುವುದು ಇತರ ಕಾರಣಗಳಾಗಬಹುದು. ಕಾಮ ಸಂಬಂಧಿಯಾದ ವಿವರಗಳಲ್ಲಿ ಪ್ರಾರಂಭವಾಗಿ, ಪ್ರತಿಷ್ಠೆಯ ಪ್ರಶ್ನೆಯಾಗಿ, ದೌರ್ಜನ್ಯದ ಮುಖಗಳಲ್ಲಿ, ಗುಂಪುಗಾರಿಕೆಯಲ್ಲಿ ಬಿಚ್ಚಿಕೊಳ್ಳುತ್ತ ಹೋಗುವ 'ಬಡೇಸಾಬು ಪುರಾಣ' ಈ ಸಂಕಲನದ ಸುದೀರ್ಘವಾದ ಒಂದು ಮುಖ್ಯ ಕತೆ. ಸ್ವಾತಂತ್ರ್ಯ

ಪೂರ್ವ ಸಂದರ್ಭದ ರಜಾಕಾರರ ದೌರ್ಜನ್ಯ ಮತ್ತು ಕೋಮು ಭಾವನೆಯ ಹಿನ್ನೆಲೆಯಲ್ಲಿ ನಡೆಯುವ ಅನಂತ ಶೋಷಣೆಯ ಮುಖಗಳನ್ನು ಈ ಕತೆ ತೆರೆದಿಡುತ್ತದೆ. ಈ ಕತೆಯ ಕೇಂದ್ರ ವ್ಯಕ್ತಿಯಾದ ಬಡೇಸಾಬು ಎಲ್ಲ ದೌರ್ಜನ್ಯದ, ಅನರ್ಥದ ಕಾರಣ ವ್ಯಕ್ತಿಯಾದರೂ, ಅದರ ಹಿಂದೆ ಸ್ವಪ್ರೇರಣೆಗಿಂತ ಅನ್ಯ ಪ್ರೇರಣೆ ಇರುವ ಕಾರಣಕ್ಕೆ ಕತೆಯ ಕೊನೆಕೊನೆಗೆ ಓದುಗರ ಅನುಕಂಪೆಗೆ ಪಾತ್ರನಾಗುತ್ತಾನೆ. ಕೊನೆಯ ಭಾಗದಲ್ಲಿ ವ್ಯವಸ್ಥೆ ಅವನತ್ತ ತನ್ನ ಕ್ರೂರ ಮುಖವನ್ನು ತೋರಿದ್ದರ ಪರಿಣಾಮವೂ ಇದಿರಬಹುದು. ಮೇಲಾಗಿ ಇಲ್ಲಿ ಶೋಷಣೆ ಅಥವಾ ದೌರ್ಜನ್ಯ ಎನ್ನುವುದು ಸಮಷ್ಟಿಯಾಗಿ ಬರುತ್ತದೆಯೇ ಹೊರತು ವ್ಯಷ್ಟಿಯಾಗಿ ಅಲ್ಲ. ಈ ಮಾತು ಶಾಂತರಸರ ಈ ಬಗೆಯ ಇತರ ಕತೆಗಳಿಗೂ ಅನ್ವಯಿಸುವಂಥದು.

ಎಲ್ಲ ಕತೆಗಳನ್ನು ಗಮನಿಸಿದಾಗ, ಸಾಮಾಜಿಕ ಅನ್ಯಾಯವನ್ನು ತೆರೆದಿಡುವ ಮಹತ್ವದ ಆಸಕ್ತಿಯ ಎದುರು, ಅದನ್ನೆಲ್ಲ ಕಲಾತ್ಮಕಗೊಳಿಸುವುದರ ಮಹತ್ವದ ಆಸಕ್ತಿಗಳು ಅವರಿಗೆ ಗೌಣವಾಗಿ ತೋರಿದ್ದು ವ್ಯಕ್ತವಾಗುತ್ತದೆ. ಇಂಥ ಕಾರಣಕ್ಕೋ ಏನೋ ಸರಳವಾದ ನಿರೂಪಣೆ, ಸಂಭಾಷಣೆಗಳ ಮೂಲಕ ಕತೆಗಳು ಪ್ರವಹಿತವಾಗಿವೆ. ರಾಯಚೂರು ಪರಿಸರದ ಭಾಷೆಯ ಲಕ್ಷಣಗಳನ್ನು ಕಾಯ್ದುಕೊಳ್ಳುವುದಷ್ಟಕ್ಕೆ ಭಾಷೆಯ ಬಳಕೆಯ ಸಾಧ್ಯತೆಗಳು ನಿಲ್ಲುತ್ತವೆ.

ಈ ಸಂಕಲನಕ್ಕೆ ಕಾಳೇಗೌಡ ನಾಗವಾರ ಅವರ ಪ್ರತಿಕ್ರಿಯಾತ್ಮಕವಾದ ಮುನ್ನುಡಿಯಿದೆ.

ಸೂರ್ಯ, ಬೆಳಕು ಮತ್ತು ಕತ್ತಲು : ಎಚ್. ಬಾಲರಾಜು

ಎಚ್. ಬಾಲರಾಜು ಅವರ ಈ ಮೊದಲ ಕಥಾ ಸಂಕಲನದಲ್ಲಿ ಒಟ್ಟು ಆರು ಕತೆಗಳಿವೆ. ಇಲ್ಲಿನ ಎಲ್ಲ ಕತೆಗಳ ಹಿಂದೆ ಪ್ರಧಾನವಾಗಿ ಎದ್ದುಕಾಣುವ ಅಂಶ ಪಟ್ಟಭದ್ರ ಹಿತಗಳು ಸಾಮಾನ್ಯನ ಮೇಲೆ ನಡೆಸುವ ಶೋಷಣೆಯೇ ಆಗಿದೆ. ಇಲ್ಲಿ ಲೈಂಗಿಕ ಶೋಷಣೆಯೂ ಪ್ರಧಾನವಾಗಿ ಕಾಣಬರುತ್ತದೆ. ಹಾಗೆ ನೋಡಿದರೆ 'ಮೊರೆವ ತೆರೆಗಳಲ್ಲಿ', 'ಒಂದು ಕೇರಿಯ ಕತೆ' ಇಂಥವನ್ನು ಹೊರತು ಉಳಿದೆಲ್ಲ ಕಡೆ ಇದು ಎದ್ದು ಕಾಣುತ್ತದೆ. ಆದರೆ ಲೈಂಗಿಕ ಶೋಷಣೆ ಬಂದಲ್ಲೆಲ್ಲ ಅದು ಹೆಣ್ಣೊಬ್ಬಳ ಅತ್ಯಾಚಾರವೇ ಆಗಿರುತ್ತದೆ, ಅದನ್ನು ಮಾಡುವವನು ಶ್ರೀಮಂತಿಕೆಯನ್ನೂ ಬಂಡವಾಳ ಶಾಹಿಯನ್ನೋ ಪ್ರತಿನಿಧಿಸುವ ಒಬ್ಬ ವ್ಯಕ್ತಿಯೇ ಆಗಿರುತ್ತಾನೆ ಎಂಬಂಥ ಸೂತ್ರೀಕರಣ ಕಾಣಬರುತ್ತದೆ. ಇಂಥ ಸೂತ್ರೀಕರಣಗಳಿಂದ—ಬೇಕಾದರೆ ಸರಳೀಕರಣ ಎಂದು ಕರೆಯಬಹುದು—ಮತ್ತು ಇದರ ಹಿನ್ನೆಲೆಗೆ ಬರುವ ಪ್ರತಿಭಟನಾತ್ಮಕವಾದ ಆವೇಶ, ರೊಚ್ಚುಗಳಿಂದಾಗಿ ಹಲವೇಳೆ ಸಮಸ್ಯೆಯ ಆಳ—ಅಗಲಗಳನ್ನು ಶೋಧಿಸುವ ಸಾಧ್ಯತೆಗಳಿಂದ, ಕಲಾತ್ಮಕತೆಯ ವಿವಿಧ ಸಾಧ್ಯತೆಗಳಿಂದ ಸೃಜನಶೀಲ ಕೃತಿಯೊಂದು ವಂಚಿತವಾಗುತ್ತದೆ ಎಂದು ತೋರುತ್ತದೆ. ಈ ಕತೆಗಳನ್ನು ಗಮನಿಸುವಾಗ ವ್ಯಕ್ತವಾಗುವ ಮತ್ತೊಂದು ಅಂಶ: ಲೇಖಕ ಇಂಥದನ್ನೇ ಹೇಳಬೇಕೆಂಬ ಅಭೀಪ್ಸೆಯನ್ನು

ಪೂರ್ವಭಾವಿಯಾಗಿಯೇ ಇರಿಸಿಕೊಂಡು ಯಾವುದು ಕೃತಿಯ ಮುಖೇನ ಪ್ರಕಟಗೊಳ್ಳಬೇಕೋ ಅದನ್ನೆಲ್ಲ ಕತೆಗಾರನೇ ಹೇಳಹೊರಟು ಅದಕ್ಕನುಗುಣವಾಗಿ ಕತೆಯನ್ನು ಹೆಣೆಯುವ ಹಟ. ಇಲ್ಲಿನ ಕೆಲವು ಕತೆಗಳಲ್ಲಾದರೂ ಇದು ಕಾಣಬರುತ್ತದೆ ಮತ್ತು ಪರಿಣಾಮಕಾರಿಯಾದ ತಂತ್ರದಿಂದ ಕೃತಿಯನ್ನು ದೂರೀಕರಿಸುತ್ತದೆ.

'ಮೊರೆವ ತೆರೆಗಳಲ್ಲಿ' ಮತ್ತು 'ಒಂದೂರು ಅಂದಮೇಲೆ ಅಲ್ಲೊಂದು ಕತೆ' ಈ ಸಂಕಲನದಲ್ಲಿ ಬಂದ ಎರಡು ಗಮನಾರ್ಹ ಕತೆಗಳು. ವಸ್ತುವಿನಲ್ಲಿಯೇ ಇರುವ ಗಟ್ಟಿತನ ಮತ್ತು ಕಥನ ಶೈಲಿಗಳಿಂದ ಉತ್ತಮವಾಗಿವೆ. ಕಾರ್ಖಾನೆಯೊಂದರ ಕೆಲಸಗಾರನೊಬ್ಬ ಸಾಮಾಜಿಕ ಅನ್ಯಾಯಕ್ಕೊಳಗಾಗಿ ದುಡಿಮೆ, ಮಕ್ಕಳು, ತನ್ನೆಲ್ಲವನ್ನೂ ಕಳೆದುಕೊಂಡು ಭಿಕ್ಷುಕನಾದದ್ದರ ದಾರುಣತೆಯನ್ನು ಹೇಳುವಂಥದು. ಎಲೆಕ್ಷನ್ ಪ್ರಚಾರ ಭಾಷಣವನ್ನು ಕೇಳುತ್ತ ನಿಂತ ಭಿಕ್ಷುಕನ ಮನೋನೆಲೆಯಲ್ಲಿ ಬಿಚ್ಚಿಕೊಳ್ಳುತ್ತಾ ಹೋಗುವ ಅನಿಸಿಕೆಗಳು, ನೆನಪುಗಳು, ಲಯಬದ್ಧ ಚಿತ್ರಗಳು ಅವನ ಪೂರ್ವಜೀವನದ ಎಳೆಗಳನ್ನು ಕ್ರಮಾನುಗತವಾಗಿ ಬಿಚ್ಚಿಡುವಲ್ಲಿ ಶಕ್ತವಾಗುತ್ತದೆ.

'ಮೊರೆವ ತೆರೆಗಳಲ್ಲಿ' ಕತೆಗೆ ಹೋಲಿಸಿದಾಗ 'ಒಂದೂರು ಅಂದಮೇಲೆ ಅಲ್ಲೊಂದು ಕತೆ' ಒಟ್ಟಾರೆಯ ಪರಿಣಾಮದಲ್ಲಿ ಸೋತಿದೆಯೆಂದು ಅನ್ನಿಸಿದರೂ ಗಮನಿಸಬಹುದಾದ ಒಂದು ಮುಖ್ಯ ಕತೆ. ಪಾತ್ರನಿರ್ಮಿತಿಯಲ್ಲಿ, ಸನ್ನಿವೇಶಗಳ ಚಿತ್ರಣದಲ್ಲಿ ಈ ಕತೆಯಲ್ಲಿ ಗುಣಾತ್ಮಕ ಅಂಶಗಳಿವೆಯೆಂಬುದನ್ನು ಗಮನಿಸಬಹುದು.

ಶೋಷಣೆಯ ವಿವರಗಳು, ಅದನ್ನು ಪ್ರತಿಭಟಿಸುವ ಕೆಚ್ಚು ಬಂದಾಗಲೆಲ್ಲ ಬಾಲರಾಜು ಅವರ ಕತೆಗಳಲ್ಲಿ ಕೆಂಪು ಸೂರ್ಯ ಬಂದೇ ಬರುತ್ತಾನೆ [ಕಣ್ಣ ಮುಂದೆ ಕೆಂಪುಸೂರ್ಯ ಸುಮಾರು ಹೊತ್ತು ಉರಿದ (ಪು. 41, ಮೊರೆವ ತೆರೆಗಳಲ್ಲಿ), ಸೂರ್ಯ. ಮತ್ತೆ ಕೆಂಪು ಕೆಂಪಾಗಿ ಉರಿದ (ಪು. 44)]. ಈ ಸಂಗ್ರಹವನ್ನು ಕುರಿತು ಬರೆದ ಎನ್. ಪಿ. ಮಂಜುನಾಥ್ ಅವರು ಇದನ್ನೊಂದು ದೌರ್ಬಲ್ಯವೆಂದು ಸರಿಯಾಗಿಯೇ ಗುರುತಿಸಿದ್ದಾರೆ. ಇಂಥದೇ ಬರಬೇಕೆಂಬ ಹಟಗಳು ಇಲ್ಲಿ ಕಾಣುತ್ತವೆಯೇ ಹೊರತು ಅದು ಕತೆಯ ಸಾವಯುವ ಸಂಬಂಧದ ಮುಖೇನ ಬಂದದ್ದಾಗಿ ತೋರುವುದಿಲ್ಲ ಎಂಬುದು ಮುಖ್ಯ.

ಸೂರ್ಯ ಮತ್ತು ಕೆಂಪು, ಅನ್ಯಾಯದ ವಿರುದ್ಧದ ಆವೇಶಕ್ಕೆ, ರೊಚ್ಚಿಗೆ; ಕತ್ತಲು ಅಂಧಕಾರಕ್ಕೆ, ಅಜ್ಞಾನಕ್ಕೆ, ಕೂರವಾದದ್ದಕ್ಕೆ ಆಗುವ ಬಲಿಗೆ; ಬೆಳಕು ಅರಿವಿಗೆ, ಎಚ್ಚರಕ್ಕೆ ಸಂಕೇತಗಳಾಗಿ ಎಲ್ಲ ಕತೆಗಳಲ್ಲೂ ಬರುತ್ತವೆ. ಆದರೆ ಇದು ಅತ್ಯಂತ ಲೆಕ್ಕಾಚಾರದ ಮೇಲೆ ನಿಂತು ಕೆಲವುಸಲ ಅನರ್ಥಕಾರಿಯಾಗುವುದೂ ಉಂಟು.

ಜಾತ್ರೆ ಮುಗಿದಿತ್ತು : ಶಾಂತಾದೇವಿ ಕಣವಿ

ಶಾಂತಾದೇವಿ ಕಣವಿಯವರ ನಾಲ್ಕನೆಯ ಕಥಾ ಸಂಕಲನ. ಒಟ್ಟು ಹದಿನಾಲ್ಕು ಕತೆಗಳಿವೆ. ಎಂದಿನಂತೆ ಇಲ್ಲಿಯೂ ಗ್ರಾಮೀಣ ಕುಟುಂಬಗಳ ಮತ್ತು ನಗರದ ಮಧ್ಯಮ

ವರ್ಗದ ಕೌಟುಂಬಿಕ ಪರಿಸರದ ಚಿತ್ರಣಗಳು ಮತ್ತು ಅದರ ಮಧ್ಯೆ ಮಾನವ ವರ್ತನೆ ಗಳು, ನಡಾವಳಿಗಳು ಪ್ರಧಾನವಾಗಿ ಕಾಣಬರುತ್ತವೆ. ಈ ವರ್ಷ ಬಂದ ಲೇಖಕಿಯರ ಮೂರು ಕಥಾ ಸಂಕಲನಗಳಲ್ಲಿ ಶಾಂತಾದೇವಿ ಕಣವಿಯವರ ಈ ಕಥಾಸಂಕಲನ ವಿಶಿಷ್ಟವೂ, ವಿಭಿನ್ನವೂ ಆದುದಾಗಿದೆ.

ಶಾಂತಾದೇವಿ ಕಣವಿಯವರ ಎಲ್ಲ ಕತೆಗಳ ಕೇಂದ್ರ ಬಹುಮಟ್ಟಿಗೆ ಹೆಣ್ಣು ಆಗಿದ್ದಾಳೆ. ಅವಳು ಕೌಟುಂಬಿಕ ಮೌಲ್ಯಗಳ ನಡುವೆ ಪಡೆವ ನೋವು, ಶೋಷಿತ ಳಾಗಿಯೂ ಪ್ರತಿಭಟಿಸಲಾಗದ ಅಸಹಾಯಕತೆ ಇತ್ಯಾದಿಗಳು ಅವರ ಕತೆಗಳ ಪ್ರಧಾನವಾದ ಕಾಳಜಿಗಳಾಗಿವೆ. ನೋವಿಲ್ಲದ, ಆತಂಕವಿಲ್ಲದ ಹೆಣ್ಣು ಅವರ ಬಹುಪಾಲು ಕತೆಗಳಲ್ಲಿ ಇಲ್ಲವೆಂದೇ ಹೇಳಬೇಕು. ತಾಳ್ಮೆ, ನೈತಿಕ ಮೌಲ್ಯಗಳ ಬಗೆಗಿನ ಪೂಜ್ಯಭಾವನೆ ಇಲ್ಲಿನ ಹೆಣ್ಣುಗಳಲ್ಲಿ ಕಾಣಬರುವ ಮತ್ತೊಂದು ಅಂಶ. 'ಅಭಿಲಾಷೆ' ಯಂಥ ಕತೆಗಳು ಈ ಮಾತಿಗೆ ಅಪವಾದವಾಗಬಹುದು.

'ಜಾತ್ರೆ ಮುಗಿದಿತ್ತು', 'ಕತೆಯಾದಳು ಹುಡುಗಿ', 'ಅಣ್ಣ ತಮ್ಮ', 'ತೆಪ್ಪೋತ್ಸವ' 'ವರ್ಗ ರದ್ದಾಯಿತು' ಇತ್ಯಾದಿಗಳು ಈ ಸಂಕಲನದ ಉತ್ತಮ ಕತೆಗಳು. ಶಂಕೆ, ಅನು ಮಾನಗಳಲ್ಲಿ ಪೂರ್ವಾಲೋಚಿತವಲ್ಲದ ದುಡುಕು ಎಂಥ ಅನಾಹುತಗಳಿಗೆ ಕಾರಣ ವಾಗಬಹುದೆಂಬುದಕ್ಕೆ 'ಜಾತ್ರೆ ಮುಗಿದಿತ್ತು' ಒಂದು ಅತ್ಯುತ್ತಮ ಉದಾಹರಣೆ ಯಾಗಬಲ್ಲದು. ಎಲ್ಲ ಸಂಕಷ್ಟಗಳ ನಡುವೆ, ಶೋಷಣೆಯ ನಡುವೆ ಬದುಕಬೇಕಾಗಿ ಬಂದ ಹೆಣ್ಣೊಬ್ಬಳು ಅನಿರೀಕ್ಷಿತ ಸಾವಿಗೆ ತುತ್ತಾಗಬೇಕಾಗಿ ಬಂದದ್ದರ ದಾರುಣತೆ 'ವ್ಯಕ್ತವಾಗಿದೆ. ಕೌಟುಂಬಿಕ ಸಂಬಂಧಗಳ ವಿಸಂಗತಿಗಳ ಚಿತ್ರಗಳನ್ನು ಬಿಡಿಸುವಲ್ಲಿ ಸವತಿ ಬೀಜ ಕಟಿಯುವುದು (ಪು. 2–3), ಜೋಳ ಕೇರುವುದು ಇತ್ಯಾದಿಗಳನ್ನು ಅರ್ಥಪೂರ್ಣವಾಗಿ ಬಳಸಿರುವರೆಂದು ಅನ್ನಿಸುತ್ತದೆ. ತವರಿನಲ್ಲಿ ನಡೆಯುವ ಜಾತ್ರೆಗೆ ಹೋಗುವ ಆಸೆ ಹೊತ್ತ ಮಲ್ಲವ್ವನ ಇಡೀ ಬದುಕಿನ ಜಾತ್ರೆಯೇ ಮುಕ್ತಾಯವಾಗುವ ಅನಿರೀಕ್ಷಿತ ಘಟನೆ ಬಂದುದು ಪರಿಣಾಮಕಾರಿಯಾಗಿದೆ.

ಅರ್ಥಪೂರ್ಣವಾದ ಮಾನವ ಸಂಬಂಧಗಳ ಅಭಾವವಿರುವ ಕೌಟುಂಬಿಕ ಬದುಕು ತರುವ ಬಹುಮುಖ ಸಮಸ್ಯೆಗಳು, ಯಜಮಾನ್ಯತೆ, ಸಣ್ಣತನ ಮೊದಲಾದ ಮಾನವ ನಡಾವಳಿಗಳನ್ನು ಚಿತ್ರಿಸುವಲ್ಲಿ ಶಾಂತಾದೇವಿ ಕಣವಿಯವರು ಅನನ್ಯತೆ ಯನ್ನು ಮೆರೆದಿದ್ದಾರೆ. ಒಂದು ಕುಟುಂಬದೊಳಗೆ ನಡೆಯುವ ಒತ್ತಾಯ ಪೂರ್ವಕ ವಾದ ಅನೈತಿಕ ಕಾಮ ಸಂಬಂಧದ ಪರಿಣಾಮವಾಗಿ ಮುಗ್ಧತೆಯ ಬಲಿಯಲ್ಲಿ ಪರ್ಯವಸಾಯಿಯಾಗುವ 'ಅಣ್ಣ-ತಮ್ಮ' ಪರಿಣಾಮಕಾರಿಯಾದ ಮತ್ತೊಂದು ಕತೆ.

ಸರಳವಾದ ನಿರೂಪಣೆ ಮತ್ತು ಸಮ್ಮೋಹಕ ಶೈಲಿ ಶಾಂತಾದೇವಿ ಕಣವಿ ಯವರ ಕತೆಗಳಲ್ಲಿ ಕಾಣಬರುವ ಒಂದು ವೈಶಿಷ್ಟ್ಯ. ನೇರವಾಗಿ ಕತೆ ನಡೆಯುತ್ತಿರು ವಾಗಲೇ ಒಂದು ಅನಿರೀಕ್ಷಿತ ಘಟನೆಯ ಮೂಲಕ ಕತೆಗೂ ಒಂದು ಅನಿರೀಕ್ಷಿತವಾದ

ತಿರುವನ್ನು ತರುವುದು ಅವರ ಬಹುಪಾಲು ಕತೆಗಳಲ್ಲಿ ಗಮನಕ್ಕೆ ಬರುವ ಅಂಶ. ಇದು ಅವರ ಕತೆಗಳಲ್ಲಿ ಕಾಣಬರುವ ತಂತ್ರ ಕೂಡ ಎಂದು ತೋರುತ್ತದೆ. ಅನಗತ್ಯವಾದುದೇನನ್ನೂ ಹೇಳದೆ, ಹಿತಮಿತವಾದ ಭಾಷೆಯನ್ನು ಬಳಸಿ ಹೆಣ್ಣಿನ ನೋವನ್ನು ಚಿತ್ರಿಸುವಾಗ ಯಾವುದೇ ಬಗೆಯ ಉದ್ವೇಗ, ಆವೇಶಗಳಿಗೆ ಒಳಗಾಗದೆ ಸರಳವಾಗಿ ಬರೆಯುವ ಅವರ ಕತೆಗಳು ಕನ್ನಡ ಕಥಾಲೋಕಕ್ಕೆ ಬೇಕಾಗಿವೆ.

ಫಾಲ್ಗುಣೀ ಪರ್ವ : ಮಲ್ಲಿಕಾ

ಮಲ್ಲಿಕಾ ಅವರು ಬರೆದಿರುವ ನಾಲ್ಕು ಕತೆಗಳಿರುವ ಸಂಕಲನ. ಇವನ್ನು ಕಾಲ್ಪನಿಕ ಕತೆಗಳೆಂದು ಅವರು ಕರೆದಿದ್ದಾರೆ. ಈಗಾಗಲೇ ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೈ ಆಡಿಸಿರುವ ಇವರ ಈ ಕೃತಿ ಮಹತ್ವದ್ದೇನನ್ನೂ ನೀಡದ್ದಾಗಿದೆ. ಅನೇಕ ಕಾರಣಗಳಿಗಾಗಿ ಇಲ್ಲಿನ ಬಹುಪಾಲು ಕತೆಗಳು ನೀರಸವಾಗಿವೆ, ಪೇಲವವಾಗಿವೆ. ಎದ್ದು ಕಾಣುವ ಕೊರತೆ, ಭಾಷೆಯ ಬಳಕೆಯಲ್ಲಿ ತೋರುವ ಔದಾಸೀನ್ಯ. ಸೃಜನಶೀಲ ಕೃತಿಯಲ್ಲಿ ಭಾಷೆಯ ಅನಂತ ಸಾಧ್ಯತೆಗಳನ್ನು ಕುರಿತು ಕಾಳಜಿ ವಹಿಸುವುದಿರಲಿ, ಕಲಾತ್ಮಕ ಭಾಷೆಗಿರಬೇಕಾದ ಸಾಮಾನ್ಯ ನೆಲೆಯಲ್ಲಿ ಕೂಡ ತೋರಬರದ ಕಾಳಜಿಯ ಪರಿಣಾಮ ಓದುಗನಿಗೆ ಆಗುವ ಕಿರಿಕಿರಿ. ಅದರ ಜೊತೆಗೆ ಪಾಂಡಿತ್ಯ ಪ್ರದರ್ಶನ ತೋರಬಲ್ಲ ದೊಡ್ಡ ದೊಡ್ಡ ಶಬ್ದಗಳು ಪದೇ ಪದೇ ಬರುವುದು ಬೇರೆ. ಇದರ ಔಚಿತ್ಯ ಅರ್ಥವಾಗದು. ಇದ್ದುದರಲ್ಲಿ ಪರವಾಗಿಲ್ಲ ಎನ್ನಬಹುದಾದ ಕತೆಯೆಂದರೆ 'ಜಾಗೃತಿ'. ಇಲ್ಲಿ ಕೂಡ ಇತರ ಕಡೆಗಳಲ್ಲಿ ಆಗುವಂತೆ ವ್ಯವಸ್ಥೆಯನ್ನೇ ಬುಡಮೇಲು ಮಾಡುವಂಥ ತೀವ್ರಗಾಮಿತ್ವ ಮತ್ತು ಸುಧಾರಣಾವಾದಿಯಾದ ಮಂದಗಾಮಿತ್ವದ ಸಮರ್ಥನೆಯ ವಾದ-ಪ್ರತಿವಾದಗಳಲ್ಲಿ ಒಂದು ಬಗೆಯ ಚರ್ಚಾಪಟುತ್ವದ ಪ್ರದರ್ಶನ ಎದ್ದು ಕಾಣುವಂತಿದೆ. ಇದು ಕಥನ ನಿರೂಪಣೆಗೆ ಯೋಗ್ಯವಾದ ತಂತ್ರವೇನೂ ಅಲ್ಲ. ಮೇಲಾಗಿ ಉದ್ದುದ್ದವಾದ ಭಾಷಣಗಳು ಓದುಗನ ತಾಳ್ಮೆಯನ್ನು ಕೆಡಿಸುತ್ತವೆ.

ಭಾಷೆ ಬದುಕಿನ ಅನಂತ ಮುಖಗಳಲ್ಲಿ ಉಪಯೋಗವಾಗುವಂಥದು. ಅದೆಲ್ಲದರ ನಡುವೆ ಸಾಹಿತ್ಯದಲ್ಲಿ ಅತ್ಯಂತ ಜಾಗರೂಕತೆಯಿಂದ ಕಲಾತ್ಮಕ ಉದ್ದೇಶಕ್ಕಾಗಿ ಬಳಸಬೇಕಾಗುತ್ತದೆ. ಈ ಬಗೆಯ ಪ್ರಜ್ಞೆ ಈ ಸಂಕಲನದ ಯಾವುದೇ ಕತೆಯಲ್ಲೂ ಕಾಣಬರದು. ಈ ಸಂಕಲನದ ಇತರ ಕತೆಗಳು : 'ತಿರುವಿದ ಪುಟ', 'ಕೆಂಪು ಗುಲಾಬಿ', 'ಫಾಲ್ಗುಣೀ ಪರ್ವ'.

ಭರ್ತಾ ರಕ್ಷತಿ ಯವ್ವನೇ ! : ಗೀತಾ ದೇಸಾಯಿ

ಗೀತಾ ದೇಸಾಯಿಯವರ ಈ ಕಥಾ ಸಂಕಲನ ಆರು ಕತೆಗಳನ್ನು ಒಳಗೊಂಡಿದೆ. "ಮಹಿಳಾ ವಿಮೋಚನೆಯ ಈ ದಿನಗಳಲ್ಲೂ 'ಭರ್ತಾ ರಕ್ಷತಿ ಯವ್ವನೇ' ಎಂಬ

ಮನುವಿನ ಉಕ್ತಿ ತನ್ನ ರೆಲೆವೆನ್ಸ್ ಕಳೆದುಕೊಂಡಿಲ್ಲವಾದುದರಿಂದ" ಅದೇ ಹೆಸರನ್ನು ಈ ಕಥಾ ಸಂಕಲನಕ್ಕೆ ಇಟ್ಟಿರುವುದಾಗಿ ಹೇಳಿಕೊಳ್ಳಲಾಗಿದೆ.

ಇಲ್ಲಿನ ಕತೆಗಳ ವಸ್ತು ಲೇಖಕಿಯೇ ಹೇಳಿಕೊಂಡಂತೆ ದಾಂಪತ್ಯ ಜೀವನದ ಸಿಹಿ-ಕಹಿ-ಬಿರುಕುಗಳು; ಸ್ವಾತಂತ್ರ್ಯ ಪೂರ್ವದ ಮೌಲ್ಯಗಳು, ಆದರ್ಶಗಳು ಸ್ವಾತಂತ್ರ್ಯಾನಂತರದ ಕಾಲದಲ್ಲಿ ನಷ್ಟವಾಗುತ್ತಿರುವುದನ್ನು ಕಂಡು ಪರಿತಪಿಸುವ ಸ್ವಾತಂತ್ರ್ಯಯೋಧರ ವ್ಯಥೆಯ ಕತೆ-ಇವೆಲ್ಲ ಚಿತ್ರಿತವಾಗಿವೆ. ಆದರೆ 'ಮಗಳ ಮದುವೆ' ಕತೆಯಲ್ಲಿ ಬರುವ ಸ್ವಾತಂತ್ರ್ಯಯೋಧನೊಬ್ಬನನ್ನು ಹೊರತು ಉಳಿದೆಲ್ಲ ಕತೆಗಳಲ್ಲೂ ದಾಂಪತ್ಯವೇ-ಅದರ ಸಿಹಿ-ಕಹಿಗಳೊಂದಿಗೆ-ಕೇಂದ್ರವಾಗಿದೆ. ಅನಿಸಿದ್ದನ್ನು ಹೇಳುವುದು, ಅದಕ್ಕೊಂದು ಘಟನೆ-ಇಷ್ಟಿದ್ದರೆ ಸಾಕು ಅದು ತಾನೆ ಕತೆ? ಎಂಬ ಭಾವನೆಯಿಂದ ಬರೆಯುವ ಯಾವ ಬರಹವೂ ಇಲ್ಲಿನ ಕತೆಗಳಾಚೆಗೆ ಬೆಳೆಯಲು ಸಾಧ್ಯವಾಗದೇನೋ. ಇನ್ನು ಭಾಷೆಯನ್ನು ಕುರಿತಂತೆ ಮಲ್ಲಿಕಾ ಅವರ ಸಂಕಲನಕ್ಕೆ ಸಂಬಂಧಿಸಿದಂತೆ ಹೇಳಿದ ಮಾತುಗಳೇ ಇಲ್ಲಿಗೂ ಅನ್ವಯಿಸುತ್ತವೆ. ಆದರೆ ಅವರಂತೆ ಶಬ್ದಾಡಂಬರಕ್ಕೆ ತೊಡಗದೆ ಈಗಾಗಲೇ ಬಳಸಿ ಬಳಸಿ ಸವಕಲಾದ ಪದಗಳನ್ನು ಬಳಸುವ ಮತ್ತೊಂದು ಬಗೆಯ ಆಡಂಬರ ಇಲ್ಲಿ ಕಾಣಬರುತ್ತದೆ. 'ಕಪ್ಪು ಮೋಡ' 'ಮನವೆಂಬ ಮರ್ಕಟ', 'ಬಿರುಕು' ಇಂಥ ಕತೆಗಳು ಇದ್ದುದರಲ್ಲೇ ಗಮನಿಸಬಹುದಾದವು. ಉಳಿದವು 'ಓದಿಸಿಕೊಳ್ಳುವ' ಗುಣದಿಂದಲೂ ವಂಚಿತವಾಗಿವೆ.

## ಸಣ್ಣ ಕತೆ–2 (ಅನುವಾದಿತ)

**ಕಾಳೇಗೌಡ ನಾಗವಾರ**

ಬೇರೆ ಬೇರೆ ಭಾಷೆಗಳಿಂದ ಕನ್ನಡಕ್ಕೆ 1981ರಲ್ಲಿ ಒಟ್ಟು ಹತ್ತು ಕಥಾ ಸಂಕಲನಗಳು ಅನುವಾದಗೊಂಡಿವೆ. ಇವುಗಳಲ್ಲಿ ಜಗತ್ತಿನ ವೈವಿಧ್ಯಪೂರ್ಣ ಉತ್ತಮ ಕತೆಗಳನ್ನು ಕನ್ನಡಿಗರಿಗೆ ಪರಿಚಯಿಸುವ ನಿರಂಜನರ ಪ್ರಧಾನವೂ ಶ್ಲಾಘನೀಯವೂ ಆದ ಯೋಜನೆಯ ವಿಶ್ವಕಥಾಕೋಶ ಮಾಲಿಕೆಯ ಮೂರು ಮತ್ತು ನಾಲ್ಕನೆಯ ಕಂತುಗಳ ಎಂಟು ಪುಸ್ತಕಗಳಿವೆ. ಜೊತೆಗೆ ಕಾಫ್ಕಾನ ಕತೆಗಳು ಮತ್ತು ನಮ್ಮ ನೆರೆಯ ಆಂಧ್ರದ ತೆಲುಗಿನ ಒಂದು ಕಥಾ ಸಂಕಲನ ಕೂಡ ಸೇರಿವೆ.

ಹೆಜ್ಜೆಗುರುತು : ಅನು : ಕೆ. ಎಸ್. ನಿಸಾರ್ ಅಹಮದ್

ವಿಶ್ವಕಥಾಕೋಶ ಮಾಲಿಕೆಯ ಒಂಬತ್ತನೆಯ ಸಂಪುಟವಾದ ಈ ಕೃತಿಯಲ್ಲಿ ರಷ್ಯಾ ದೇಶದ ಪ್ರಸಿದ್ಧ ಲೇಖಕರ ಹದಿನೇಳು ಕತೆಗಳು ಸೇರಿವೆ. ಕ್ರಾಂತಿಪೂರ್ವ ಹಾಗೂ ಕ್ರಾಂತಿಯ ಅನಂತರದ ಕತೆಗಳು ಇಲ್ಲಿ ಸೇರಿದ್ದರೂ ಸಹ "ಸಂಕಲನಕಾರ ಗಮನಿಸ ಬೇಕಾದ ವಿವಿಧ ಅಂಶಗಳಲ್ಲಿ ಗ್ರಂಥ ವಿಸ್ತಾರವೂ ಒಂದು. ಹೀಗಾಗಿ ಪುಷ್ಕಿನ್, ಗಗೋಲರ ನೀಳ್ಗತೆಗಳನ್ನು ಅನಿವಾರ್ಯವಾಗಿ ಬಿಡಬೇಕಾಯಿತು" ಎಂದು ಪ್ರಧಾನ ಸಂಪಾದಕ ನಿರಂಜನರು ಆರಂಭದಲ್ಲಿಯೇ ತಿಳಿಸಿದ್ದಾರೆ.

ನಿಸಾರ ಅಹಮದರ ಅನುವಾದ ಸುಲಲಿತವಾಗಿದ್ದು ಈ ಬರವಣಿಗೆಯು ಕನ್ನಡದ ಜಾಯಮಾನಕ್ಕೆ ಹಿತವಾಗಿ ಒಗ್ಗುತ್ತದೆ. 'ಪಣ', 'ಮಕರ್ ಚಂದ್ರ'; 'ನಿಷಿದ್ಧ ಫಲ', 'ಸೈನಿಕನ ಮಗ', 'ದೇವಶಿಲ್ಪಿ' ಹಾಗೂ 'ಕ್ರಿಸ್‌ಮಸ್ ವೃಕ್ಷ ಮತ್ತು ಮದುವೆ' ಮುಂತಾದ ಉತ್ತಮ ಕತೆಗಳು ನೀಡುವ ಪರಿಣಾಮವು ದೊಡ್ಡದಾಗಿದೆ. 'ಪಣ' ಕತೆಯಲ್ಲಿ ಗೆಳೆಯರಿಬ್ಬರ ನಡುವಣ ಸರಸೋಕ್ತಿಗಳು—ಕೊನೆಗೆ ವಿರಸದ ವಾತಾವರಣವನ್ನು ಉಂಟುಮಾಡುತ್ತವೆ. ಸವಾಲು-ಜವಾಬುಗಳ ನಡುವೆ ಪಂದ್ಯ ಕಟ್ಟಲಾಗಿ ಹದಿನೈದು ವರ್ಷಗಳಷ್ಟು ದೀರ್ಘಕಾಲ ಸೆರೆಮನೆಯಲ್ಲಿ ಒಬ್ಬನು ಕೊಳೆ ಯಲು -ಸಿದ್ಧನಾಗುತ್ತಾನೆ. ಅದಕ್ಕೆ ಪಣವಾಗಿ ಇಪ್ಪತ್ತು ಲಕ್ಷ ರೂಬಲ್‌ಗಳನ್ನು ಇಡ ಲಾಗುತ್ತದೆ. ಸೆರೆಮನೆಯ ಅವಧಿಯಲ್ಲಿನ ಅಧ್ಯಯನ, ಚಿಂತನೆಗಳು ಸೆರೆಯಲ್ಲಿದ್ದಾತ ನನ್ನು ನಿಜಕ್ಕೂ ಹೊಸ ಮನುಷ್ಯನನ್ನಾಗಿ ರೂಪಿಸಿರುತ್ತವೆ. ಅದರ ಪ್ರತೀಕವಾಗಿ ಆತ ಹಣಕ್ಕೆ ಆಸೆಪಡದೆ, ತಾನೇ ಉದ್ದೇಶಪೂರ್ವಕವಾಗಿ ಕೇವಲ ಐದು ನಿಮಿಷಗಳ ಕಾಲ ಮುಂಚಿತವಾಗಿ ಹೊರಬಂದು ಷರತ್ತು ಮುರಿದು ಎಲ್ಲರನ್ನೂ ಆಶ್ಚರ್ಯಚಕಿತ ರನ್ನಾಗಿಸುವ ಮನೋಜ್ಞ ಕತೆ ಇದಾಗಿದೆ. ಇನ್ನಿತರ ಕತೆಗಳಲ್ಲಿ ಮನುಷ್ಯನ ಉಗ್ರ ಪ್ರೇಮ, ಛಲ, ಅಸೂಯೆ, ಆಸೆಬುರುಕುತನ, ಯುಕ್ತಾಯುಕ್ತತೆಯ ಬಗೆಗಿನ ಶೋಧ ಹಾಗೂ ಬದುಕಿನ ದುರಂತದ ಎಳೆಗಳನ್ನು ಕುರಿತ ಸೂಕ್ಷ್ಮವಾದ ನಿರೂಪಣೆಯನ್ನು ಕಾಣಬಹುದಾಗಿದೆ. "ಯಾವುದೇ ಉದಾತ್ತ ತತ್ವ ಸಣ್ಣತನ ದ್ರೋಹಗಳನ್ನ ಸಮರ್ಥಿಸು ವುದಿಲ್ಲ. ಎಲ್ಲ ಬಗೆಯ ಪಿತೂರಿ ದ್ರೋಹಗಳೂ, ಅವು ದೊಡ್ಡ ತತ್ವಗಳ ಮರೆ ಯಲ್ಲಿದ್ದರೂ ಬೆಳೆಯುತ್ತಾ ಹೋಗುತ್ತವೆ ; ಸಣ್ಣ ಅಸೂಯೆಯಿಂದ ಪ್ರಾರಂಭವಾಗಿ ಕಂಬಳಿ ಹುಳುವಿನಂತೆ ದೊಡ್ಡದಾಗಿ ಬೆಳೆಯುತ್ತಾ ಹೋಗುತ್ತವೆ." (ಪುಟ, 191) ಎಂಬುದನ್ನು ಸರಳ ಸಾಧಾರಣ ಸಂಗತಿಗಳ ಮೂಲಕ 'ನಿಷಿದ್ಧ ಫಲ' ಕತೆಯು ವಿವರಿಸುತ್ತದೆ. ಇಡೀ ಸಂಪುಟವು ಓದುಗರಿಗೆ ತೃಪ್ತಿಕೊಡುವ ಕತೆಗಳನ್ನು ಒಳ ಗೊಂಡಿದೆ.

ಅರಬಿ : ಅನು : ಶಾ. ಬಾಲುರಾವ್

ಐರ್‌ಲೆಂಡ್, ವೇಲ್ಸ್, ಸ್ಕಾಟ್‌ಲೆಂಡ್ ಕತೆಗಳನ್ನು ಒಳಗೊಂಡಿರುವ 'ಅರಬಿ' ಸಂಕಲನವು ಹತ್ತನೆಯ ಸಂಪುಟವಾಗಿದೆ. ಇಲ್ಲಿರುವ ಹದಿನೈದು ಕತೆಗಳಲ್ಲಿ 'ಅರಬಿ',

'ಜೂಲಿಯಾಳ ಶಾಪ', 'ಮಕ್ಕಳು', 'ಹುರಿಯ ಹಾಡು', 'ಜಾನೆಟ್ ಡಾಲ್ರಿಂಪ್‌ಲಳ ಮದುವೆಯ ಕಥೆ', 'ಮಣ್ಣು', 'ಕಿನ್ನರ ಕುಮಾರ' ಮತ್ತು 'ಮ್ಯಾಟಿನಿ' ಕತೆಗಳು ಈ ಸಂಕಲನದ ಉತ್ತಮ ಕತೆಗಳಾಗಿವೆ. ಬಾಲೂರಾಯರ ಅನುವಾದದ ಸೊಗಸು ಉದ್ದಕ್ಕೂ ಎದ್ದು ಕಾಣುತ್ತದೆ. ಯೇಟ್ಸ್‌ನ 'ಹುರಿಯ ಹಾಡು' ಕತೆಯ ಅವಿಭಾಜ್ಯ ಅಂಗವಾಗಿ ಬರುವ ಹಾಡುಗಬ್ಬವನ್ನು ಅವರು ಕನ್ನಡಕ್ಕೆ ಸೊಗಸಾಗಿ ತಂದಿದ್ದಾರೆ.

ಬೆಟ್ಟಾದ ತಿಟ್ಟೀನ ಮೇಲೊಂದು ಕಣಿವೆ
ರಂಗೂ ರಂಗೀನ ಪಟ್ಟಣ ನಡುವೆ
ತಟ್ಟಾದು ನಮಗಲ್ಲಿ ಸಾವೀನ ನೆರಳು
ಮುಟ್ಟಾದು ಮುದಿಗೈಯ ಮೂಳೇಯ ಬೆರಳು
ಗಂಡು-ಹೆಣ್ಣನು ಅಲ್ಲಿ ಬೆಸೆದಿದೆ ಪ್ರೀತಿ
ಕೊಟ್ಟಷ್ಟು ಮಿಗುವೂದೆ ಪ್ರೀತಿಯ ರೀತಿ
ವರುಷ ಹನ್ನೆರಡು ತಿಂಗಾಳು ಮರಮರ ಜಗ್ಗಿ
ಕಣ್ಣರಸಿದಲ್ಲೆಲ್ಲ ಹೂ ಹಣ್ಣು ಸುಗ್ಗಿ
ಹೊಳೆಕೇರೆ ನೆರೆಯೆದ್ದು ಪರಿದೀದೆ ಮದ್ಯ
ಕೆಂಪೀನ ಮದ್ಯ, ಕಂದೂಗೆಂಪಿನ ಮದ್ಯ
ಮುದಿ ಅಜ್ಜನೆತ್ತೀದ ತಿದಿಕೊಳಲ ಸದ್ದು
ಹಾಡಾಗಿ ಹರಿದೀದೆ ಕಣೀವೆಲೆಲ್ಲೆಲ್ಲು
ಬೆಟ್ಟಾದ ತಿಟ್ಟೀನ ಮೇಲೊಂದು ಕಣಿವೆ
ನಡಿ ಹೆಣ್ಣೆ, ಹೋಗೋಣ, ಆ ಕಣಿವೆ ನಡುವೆ

'ಜೂಲಿಯಾಳ ಶಾಪ' ಮತ್ತು 'ಹುರಿಯ ಹಾಡು' ಕತೆಗಳು ಮನುಷ್ಯ ಸಂಬಂಧ ಗಳನ್ನು ಹರಿಹಂಚುವ, ಸಹಜವೂ ನಿರ್ಮಲವೂ ಆದುದ್ದನ್ನು ಬೆಳೆಯಗೊಡದ ವಾತಾವರಣವೊಂದರಲ್ಲಿ ಕಾಣಸಿಗುವ ಕ್ರೌರ್ಯದ ಎಳೆಗಳನ್ನು ಬಿಡಿಸಿ ತೋರಿಸುತ್ತವೆ. 'ಕಿನ್ನರ ಕುಮಾರ' ಮತ್ತು 'ಮ್ಯಾಟಿನಿ' ಕತೆಗಳು ಎಳೆಯರ ಲೋಕದ ಕನಸುಗಳನ್ನು, ಮುಗ್ಧತೆಯನ್ನು ವಿವರಿಸುತ್ತಲೇ ದೊಡ್ಡವರ ಪ್ರಪಂಚದಲ್ಲಿನ ವಿದ್ಯಮಾನಗಳನ್ನು ಅಪರೂಪದ ಕ್ರಮಗಳಲ್ಲಿ ಒರೆಗೆ ಹಚ್ಚುವ ಬೆಡಗನ್ನು ಒಳಗೊಂಡಿವೆ.

ನೆತ್ತರು ದೆವ್ವ : ಅನು : ಎಚ್. ಕೆ. ರಾಮಚಂದ್ರಮೂರ್ತಿ

ಇದು ಹನ್ನೊಂದನೆಯ ಸಂಪುಟ. ಜೆಕೊಸ್ಲಾವಾಕಿಯ ಮತ್ತು ಪೋಲೆಂಡ್‌ನ ಹದಿಮೂರು ಕತೆಗಳು ಈ ಸಂಕಲನದಲ್ಲಿವೆ. ಇವುಗಳಲ್ಲಿ 'ಆರ್ಕಿಮಿಡೀಸನ ಮರಣ', 'ಕೂಳೆಯ ಹೊಲ', 'ಆಸ್ಪಿನ್‌ವಾಲ್ ದೀಪಸ್ತಂಭದ ಕಾವಲುಗಾರ', 'ಪೋಲ್ಪೀನನ

ಡಮರು', 'ನೆತ್ತರು ದೆವ್ವ', 'ಆರು ಹುಡುಗರ ಕಥೆ' ಮತ್ತು 'ಅವಳ ಮುದ್ದುಮರಿ' ಮುಂತಾದ ಕತೆಗಳು ಹೆಚ್ಚು ಗಮನಾರ್ಹವಾಗಿವೆ. ಜನಸಾಮಾನ್ಯರು ತಮ್ಮ ಬದುಕಿನ ಉತ್ಕಟ ಗಳಿಗೆಗಳಲ್ಲಿ ನಿರುಪಾಯರಾಗಿದ್ದುಕೊಂಡೇ ಜೀವನ ಪ್ರೀತಿಯನ್ನು ದಟ್ಟವಾಗಿ ಪ್ರಕಟಿಸುವ ವಿವಿಧ ಬಗೆಗಳನ್ನು ಇಲ್ಲಿನ ಮುಖ್ಯ ಕತೆಗಳಲ್ಲಿ ಕಾಣಬಹುದಾಗಿದೆ. 'ಕೊಳೆಯ ಹೊಲ' ಮತ್ತು 'ಅವಳ ಮುದ್ದಿನ ಮರಿ' ಕತೆಗಳು ಸೂಕ್ಷ್ಮಸಂವೇದನ ಶೀಲವಾದ ಸ್ತ್ರೀಚೇತನಗಳ ಇರುವಿಕೆ ಹಾಗೂ ಅನಿಸಿಕೆಗಳನ್ನು ಹಲಬಗೆಯ ಆತಂಕಗಳ ನಡುವೆಯೂ ಗಟ್ಟಿಯಾಗಿ ಪ್ರಕಟಗೊಳ್ಳುವ ವಿಶಿಷ್ಟ ರೀತಿಯನ್ನು ಒಳಗೊಂಡಿವೆ. 'ಆಸ್ಪಿನ್‌ವಾಲ್ ದೀಪಸ್ತಂಭದ ಕಾವಲುಗಾರ' ಮತ್ತು 'ಪೋಲ್ಪೀನನ ಡಮರು' ಕತೆಗಳಲ್ಲಿ ಕಂಡುಬರುವ ವೃದ್ಧರಾದ ಕಥಾ ನಾಯಕರು ಜೀವನದ ಬಗ್ಗೆ ತೋರುವ ಗಾಢಶ್ರದ್ಧೆ ಅದ್ಭುತವಾದದ್ದು. 'ಆರ್ಕಿಮಿಡೀಸ್‌ನ ಮರಣ' ಕಥೆಯಲ್ಲಿ ರೋಮನ್ ಸರದಾರ ಕತ್ತಿ ಜಳಪಿಸುತ್ತ ಬಂದು ಆರ್ಕಿಮಿಡೀಸ್‌ನನ್ನು ಬೆದರಿಸುತ್ತ, ಪ್ರಪಂಚದ ಮೇಲೆ ಒಡೆತನ ಸ್ಥಾಪಿಸುವ ರೋಮನ್ ಧ್ಯೇಯಕ್ಕೆ ಸಹಕರಿಸಬೇಕೆಂದು ಹೇಳುತ್ತಾನೆ. ಜ್ಞಾನಿ ಆರ್ಕಿಮಿಡೀಸ್ ಕಿಂಚಿತ್ತೂ ವಿಚಲಿತನಾಗದೆ ತನ್ನ ಅನಿಸಿಕೆಗಳನ್ನು ತಣ್ಣಗೆ ವಿವರಿಸುತ್ತ "ನಿಮ್ಮ ಸಾಮ್ರಾಜ್ಯ ಎಷ್ಟೇ ದೊಡ್ಡದಾದರೂ ಅದಕ್ಕೆ ಗಡಿಗಳಿಲ್ಲ ದಿರೋದಿಕ್ಕೆ ಸಾಧ್ಯವಿಲ್ಲ, ಲೂಶಿಯಸ್. ಒಂದು ದೊಡ್ಡ ವೃತ್ತ ಸಣ್ಣ ವೃತ್ತಕ್ಕಿಂತ ಹೆಚ್ಚು ಸಂಪೂರ್ಣ ಅಂತ ನಿನಗೆ ಅನಿಸುತ್ತದೆಯೇ? ಹೆಚ್ಚು ದೊಡ್ಡ ವೃತ್ತ ರಚಿಸಿದ ಮಾತ್ರಕ್ಕೆ ಒಬ್ಬ ವ್ಯಕ್ತಿ ಹೆಚ್ಚು ದೊಡ್ಡ ರೇಖಾಗಣಿತಜ್ಞ ಆಗಿಬಿಡ್ತಾನೆ ಅಂತ ನೀನು ಭಾವಿಸ್ತೀಯಾ"? ಎಂದು ವಿವರಿಸಿ ಹೇಳುತ್ತಲೇ ಮರಣವನ್ನಪ್ಪುವ ಬಗೆಯು ಓದುಗರ ಹೃದಯವನ್ನು ಕಲಕುತ್ತದೆ. ರಾಮಚಂದ್ರಮೂರ್ತಿಯವರ ಅನುವಾದವು ಉತ್ತಮ ಮಟ್ಟದಲ್ಲಿದೆ.

ಬಾವಿಕಟ್ಟೆಯ ಬಳಿ : ಅನು : ಚಿ. ಶ್ರೀನಿವಾಸರಾಜು

ಹನ್ನರಡನೆಯ ಕಥಾ ಸಂಪುಟವಾದ ಈ ಕೃತಿಯಲ್ಲಿ ಯುಗೋಸ್ಲಾವಿಯ, ಅಲ್ಬೇನಿಯ, ಬಲ್ಗೇರಿಯಾದ ಹನ್ನೆರಡು ಕತೆಗಳು ಸೇರಿವೆ. ಇವುಗಳಲ್ಲಿ 'ಯುದ್ಧ', 'ತಾಯಿ', 'ಭಾವಣಿ ಕಿತ್ತರು', 'ಅಜ್ಞಾತ ಯೋಧ', 'ಬಾವಿಕಟ್ಟೆಯ ಬಳಿ', 'ಕಾವ್ಯ' ಮತ್ತು 'ಕಮೀಷನರ್ ಸಾಹೇಬರ ಕ್ರಿಸ್‌ಮಸ್' ಕಥೆಗಳು ಉತ್ತಮ ಮಟ್ಟದವುಗಳಾಗಿವೆ. 'ಯುದ್ಧ' ಮತ್ತು 'ಭಾವಣಿ ಕಿತ್ತರು' ಕತೆಗಳಲ್ಲಿ ಮಾನವೀಯ ಲಕ್ಷಣಗಳ ಅಭಾವ ಇರುವ ಸಂದರ್ಭಗಳು ಎಷ್ಟೊಂದು ಭಯಂಕರವೂ, ಕ್ರೂರವೂ ಆಗಿದ್ದುಕೊಂಡು ನಿಸ್ಸಹಾಯಕರನ್ನು ಲೀಲಾಜಾಲವಾಗಿ ಬೇಟೆಯಾಡಬಲ್ಲವು ಎಂಬು ವನ್ನು ನಿಚ್ಚಳವಾಗಿ ಕಾಣಬಹುದಾಗಿದೆ. ಇದಕ್ಕೆ ವಿರುದ್ಧವಾಗಿ 'ಅಜ್ಞಾತಯೋಧ' ಮತ್ತು 'ತಾಯಿ' ಕಥೆಗಳು ಪ್ರೀತ್ಯಾದರ ವಾತ್ಸಲ್ಯಗಳ ಖರತೆಗಳು ನಿರ್ಮಿಸಬಲ್ಲ ಹೊಸ ಬಗೆಯ ವಾತಾವರಣದ ಚಿತ್ರಣವನ್ನು ನೀಡುತ್ತವೆ. ದರ್ಪದ ಡೌಲಿನ

ಅಧಿಕಾರಿಗಳಿಗೆ ಪಾಠಕಲಿಸಿ ಗೇಲಿ ಮಾಡುತ್ತಲೇ, ಅಧಿಕಾರಿಗಳ ಅಹಂಕಾರಕ್ಕೆ ತಕ್ಕ ಔದಾಸೀನ್ಯವನ್ನು ಶ್ರೀಸಾಮಾನ್ಯರು ಮುಯ್ಯಿ ರೂಪದಲ್ಲಿ ಅತ್ಯಂತ ಜಾಣತನದಿಂದಲೇ ಹೇಗೆ ಹಿಂತಿರುಗಿಸಬಲ್ಲರೆಂಬುದನ್ನು 'ಕಮೀಷನರ್ ಸಾಹೇಬರ ಕ್ರಿಸ್‌ಮಸ್' ಕಥೆಯು ಸ್ವಾರಸ್ಯಕರವಾಗಿ ನಿರೂಪಿಸುತ್ತದೆ. ಈ ಸಂಕಲನದ ಕೊನೆಯ ಕತೆಯಾದ 'ಕಾವ್ಯ'ವು ನೀಡುವ ಪರಿಣಾಮ ನಿಜಕ್ಕೂ ದೊಡ್ಡದಾಗಿದೆ. ಫ್ಯಾಸಿಸ್ಟರಿಂದ ಗಲ್ಲಿಗೇರಿಸಲ್ಪಟ್ಟ ಬಲ್ಗೇರಿಯದ ಕ್ರಾಂತಿಕಾರಿ ಕವಿಯ ಕವನವನ್ನು ತನ್ನ ಕಥಾಶರೀರದಲ್ಲಿ ಒಳಗೊಂಡಿರುವ ಈ ಕಥೆಯು ಮನೋಜ್ಞವಾಗಿದ್ದು, ಹೋರಾಟದ ದಾರಿಯಲ್ಲಿನ ಎಡರು ತೊಡರುಗಳನ್ನು ಚಿತ್ರಿಸುತ್ತದೆ. ಶ್ರೀನಿವಾಸರಾಜುರವರ ಅನುವಾದ ಹಿತವಾಗಿದೆ. ಅವರ ಅನುವಾದದಲ್ಲಿನ ಈ ಕೆಲ ಸಾಲುಗಳನ್ನು ಉದಾಹರಣೆಗಾಗಿ ನೋಡಬಹುದು :

> ಹೋರಾಟದ ಹಾದಿ ಕಠಿಣ, ಅಲ್ಲಿ ಇಲ್ಲ ಕರುಣೆಯು
> ಹೋರಾಟದ ಹಾದಿ ದೀರ್ಘ, ಅದಕೆ ಇಲ್ಲ ಅಂತ್ಯವು.
> ನಾನು ಬಿದ್ದೆ, ಆದರಲ್ಲಿ
> ನೂರು ಜನರು ಬರುವರು
> ಬಲಿದಾನದ ಯಾಗದಲ್ಲಿ
> ಹೆಸರು ಯಾರು ಕೇಳ್ವರು?
> ಗುಂಡುಬಿದ್ದು ನಮ್ಮ ಎದೆಯ ರಕ್ತ ಚೆಲ್ಲಿತೇ?
> ಹೆಣವು ಕೊಳೆತು ಹುಳದ ಹೊಟ್ಟೆ ತುಂಬಿಹೋಯಿತೇ?
> ಇಲ್ಲ ಇಲ್ಲ ನನ್ನ ಜನರೆ
> ನಮ್ಮ ಪ್ರೀತಿ ಸಾಯದು
> ಬಿರುಗಾಳಿಯ ಅಬ್ಬರದಲಿ
> ನಿಮ್ಮ ಜೊತೆಗೆ ಇರುವೆವು (ಪು. 191)

ಅದೃಷ್ಟ : ಅನು : ವೀಣಾ ಶಾಂತೇಶ್ವರ

ಹದಿಮೂರನೆಯ ಸಂಪುಟವಾದ 'ಅದೃಷ್ಟ' ಕಥಾಸಂಕಲನವು ಅಮೆರಿಕೆಯ ಹನ್ನೊಂದು ಕಥೆಗಳು ಹಾಗೂ ಕೆನಡ, ಮೆಕ್ಸಿಕೋಗಳ ತಲಾ ಒಂದೊಂದು ಕತೆಗಳನ್ನು ಒಳಗೊಂಡಿದೆ. 'ದಾರಿಯಲ್ಲಿ ಕಂಡವನು', 'ವಸಂತ ನಿನಗೆ ನಮನ' 'ಜೀವನ ನಿಯಮ', 'ಕತೆ ಹೇಳಿದ ಹೃದಯ', 'ಮುರಿದು ಹೋದ ಭೂಮಂಡಲ', ಹದಿಮೂರನೆಯ ತೋಳ' ಮುಂತಾದ ಉತ್ತಮ ಕತೆಗಳು ಈ ಸಂಕಲನದಲ್ಲಿ, ಸೇರಿವೆ. ಇಲ್ಲಿ ಆಯ್ಕೆಯಾಗಿರುವ ಅಮೆರಿಕೆಯ ಕತೆಗಳೆಲ್ಲವೂ ಸಾವಿನ ವಿವಿಧ ಮುಖಗಳನ್ನು ಚಿತ್ರಿಸುತ್ತಿರುವುದು ಒಂದು ಆಶ್ಚರ್ಯದ ಸಂಗತಿಯಾಗಿದೆ. 'ಕತೆ ಹೇಳಿದ ಹೃದಯ' ಮತ್ತು 'ಜೀವನ ನಿಯಮ' ಕತೆಗಳು ಸಾವಿನೆದುರಿನ ಆತಂಕದ ಕ್ಷಣಗಳನ್ನು ಮನೋವೈಜ್ಞಾನಿಕವಾಗಿ ಚಿತ್ರಿಸಿರುವ ರೀತಿಯು ಪರಿಣಾಮಕಾರಿಯಾಗಿದೆ. 'ವಸಂತ

ನಿನಗೆ ನಮನ' ಕಥೆಯು ಬಡತನದ ಬೇಗೆಯಲ್ಲಿ ಬೇಯುತ್ತಿರುವ ಕುಟುಂಬದ ಚಿತ್ರಣ ವನ್ನು ನೀಡಿದರೆ, 'ಇನ್ನೇನು ಗಂಡಸಾಗಲಿದ್ದ ಒಬ್ಬ ಗಂಡಸು' ಕಥೆಯು ಬಾಲಕರ ಪ್ರಪಂಚದ ಅಸಾಧಾರಣ ಕುತೂಹಲ ಮತ್ತು ಸಾಹಸ ಪ್ರವೃತ್ತಿಯನ್ನು ವಿವರಿಸು ತ್ತದೆ. ಕೆನಡಾದ ಏಕೈಕ ಕಥೆ 'ಮುರಿದು ಹೋದ ಭೂಮಂಡಲ' ಹಳ್ಳಿಯ ಸಂಪ್ರ ದಾಯ ಶರಣ ತಂದೆ ಮತ್ತು ವೈಜ್ಞಾನಿಕ ಚಿಂತನೆಯ ಹಾದಿಯಲ್ಲಿ ತೀರಾ ಮುಂದೆ ಹೋಗಿರುವ ಮಗನ ನಡುವಣ ಅಪೂರ್ವ ಘರ್ಷಣೆಯನ್ನು ಚಿತ್ರಿಸುತ್ತದೆ. 'ಹದಿಮೂರನೆಯ ತೋಳ' ಎಂಬ ಮೆಕ್ಸಿಕೋ ಕಥೆಯು ಹನ್ನೆರಡು ತೋಳುಗಳನ್ನು ಭೀಕರವಾಗಿ ಕೊಂದವನು—ಕೈಗೆ ಸಲೀಸಾಗಿ ಸಿಕ್ಕ ಹದಿಮೂರನೆಯ ತೋಳವನ್ನು ಕಂಡು ಕನಿಕರಿಸುತ್ತ ಹೊಸ ಜನ್ಮವನ್ನು ಪಡೆದವನಂತೆ ಮಾರ್ಪಡುವ ಬಗೆಯನ್ನು ವಿವರಿಸುತ್ತದೆ. ಕತೆಗಾರ್ತಿ ವೀಣಾ ಅವರ ಅನುವಾದ ಸೊಗಸಾಗಿದೆ.

ಸಜ್ಜನನ ಸಾವು : ಅನು : ಕ. ನಂ. ನಾಗರಾಜು

ಹದಿನಾಲ್ಕನೆಯ ಸಂಪುಟವಾದ 'ಸಜ್ಜನನ ಸಾವು' ಕೃತಿಯಲ್ಲಿ ಐಸ್‌ಲೆಂಡ್, ನಾರ್ವೆ ಹಾಗೂ ಫಿನ್‌ಲೆಂಡ್ ದೇಶಗಳ ತಲಾ ಎರಡು ಕತೆಗಳು ಮತ್ತು ಡೆನ್‌ಮಾರ್ಕ್ ಹಾಗೂ ಸ್ವೀಡನ್‌ನ ತಲಾ ಮೂರು ಕತೆಗಳು ಸೇರಿವೆ. ಇಲ್ಲಿನ 'ಬಲೆ-ಬೆಸ್ತರು', ಎರಡು ಪ್ರಪಂಚಗಳು', 'ಪ್ರೇಮ ಮತ್ತು ರೊಟ್ಟಿ', 'ಪರಿಶುದ್ಧ ಮಾನವ ಕುಲ', 'ಹಾದಿಯ ಹಕ್ಕಿಗಳು', 'ವಿಚಿತ್ರ ಪ್ರವಾಸಿ', 'ಸಜ್ಜನನ ಸಾವು' 'ಬುಲ್ ಬುಲ್ ಹಕ್ಕಿ' ಮುಂತಾದವು ವೈವಿಧ್ಯಪೂರ್ಣ ವಸ್ತುವಿನಿಂದ ಕೂಡಿರುವ ಗಮನಾರ್ಹ ಕತೆಗಳಾಗಿವೆ. ನಾಗರಾಜುರವರ ಅನುವಾದ ಸಮರ್ಪಕವಾಗಿದೆ. ಸಹಜವಾಗಿಯೇ ಅಸೂಯೆಯು ತಲುಪಬಹುದಾದ ಅಧಃಪಾತಾಳವನ್ನು 'ಸಜ್ಜನನ ಸಾವು' ಮನೋಜ್ಞವಾಗಿ ಚಿತ್ರಿಸುತ್ತದೆ. ಮನುಷ್ಯರ ವಿಭಿನ್ನ ಆಲೋಚನೆ ಮತ್ತು ಅತಿರೇಕದ ಸ್ವಭಾವಗಳಲ್ಲಿನ ವಿವಿಧ ಮಜಲುಗಳನ್ನು ವಿವರಿಸುವ 'ಎರಡು ಪ್ರಪಂಚಗಳು' ಕತೆಯು ಮೂಢ ನಂಬಿಕೆಗಳ ತಳಪಾಯವನ್ನು ಕುರಿತು ಮೂಲಭೂತ ಪ್ರಶ್ನೆಗಳನ್ನು ಎತ್ತುತ್ತದೆ. 'ತಂದೆ' ಕತೆಯು ಗಾಢವಾದ ಹೆಂಗರುಳಿನ ವಿಶಿಷ್ಟ ಕತೆಯಾಗಿದೆ. ಜೊತೆಗೆ ಜನ ಸಮುಷ್ಟಿಯ ಉಲ್ಲಾಸ-ಆನಂದದ ಗಳಿಗೆಗಳಿಗೇ ಹೆಚ್ಚಿನ ಒತ್ತುಕೊಟ್ಟು ತನ್ನನ್ನು ಸಂಪೂರ್ಣವಾಗಿ ಕಿತ್ತುಕೊಳ್ಳುವ ಹಿರಿಯ ಜೀವವೊಂದರ ಪ್ರೀತ್ಯಾದರಗಳ ಕ್ಷಣ ಗಳನ್ನು ಚಿತ್ರಿಸುತ್ತದೆ. 'ಪ್ರೇಮ ಮತ್ತು ರೊಟ್ಟಿ' ಕತೆಯು ಆರ್ಥಿಕ ತೊಂದರೆಗಳ ಒರೆಗಲ್ಲಿನ ಮೇಲೆ ದಂಪತಿಗಳ ಪ್ರೇಮವು ಪರೀಕ್ಷಿಸಲ್ಪಡುವ ಸ್ಥಿತಿಯನ್ನು ವಿವರಿಸು ತ್ತದೆ. ಫಿನ್‌ಲೆಂಡಿನ ಕಥೆ "ಪರಿಶುದ್ಧ ಮಾನವಕುಲ (ಲೇ : ಮೂರ್ತಿ ಲಾರ್ನಿ)ವು ಕಪ್ಪು ಮತ್ತು ಬಿಳಿಯ ಜನರ ನಡುವಣ ವರ್ಣಭೇದ ಸಮಸ್ಯೆಯನ್ನು ಕುರಿತ ಒಳ್ಳೆಯ ಕತೆ. ಜನರು ಸ್ಮಶಾನದಲ್ಲಿ ಮಾತ್ರ ಪೂರ್ಣ ಸಮಾನತೆ ಪಡೆದುಕೊಳ್ಳುತ್ತಾರೆ. ಅಲ್ಲಿ ಬಿಳಿಯ ಜನ ವರ್ಣ ವ್ಯತ್ಯಾಸಗಳ ಬಗ್ಗೆ ಒಂದೇ ಒಂದು ಮಾತನ್ನೂ ಆಡದೆ ಕರಿಯ ಜನರೊಂದಿಗೆ ಸಮಾನವಾಗಿ ಮಲಗಿರುತ್ತಾರೆ" (ಪು. 142) ಎಂಬ ದಾರುಣವಾದ ನೋವಿನ ಮಾತುಗಳನ್ನು ಈ ಕತೆಯಲ್ಲಿ ಒಂದೆಡೆ ಕಾಣುತ್ತೇವೆ. ವರ್ಣಭೇದ ನೀತಿ

ಯನ್ನು ಅತ್ಯಂತ ಕಟುವಾದ ರೀತಿಯಲ್ಲಿ ವಿಡಂಬಿಸಿಯೂ ಸಹ, ಕಲಾತ್ಮಕವಾಗಿ ಉಳಿದಿರುವ ಈ ಕತೆಯು 'ಸಜ್ಜನನ ಸಾವು' ಸಂಕಲನದ ಅತ್ಯುತ್ತಮ ಕತೆಯಾಗಿದೆ.

ಡೇಗೆ ಹಕ್ಕಿ : ಅನು : ಎಸ್. ಅನಂತನಾರಾಯಣ

ಇಟಲಿ ದೇಶದ ಏಳು ಮತ್ತು ಆಸ್ಟ್ರಿಯಾದ ಐದು ಕತೆಗಳು ಹದಿನೈದನೆಯ ಸಂಪುಟವಾದ 'ಡೇಗೆ ಹಕ್ಕಿ' ಕೃತಿಯಲ್ಲಿವೆ. 'ಲೂಲುವಿನ ವಿಜಯ', 'ಡೇಗೆ ಹಕ್ಕಿ', 'ಸತ್ತವರು ಮೂಕರು' ಮತ್ತು 'ಚಂದ್ರಕಿರಣಗಳ ಓಣಿ' ಕತೆಗಳು ಪ್ರೇಮಜೀವನದ ವಿವಿಧ ಮುಖಗಳನ್ನು ಅತ್ಯಂತ ಸತ್ವಪೂರ್ಣವಾಗಿ ಚಿತ್ರಿಸುತ್ತವೆ. ಜೊವಾನ್ನಿ ಬೊಕ್ಕಾಚ್ಚೋನ ಪ್ರಸಿದ್ಧ ಕತೆ 'ಡೇಗೆ ಹಕ್ಕಿ'ಯಲ್ಲಿ ತನ್ನನ್ನು ಒಂದು ಕಾಲಕ್ಕೆ ಆಳವಾಗಿ ಪ್ರೀತಿಸಿದವನನ್ನು ಆಗ ಅರ್ಥಮಾಡಿಕೊಳ್ಳಲಾಗದ ಹೆಣ್ಣೊಬ್ಬಳು ಮುಂದೆ ತಾನು ವಿಧವೆಯಾಗಿದ್ದು, ವಿಶಿಷ್ಟ ಸಂದರ್ಭದಲ್ಲಿ ಆತನನ್ನು ಹತ್ತಿರದಿಂದ ನೋಡುವ ಅವಕಾಶವೊದಗುತ್ತದೆ. ಕೊನೆಗೆ ಈಗ ಸಹ ತನಗಾಗಿ ಹಂಬಲಿಸುವ ತನ್ನ ಆ ಪ್ರಿಯಕರನನ್ನು ಒಪ್ಪಿ ಆತನ ಜೀವನ ಸಂಗಾತಿಯಾಗುತ್ತಾಳೆ. 'ಲೂಲುವಿನ ವಿಜಯ' ಕಥೆ ಕೂಡ ಪರಸ್ಪರ ಅರ್ಥ ಮಾಡಿಕೊಂಡು ಪ್ರೇಮಿಸುವವರ ನಡವಳಿಕೆಗಳನ್ನು ಸಹಜವಾಗಿ ಎತ್ತಿಹಿಡಿಯುವ ಕತೆಯಾಗಿದೆ. 'ಸತ್ತವರು ಮೂಕರು' ಕಥೆಯಲ್ಲಿ ಅತೃಪ್ತಳಾದ ನಾಯಕಿಯೊಬ್ಬಳು ತಾನು ವಿವಾಹಿತೆಯಾಗಿದ್ದರೂ ಬೇರೊಬ್ಬ. ಗೆಳೆಯನಲ್ಲಿ ಅನುರಕ್ತಳಾಗಿ ಮಾನಸಿಕವಾಗಿ ತೊಯ್ದಾಡುವ ಚಿತ್ರ ಕಾಣಿಸುತ್ತದೆ. 'ಚಂದ್ರಕಿರಣಗಳ ಓಣಿ' ಕಥೆಯಂತೂ ಈ ಸಂಕಲನದ ಒಂದು ವಿಶಿಷ್ಟ ಕಥೆಯಾಗಿದ್ದು ಜಿಪುಣಾಗ್ರೇಸರನೂ, ವಿಲಕ್ಷಣವಂತನೂ, ಉಗ್ರಪ್ರೇಮಿಯೂ ಆದ ವ್ಯಕ್ತಿಯೊಬ್ಬನ ಮಾನಸಿಕ ಸ್ಥಿತಿಯನ್ನು ವಿವರಿಸುತ್ತದೆ. ಇವುಗಳ ಜೊತೆಗೆ 'ಕ್ರಾಂಬಾಂಬೂಲಿ', 'ಜ್ಯೋತಿಷಿ ಮತ್ತು ಕಥೆ' ಹಾಗೂ 'ಏಳನೆಯ ಬಾವಿ' ಕತೆಗಳು ಗಮನಾರ್ಹವಾಗಿವೆ. ನಾಜಿ ಜರ್ಮನಿಯ ಅತ್ಯಾಚಾರದ ಹಿನ್ನೆಲೆಯಲ್ಲಿ ಬರೆಯಲಾಗಿರುವ ಕಥೆಗಳಾದ 'ನನ್ನ ಸಾವಿನ ಕತೆ' ಮತ್ತು 'ಗುಪ್ತದಾಳಿ' ಮನಕರಗಿಸುತ್ತವೆ. ಅನಂತನಾರಾಯಣರು ತುಂಬು ಶ್ರದ್ಧೆಯಿಂದ ಅನುವಾದ ಕಾರ್ಯವನ್ನು ನಿರ್ವಹಿಸಿದ್ದಾರೆ.

ಅವಸಾನ : ಅನು : ಈಶ್ವರಯ್ಯ

ಇದು ವಿಶ್ವಕಥಾಕೋಶದ ಹದಿನಾರನೆಯ ಸಂಪುಟ. ಗ್ರೀಸ್‌ನ ಐದು, ಸೈಪ್ರಸ್‌ನ ಎರಡು ಮತ್ತು ಟರ್ಕಿಯ ಮೂರು ಕಥೆಗಳು ಈ ಕೃತಿಯಲ್ಲಿದ್ದು ವೈವಿಧ್ಯಪೂರ್ಣವೂ ಉತ್ತಮ ಮಟ್ಟದವೂ ಆಗಿದ್ದು ಸಾಹಿತ್ಯಾಸಕ್ತರ ಗಮನವನ್ನು ಸೆಳೆಯುತ್ತವೆ. ಇವುಗಳಲ್ಲಿ 'ಅವಸಾನ', 'ಮಿಖಾಲಿಯ ರಾತ್ರಿ', 'ಮಾತೃತ್ವ',

'ಬಂಡಾಯ', 'ಮನೆಯನ್ನು ಕೊಳ್ಳುವ ಬಗೆ', 'ಎಚ್ಚೆತ್ತ ಜನರು', ಮತ್ತು 'ಸತ್ತವನ ಸಮಾರಾಧನೆ' ಕಥೆಗಳು ನೀಡುವ ಅನುಭವ ವಿಶಿಷ್ಟವಾದದ್ದು. ಊರಿಗೆ ಉಪಕಾರಿಯಾಗಿದ್ದೂ ಉಪಕಾರ ಹೊಂದಿದ ಜನರಿಂದಲೇ ಕೊಲ್ಲಲ್ಪಡುವ ವ್ಯಕ್ತಿಯೊಬ್ಬನ ದಾರುಣಚಿತ್ರ 'ಅವಸಾನ' ಕಥೆಯಲ್ಲಿ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. 'ಮಿಖಾಲಿಯ ರಾತ್ರಿ' ಹೆಣ್ಣೊಬ್ಬಳ ಬದುಕಿನ ತೀವ್ರ ದುಃಖದ ಗಳಿಗೆಗಳನ್ನು ವಿವರಿಸಿದರೆ, 'ಮಾತೃತ್ವ' ಕಥೆಯು ಮಾನವನ ಮನಸ್ಸಿನಲ್ಲಿ ಸದಾ ಚಿಗುರೊಡೆಯಲು ಹಾತೊರೆಯುವ ಜೀವನ ಪ್ರೀತಿಯನ್ನು ದಟ್ಟವಾಗಿ ಚಿತ್ರಿಸುತ್ತದೆ. ಫ್ಯಾಂಟಸಿಯ ತಂತ್ರವನ್ನು ಅಳವಡಿಸಿಕೊಂಡು ಹೊಸ ಬದುಕಿನ ಸಾಕ್ಷಾತ್ಕಾರಕ್ಕೆ ಬೆಚ್ಚುವ ವಾತಾವರಣದ ಸೂಕ್ಷ್ಮಗಳನ್ನು ದಾಖಲುಗೊಳಿಸುವ ಯಶಸ್ವೀ ಪ್ರಯತ್ನ 'ಬಂಡಾಯ' ಕಥೆಯಲ್ಲಿ ಕಾಣ ದೊರೆಯುತ್ತದೆ. 'ಎಚ್ಚೆತ್ತ ಜನರು' ಎಂಬ ಕಥೆಯಲ್ಲಿ ಚೇತೋಹಾರಿಯಾದ ವಿಡಂಬನೆ ಇದೆ. ಈ ಪುಟ್ಟ ಚೊಕ್ಕ ಸಂಪುಟವನ್ನು ಅನುವಾದಿಸುವಲ್ಲಿ ಈಶ್ವರಯ್ಯನವರು ಯಶಸ್ವಿಯಾಗಿದ್ದಾರೆ.

ವಿಶ್ವಕಥಾಕೋಶದ ಈ ಸಂಪುಟಗಳು ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿ ಕಾಣಸಿಗುವ ಕಥಾಸಾಹಿತ್ಯವನ್ನು ಪರಿಚಯಿಸುವಲ್ಲಿ ಮುಂದಾಗಿರುವುದು ನಿಜಕ್ಕೂ ಆನಂದದ ಸಂಗತಿ. ಪ್ರತಿ ಸಂಪುಟಗಳ ಆರಂಭದಲ್ಲಿ ಪ್ರಧಾನ ಸಂಪಾದಕರಾದ ನಿರಂಜನರು ತಮ್ಮ ಆಕರ್ಷಕವಾದ, ಪತ್ರಿಕೋದ್ಯಮದ ಚುರುಕು ಭಾಷೆಯಲ್ಲಿ ಬರೆದಿರುವ ಪ್ರಸ್ತಾವನೆಗಳಲ್ಲಿ ಆಯಾಯ ರಾಷ್ಟ್ರಗಳ ರಾಜಕೀಯ, ಇತಿಹಾಸ ಹಾಗೂ ಸಾಂಸ್ಕೃತಿಕ ರಂಗದ ವಿಭಿನ್ನ ಕಾಲಗಳ ಬೆಳವಣಿಗೆಯನ್ನು ಗುರುತಿಸಬಹುದಾಗಿದೆ. ಈ ಯೋಜನೆಯು ನಿಜಕ್ಕೂ ಸ್ತುತ್ಯರ್ಹವಾಗಿದೆ.

ಕಾಫ್ಕಾ ಕಥೆಗಳು : ಅನು : ಜಿ. ಎನ್. ರಂಗನಾಥರಾವ್

ಪ್ರತಿಭಾವಂತ ಸಾಹಿತಿ ಕಾಫ್ಕನ ಏಳು ಮುಖ್ಯ ಕಥೆಗಳನ್ನು ವಿಮರ್ಶಕರಾದ ಜಿ. ಎನ್. ರಂಗನಾಥರಾಯರು ಕನ್ನಡಕ್ಕೆ ತಂದಿದ್ದಾರೆ. ಕಾಫ್ಕಾನ ಪ್ರಸಿದ್ಧವಾದ ಕಥೆಯಾದ 'ರೂಪಾಂತರ' ಈ ಕೃತಿಯ ಮುಕ್ಕಾಲು ಭಾಗಕ್ಕೂ ಹೆಚ್ಚು ಪುಟಗಳನ್ನು ಆವರಿಸಿದೆ. ಕಾಫ್ಕಾನ ಗಾಢವಾದ ಜೀವನನಿಷ್ಠೆ, ದರ್ಶನ, ಪರಿಪೂರ್ಣತೆಯ ಬಗೆಗಿನ ಹಂಬಲಗಳನ್ನು 'ರೂಪಾಂತರವೂ' ಸೇರಿದಂತೆ ಇಲ್ಲಿನ ಇತರ ಕಥೆಗಳು ನಿಚ್ಚಳವಾಗಿ ಪ್ರಕಟಿಸುತ್ತವೆ. ಆತನ ಉತ್ತಮ ಕಥೆಗಳಲ್ಲಿ ಒಂದಾದ 'ತೀರ್ಪು' ಕೂಡ ಈ ಸಂಕಲನದಲ್ಲಿ ಸೇರಿರುವುದು ಸಂತೋಷದ ಸಂಗತಿಯಾಗಿದೆ.

ಈ ಕೃತಿಯ ಆರಂಭದಲ್ಲಿ ಎಸ್. ದಿವಾಕರ ಅವರು 'ಪ್ರವೇಶ' ಎಂಬ ಶೀರ್ಷಿಕೆಯ ಅಡಿಯಲ್ಲಿ ಕಾಫ್ಕಾನ ಜೀವನ ಮತ್ತು ಸಾಹಿತ್ಯದ ಬಗ್ಗೆ ತಮ್ಮ ವಿಚಾರ

ಗಳನ್ನು ಮಂಡಿಸಿದ್ದಾರೆ. ಕಾಫ್ಕಾನ ಕೃತಿಗಳ ಅಧ್ಯಯನಕ್ಕೆ ಇದು ಉಪಯುಕ್ತವಾಗಿದೆ. ಅನುವಾದದ ಬಗೆಗಿನ ರಂಗನಾಥರಾಯರ ಶ್ರದ್ಧೆ ಸ್ತುತ್ಯರ್ಹವಾಗಿದೆ. ದಿವಾಕರರು ತಮ್ಮ ಬರಹದಲ್ಲಿ ಹೇಳಿರುವಂತೆ "ಕಾಫ್ಕಾನ ಕೃತಿಗಳನ್ನು ಅನುವಾದಿಸುವುದು ಸುಲಭದ ಕೆಲಸವಲ್ಲ... ಕಾವ್ಯದಲ್ಲಿ ಹೇಗೋ ಹಾಗೆ ಅವನು ಶಬ್ದಗಳನ್ನು ಅವುಗಳ ಸಮಗ್ರಾರ್ಥದಲ್ಲಿ ಬಳಸಿರುವುದರಿಂದ, ಅದನ್ನು ಬೇರೊಂದು ಭಾಷೆಯಲ್ಲಿ ಅಷ್ಟೇ ಖಚಿತವಾಗಿ ಹಿಡಿಯುವುದೂ ಒಂದು ಸವಾಲು. ಜಿ. ಎನ್. ರಂಗನಾಥರಾವ್ ಅವರ ಇಲ್ಲಿನ ಕಥೆಗಳನ್ನು ಓದಿದರೆ ಕಾಫ್ಕಾನ ತಿರುಳನ್ನು ಗ್ರಹಿಸಬಲ್ಲ ಅವರ ಪ್ರತಿಭೆಯ ಬಗೆಗೆ ಆಶ್ಚರ್ಯವಾಗುತ್ತದೆ. ಇದು ಕನ್ನಡದ್ದೇ ಆದ ಕತೆಗಳ ಸಂಗ್ರಹವೋ ಎನ್ನುವಷ್ಟರ ಮಟ್ಟಿಗೆ ಅವರ ಅನುವಾದಗಳು ಸಹಜವಾಗಿವೆ. ಮೂಲಕ್ಕೆ ಎಲ್ಲಿಯೂ ಕುಂದಾಗದಂತೆ, ಕಾಫ್ಕಾನ ವಿಚಾರಪ್ರಣಾಲಿಯ ಜೊತೆಯಲ್ಲೆ ಸಾಗಿ, ಭಾಷೆಗಳು, ಬೇರೆ ಬೇರೆಯಾದರೂ ಕಾಫ್ಕಾ ಮತ್ತು ಅನುವಾದಕ—ಇವರಿಬ್ಬರ ಮನೋಧರ್ಮಗಳು ಒಂದೇ ಎನ್ನಿಸುವಂತೆ ಅವರು ಈ ಕೆಲಸವನ್ನು ಸಮರ್ಥವಾಗಿ ನಿರ್ವಹಿಸಿದ್ದಾರೆ". ಈಗಾಗಲೇ ಬ್ರೆಕ್ಟನ 'ಕಕೇಸಿಯನ್‌ಚಾಕ್ ಸರ್ಕಲ್' ನಾಟಕವನ್ನು ಅನುವಾದಿಸಿರುವ ರಂಗನಾಥರಾಯರು ಕಾಫ್ಕಾನ ಆಯ್ದ ಕಥೆಗಳ ಈ ಸಂಕಲನವನ್ನು ಪೊರತಂದಿರುವುದು ಸ್ವಾಗತಾರ್ಹವಾಗಿದೆ.

ಚಿತ್ತಭ್ರಮಣ : ಅನು : ವಂಶಿ

ಮಾನಸಿಕವಾಗಿ ಅಸ್ವಸ್ಥಗೊಂಡ ವ್ಯಕ್ತಿಗಳನ್ನು ಕುರಿತು ನೈಜಘಟನೆಗಳ ಆಧಾರದ ಮೇಲೆ ಆಕರ್ಷಕವಾಗಿ ಬರೆಯಲಾಗಿರುವ ಆರು ಚಿತ್ರಣಗಳು ಈ ಕೃತಿಯಲ್ಲಿವೆ. ಇವು ತೆಲುಗು ಮೂಲದಲ್ಲಿ ವೇಣುಗೋಪಾಲನ್ ಅವರಿಂದ ಬರೆಯಲ್ಪಟ್ಟಿವೆ. ಬಗ್ಗೆ ಬಗೆಯ ಮಾನಸಿಕ ವೇದನೆಗೆ ಒಳಗಾದವರನ್ನು ಕುರಿತು ಅಧ್ಯಯನ ಮಾಡಲು ಲೇಖಕರು ಅನೇಕ ತಿಂಗಳುಗಳ ಕಾಲ ಬೇರೆ ಬೇರೆಯ ಆಸ್ಪತ್ರೆಗಳು, ವೈದ್ಯರು, ರೋಗಿಗಳು, ರೋಗಿಗಳ ಸಂಬಂಧಿಕರು, ಸಮಾಜಸೇವಾಕರ್ತರು, ಸಮಾಜಶಾಸ್ತ್ರಜ್ಞರು ಮತ್ತು ಮನೋವಿಜ್ಞಾನಿಗಳನ್ನು ಸಂದರ್ಶಿಸಿದ್ದಾರೆ. ಆಯಾಯ ವ್ಯಕ್ತಿಗಳ ಹೆಸರು ಮತ್ತು ಸ್ಥಳದ ಉಲ್ಲೇಖಗಳನ್ನು ಉದ್ದೇಶಪೂರ್ವಕವಾಗಿಯೇ ಬದಲಾಯಿಸಲಾಗಿದೆ. ಹೀಗಾಗಿ ಈ ಲೇಖನಗಳು ನೇರವಾಗಿ ಸೃಜನಶೀಲ ಬರವಣಿಗೆಯೇನಲ್ಲ ; ಆದರೂ ಕೂಡ ಮಾನವ ಮನಸ್ಸು ಆಘಾತಕ್ಕೆ ಒಳಗಾದಾಗ ಉಂಟಾಗುವ ತೀವ್ರ ಪರಿಣಾಮಗಳನ್ನು ಗಮನಿಸುವ ದೃಷ್ಟಿಯಿಂದ ಈ ಎಲ್ಲ ಬರಹಗಳ ಅಧ್ಯಯನವು ಸಾಹಿತ್ಯಾಸಕ್ತರಿಗೆ ಕೂಡ ಸಾಕಷ್ಟು ಲಾಭದಾಯಕವೇ ಆಗಿದೆ. ಈ ಬದುಕಿನ ಆತಂಕದ ಕ್ಷಣಗಳನ್ನು ವೈಜ್ಞಾನಿಕ ಹಿನ್ನೆಲೆಯಿಂದ ಸೂಕ್ಷ್ಮವಾಗಿ ಗಮನಿಸಿದಲ್ಲಿ ನಾವು ಸುಲಭವಾಗಿ ಪರಿಹರಿಸಲು ಸಾಧ್ಯವೆಂಬ ಭರವಸೆಯು ಇಲ್ಲಿ ದೊರೆಯುತ್ತದೆ. ಇಷ್ಟೆಲ್ಲ ಆದ ಮೇಲೆ ಈ ಕೃತಿಯನ್ನು ಅನುವಾದಕ ವಂಶಿಯವರು ತಿರುಪತಿ ತಿಮ್ಮಪ್ಪನ ಪವಿತ್ರವಾದ

ಸನ್ನಿಧಿಗೆ ಅರ್ಪಿಸುತ್ತಾ ಆತನನ್ನು "ಎಲ್ಲರ ಚಿತ್ತಗಳನ್ನೂ ಸ್ವಾಸ್ಥ್ಯದಲ್ಲಿರಿಸಿ ನೆಮ್ಮದಿಯನ್ನು ನೆಲೆಗೊಳಿಸುವ ವಿಭು" ಎಂದು ಸ್ತುತಿಸಿ ನಿರಾಯಾಸವಾಗಿ ಕೈತೊಳೆದುಕೊಂಡಿದ್ದಾರೆ !

ಈ ವರ್ಷ ಕನ್ನಡಕ್ಕೆ ಅನುವಾದಗೊಂಡಿರುವ ಕಥಾಸಾಹಿತ್ಯದಲ್ಲಿ ವಿಶ್ವಕಥಾಕೋಶ ಯೋಜನೆಯ ಎಂಟು ಸಂಪುಟಗಳು ಮತ್ತು ಕಾಫ್ಕಾನ ಕಥೆಗಳು ಸಂಕಲನವು ಕನ್ನಡಕ್ಕೆ ಬಂದಿರುವ ಉತ್ತಮ ಕೃತಿಗಳಾಗಿವೆ.

## ಕಾದಂಬರಿ

**ಬರಗೂರು ರಾಮಚಂದ್ರಪ್ಪ, ಡಿ. ಆರ್. ನಾಗರಾಜ್**

**ಕೆ. ರಮಾನಂದ, ಎನ್. ವಿ. ವಿಮಲ**

ಈ ವರ್ಷದ ಸಾಹಿತ್ಯ ವಾರ್ಷಿಕದ ನಮ್ಮ ಸಮೀಕ್ಷೆಗೆ ಬಂದಿರುವ ಕಾದಂಬರಿಗಳು ಸುಮಾರು ಎಪ್ಪತ್ತು. ಈ ವಿಭಾಗದ ಸಮೀಕ್ಷೆ ಹಿಂದಿನ ವರ್ಷಗಳಂತೆಯೇ ಮುಂದುವರೆದಿದೆ. ಈ ಕಾರಣದಿಂದ ಈ ವಿಭಾಗದ ಬರವಣಿಗೆ ಒಂದು ಏಕರೂಪತೆಯನ್ನು ಪಡೆಯಲು ಸಾಧ್ಯವಾಗಿಲ್ಲವೆಂಬುದನ್ನು ನಾವು ಗಮನಿಸಿದ್ದೇವೆ.

ಈ ವರ್ಷ ಮೊದಲ ಮುದ್ರಣವಾಗಿ ಹೊರ ಬಂದಿರುವ ಕಾದಂಬರಿಗಳಲ್ಲಿ ಐತಿಹಾಸಿಕ, ಪೌರಾಣಿಕ ಪತ್ತೇದಾರಿ ಕಾದಂಬರಿಗಳು ಎಂಟು ; ಮಹಿಳೆಯರು ಬರೆದ ಕಾದಂಬರಿಗಳು ಹದಿಮೂರು ; ಅನುವಾದಿತ ಕಾದಂಬರಿಗಳು ಒಂಭತ್ತು: ಇನ್ನುಳಿದವು ಸಾಮಾಜಿಕ ಕಾದಂಬರಿಗಳು. ಈ ವರ್ಷ ಪ್ರಕಟವಾದ ಕಾದಂಬರಿಗಳಲ್ಲಿ ಅತ್ಯುತ್ತಮವೆನ್ನಬಹುದಾದ ಕೃತಿ 'ವೈಶಾಖ' ಎಂದು ಹೇಳಬಹುದು.*

### ಕಹಳೆ ಬಂಡೆ : ಟಿ. ಕೆ. ರಾಮರಾವ್

ಒಂದು ಪತ್ತೇದಾರಿ ಕಾದಂಬರಿ. ಪತ್ತೇದಾರಿ ಕತೆ-ಕಾದಂಬರಿಗಳು ಸಹ ಬದುಕಿನ ಗಾಢ ವಿವರಗಳಗೊಂಡು ಸಹಜವಾಗುವ ಶಕ್ತಿ ಪಡೆಯಬಹುದೆಂಬ ನಂಬಿಕೆ ಮತ್ತು ಪ್ರಯೋಗಗಳ ಅಭಾವದಲ್ಲಿ ಕಳಪೆ ಕೃತಿಗಳು ಹುಟ್ಟಿಕೊಳ್ಳುತ್ತವೆ. ತೆಳುವಾದ ಕಥಾ ಹಂದರದಲ್ಲಿ ಕಾಲ ತಳ್ಳುವ ಕೃತಿ ನಿರ್ಮಾಣಕ್ಕೆ 'ಕಹಳೆ ಬಂಡೆ'ಯೂ ಹೊರತಾಗಿಲ್ಲ. ಸ್ಮಿತಾ ಎಂಬ ಹೆಸರಿನ 'ಸ್ವಾಗತಗಾರ್ತಿ' ಮತ್ತು ಸುನಿಲ್‌ರ ಪರಿಚಯ, ಸುನಿಲ್‌ಕೊಲೆ, ಸಂದೀಪ್ ಎಂಬ ಸಿ.ಐ.ಡಿ.ಯ ಪ್ರಯತ್ನದಿಂದ ಪತ್ತೆ, ಇದಕ್ಕೆ ಸಹಾಯ ಮಾಡಿದ ಸ್ಮಿತಾಳೊಂದಿಗೆ ಸಿ.ಐ.ಡಿಯ ಪ್ರೇಮ-ಇತ್ಯಾದಿಗಳಿಂದ ತುಂಬಿದ ಈ ಕಾದಂಬರಿ ಸಾಮಾನ್ಯ ಓದುಗರ 'ಹಸಿವನ್ನು' ಹಿಂಗಿಸಲು ಹೆಣೆದ ಸಣ್ಣ ಪ್ರಯತ್ನ. ಕೊಲೆ ಮತ್ತು ಮುಖ್ಯ ಘಟನೆಗಳು 'ಕಹಳೆ ಬಂಡೆ' ಎಂಬ ಸ್ಥಳದಲ್ಲಿ ನಡೆಯುವುದರಿಂದ ಕಾದಂಬರಿಗೆ ಅದೇ ಹೆಸರು.

---

*ಸಂಪಾದಕರು

ಪಶ್ಚಿಮದ ಬೆಟ್ಟ : ಟಿ. ಕೆ. ರಾಮರಾವ್

ಲೇಖಕರ ಇನ್ನೊಂದು ಮಾದರಿ ಬರವಣಿಗೆಗೆ ಉದಾಹರಣೆ. ಘಟನೆಗಳ ಸರಪಳಿ ನಿರ್ಮಿಸಿ ಸಿನೀಮಿಯಾಗೊಳಿಸುವ ರಾಮರಾಯರ ವಿಧಾನ ಇದರಲ್ಲಿ ಹಾಸು ಹೊಕ್ಕಾಗಿದೆ. ಇಡೀ ಕಾದಂಬರಿ ಬೈರನೆಂಬ ಹಳ್ಳಿಗನ ಸುತ್ತ ಬೆಟ್ಟದಂತೆ ಬೆಳೆಯುತ್ತದೆ.

ಬೈರ, ಜಾರ್ಜ್‌ಮಿಲ್ಲರ್ ಎಂಬ ವಿದೇಶಿಯನ ಕಣ್ಣಿಗೆ ಬೀಳುತ್ತಾನೆ. ಬೈರನ ಪ್ರಾಮಾಣಿಕತೆಗೆ ಮೆಚ್ಚಿದ ಮಿಲ್ಲರ್ ವಿದೇಶಕ್ಕೆ ಹೋದ ಮೇಲೆ ಈತನನ್ನು ಅಲ್ಲಿಗೆ ಕರೆಸಿಕೊಳ್ಳುತ್ತಾನೆ. ಆದರೆ ಕಾದಂಬರಿಕಾರರ 'ತೀರ್ಮಾನ'ದಂತೆ ಬೈರನ ಆಗಮನಕ್ಕೆ ಮುಂಚೆಯೇ ಮಿಲ್ಲರ್ ದಂಪತಿಗಳು ಅಪಘಾತದಲ್ಲಿ ಸಾಯುತ್ತಾರೆ. ವಿಮಾನ ನಿಲ್ದಾಣದಲ್ಲಿ ಇಳಿದು ತಬ್ಬಿಬ್ಬಾಗಿ ತಹತಹಿಸುವ ಬೈರನಿಗೆ ಸಹಾಯಕರಾಗುವ ಉದಾರಿಗಳನ್ನೂ ಕಾದಂಬರಿಕಾರರು ಸೃಷ್ಟಿಸಿದ್ದಾರೆ. ನೀಗ್ರೊ ದಂಪತಿಗಳ ಔದಾರ್ಯದಿಂದ ಬೈರ-ಬೈರನ್ ಆಗಿ ಅಲ್ಲಿಯೇ ನೆಲಸುತ್ತಾನೆ. ಸಾಲದೆಂಬಂತೆ ನೀಗ್ರೋನ ಪತ್ನಿಯ ಜೊತೆ ಪ್ರೇಮ ಪ್ರಕರಣವೂ ಇದೆ. ತನ್ನ 'ವಿದೇಶೀ ವೈಭವ'ವನ್ನು ನೋಡಲು ತನ್ನೂರಿನ ತೇಜನನ್ನೂ ಕರೆಸಿಕೊಂಡ ಬೈರನ್ 'ಕೋಬ್ರಾ' ಎಂಬ ಹೆಸರಿನಲ್ಲಿ ಕೊಲೆಯನ್ನೂ ಮಾಡಿ, ಕಡೆಗೆ ಆತ್ಮಹತ್ಯೆಯಲ್ಲಿ ಕತೆಗೊಂದು ಅಂತ್ಯ ತರುತ್ತಾನೆ !

—ಹೀಗೆ ಕುತೂಹಲದ ಮುಸುಕಿನಲ್ಲಿ ಸಾಹಸ, ಪ್ರೇಮ, ಘರ್ಷಣೆ ಮುಂತಾದ ಅಂಶಗಳನ್ನು ಅಡಗಿಸಿಕೊಂಡು ಓದುಗರನ್ನು 'ಸೆರೆ ಹಿಡಿಯಲು' ಪ್ರಯತ್ನಿಸುವ ಕಾದಂಬರಿ ಅಷ್ಟರಲ್ಲೇ ಸಂತೃಪ್ತಿ ಪಡೆಯುತ್ತದೆ. ವಿದೇಶೀ ವಿವರಗಳು ಉಡಾಫೆಯಾಗದೆ ಸಹಜವಾಗಿ ಚಿತ್ರಿತವಾಗಿರುವುದು ಮೆಚ್ಚುಗೆಯ ಅಂಶ.

ಕಡ: ಸದಾನಂದ ಪಾಟೀಲ

ಈ ಕಾದಂಬರಿಯು ನಮ್ಮ ಪರಿಸರದಲ್ಲಿ ರೂಪುಗೊಳ್ಳುವ ಏಳು ಬೀಳುಗಳನ್ನು ಘಟನಾವಳಿಗಳ ಮೂಲಕ ದಾಖಲಿಸುವ ಒಂದು ಪ್ರಾಮಾಣಿಕ ಪ್ರಯತ್ನ. ವ್ಯಕ್ತಿ ಸಂಬಂಧಗಳು, ಕೌಟುಂಬಿಕ ನೆಲೆಯಲ್ಲಿ ಹುಟ್ಟುವ ವಿಷ ಪ್ರಸಂಗಗಳು ಮತ್ತು ಇವೆಲ್ಲದರಿಂದ ಉಂಟಾಗುವ ತಳಮಳಗಳ ಮುನ್ನೆಲೆಯಲ್ಲಿ ಇಲ್ಲಿನ ಪಾತ್ರಗಳು ಬೆಳೆಯುತ್ತದೆ. ಬಸವರಾಜನ ನೈತಿಕ ನೆಲೆ ಮತ್ತು ಕಮಲಳ ಮಾನಸಿಕ ಯಾತನೆ—ಕಾದಂಬರಿಕಾರರ ಶಕ್ತಿಗೆ ಸಾಕ್ಷಿ, ಆದರೆ "ಕಾದಂಬರಿ ಘಟನೆಗಳ ಸರಮಾಲೆ" ಎಂದು ನಂಬಿರುವುದರಿಂದಲೋ ಏನೊ ಸಾಕಷ್ಟು ಘಟನೆಗಳಿಂದ ತುಂಬಿದ ಕಾದಂಬರಿ ಸುಸಂಬದ್ಧ ಜೀವನ ದರ್ಶನಕ್ಕೆ ಹೊರತಾಗುತ್ತದೆ. ಇಲ್ಲಿ ಬರುವ ರಾಜ, ಸಾವಿತ್ರಿ, ಸುಶೀಲ, ಬಸವರಾಜ, ಈತನ ಮಾವ, ಕಮಲ–ಹೀಗೆ ಅನೇಕ ಪಾತ್ರಗಳಿಗೆ ತಂತಮ್ಮದೇ 'ಕತೆ' ಇರುವುದರಿಂದ ಕಾದಂಬರಿ ಮತ್ತಷ್ಟು ವಿಸ್ತೃತಗೊಳ್ಳಬೇಕಿತ್ತೇನೊ ಎನ್ನಿಸುತ್ತದೆ. ಗ್ರಾಮೀಣ ಪರಿಸರದ ಮೂಢ ನಂಬಿಕೆಗಳ ಬಗೆಗಿನ ವಿಡಂಬನೆಯ ಮೊನಚು, ಒಳ್ಳೆಯ ಕೃತಿ ಕೊಡುವ ಪ್ರಯತ್ನ, ಪಾತ್ರಗಳನ್ನು ಕಡೆಯುವ ಉತ್ಸಾಹ—ಇತ್ಯಾದಿಗಳಿಂದ ಪರವಾಗಿಲ್ಲ ಎನ್ನಬಹುದಾದ ಕಾದಂಬರಿಯಾಗಿದೆ.

ತಿರುವು : ಸುದರ್ಶನ ದೇಸಾಯಿ

ಮಾನಸಿಕ ರೋಗಿಗಳ ತಜ್ಞ ವೈದ್ಯ ಹೇಮಂತನನ್ನು ಕೇಂದ್ರವಾಗಿಟ್ಟುಕೊಂಡು ತಿರುಗುವ ಕಾದಂಬರಿ. ಈ ತಿರುಗಾಟದಲ್ಲೇ ಒಂದೆರಡು ಮುಖ್ಯ ತಿರುವುಗಳು ಬಂದು ನಾಟಕೀಯ ನಿರೂಪಣೆಗೆ ನೆಲೆಯೊದಗಿಸಿವೆ. ಮನೋರೋಗಿಗಳನ್ನು ವಾಸಿಮಾಡುವ ವಿಧಾನವೂ ಇದೇ ಮಾದರಿಯದು. ತಾನು ಸಾಯದಿದ್ದರೂ ಸತ್ತಂತೆ ನಟಿಸಿ ರೋಗಿಯೊಬ್ಬನಿಗೆ 'ಜ್ಞಾನೋದಯ' ಮಾಡುವ ಈ ನಾಯಕ ತನ್ನಿಚ್ಛೆಯ ಹೆಣ್ಣು ಸಿಕ್ಕದಿದ್ದಾಗ ಹುಚ್ಚನಾಗುತ್ತಾನೆ. ತಾನು ಛೇಡಿಸಿದ್ದರಿಂದಲೇ ಹುಚ್ಚಿಯಾದ ಹೆಣ್ಣೊಬ್ಬಳು ತನ್ನ ರೋಗಿಯಾಗಿ ಬಂದಾಗ ಓದುಗರಿಗೆ ಅದೆಂಥ ತಿರುವು ! ಆಮೇಲೆ ವೈದ್ಯ ತನ್ನ ಮೊದಲ ಪ್ರೇಯಸಿಯನ್ನು ಬಿಟ್ಟು ಈಕೆಯನ್ನೇ ವಿವಾಹವಾಗಲು ಇಚ್ಛಿಸಿದಾಗ (ಹುಚ್ಚು ಹೋದ ಮೇಲೆ) ಮತ್ತೊಂದು ತಿರುವು ! ಆ ಹೆಣ್ಣು ಈತನನ್ನು ನಿರಾಕರಿಸಿ ಈತನೇ ಹುಚ್ಚನಾದಾಗ ತೀವ್ರ ತಿರುವು ! ಕಾದಂಬರಿಯ ಒಂದು ಉತ್ತಮ ಅಂಶವೆಂದರೆ ಪಾತ್ರಗಳ ಮನಸ್ಸಿಗಿಳಿಯುವ ಪ್ರಾಮಾಣಿಕ ಪ್ರಯತ್ನ. ಬಿಡಿ ಪ್ರಸಂಗಗಳಾಗಿ ಮೆಚ್ಚುಗೆ ಗಳಿಸುವ ಘಟನೆಗಳಿಗೆ ಗಟ್ಟಿ ದೃಷ್ಟಿಕೋನದ ಹಿನ್ನೆಲೆಯಿದ್ದಿದ್ದರೆ ಈ ಕೃತಿಗೆ ವಿಶಿಷ್ಟತೆ ಒದಗುತ್ತಿತ್ತು.

ಅನಿವಾರ್ಯ : ಸು. ರುದ್ರಮೂರ್ತಿ ಶಾಸ್ತ್ರಿ

ಬದುಕಿನಲ್ಲಿ ಒಪ್ಪಿಕೊಳ್ಳಬೇಕಾದ ಅನಿವಾರ್ಯ ವಾಸ್ತವವನ್ನು ಅನಾವರಣಗೊಳಿಸಬಯಸುವ ಪುಟ್ಟಕೃತಿ. ಈ ಆಶಯ ಅಸಾಮಾನ್ಯವಾದದ್ದು. ಆದರೆ ಚಿಕ್ಕ ಚೌಕಟ್ಟಿನಲ್ಲಿ, ಸಾಮಾನ್ಯ ಘಟನೆಗಳಲ್ಲಿ, ಇದನ್ನು ಪ್ರಕಟಿಸುವ ಪ್ರಯತ್ನದಿಂದಾಗಿ ಕೃತಿಗೆ ಮಿತಿಯೇರ್ಪಟ್ಟಿದೆ. ಪ್ರದೀಪ ಎಂಬ ಪಾತ್ರದ ಆದರ್ಶಮಯ ಕತೆಯಾಗಿದೆ. ದಿವಾಕರ ಎಂಬ ಪಾತ್ರ ಮಾಮೂಲಿ ವಿಲನ್ ಶೈಲಿಯಲ್ಲಿದೆ. ಬಹುಶಃ ಈ ಕತೆಗೆ ಮತ್ತಷ್ಟು ಪುಟಗಳ ಅಗತ್ಯವಿತ್ತೆನ್ನಿಸುತ್ತದೆ. ಪ್ರದೀಪನ ಒಳತೋಟಿ ಚಿತ್ರಣ ಚೆನ್ನಾಗಿದೆ.

ಬಾಲಂಗೋಚಿ : ಕಿಕ್ಕೇರಿ ನಾರಾಯಣ

ಒಂದು ಕಿರು ಕಾದಂಬರಿ. ಬಾಲ್ಯದ ದಟ್ಟ ಅನುಭವದ ಆಧಾರದಲ್ಲಿ ನಿಂತ ಈ ಕೃತಿಗೆ ಯು. ಆರ್. ಅನಂತಮೂರ್ತಿಯವರ ಮುನ್ನುಡಿಯಿದೆ. "ಮಾರ್ಕ್ಸ್‌ವಾದದ ಪ್ರಭಾವ ಕನ್ನಡದ ಕೆಲವು ಲೇಖಕರನ್ನು ತಾವು ಸರ್ವಜ್ಞರು ಎಂದು ಸೊಕ್ಕುವಂತೆ ಮಾಡಿದೆ" ಎಂಬ ಪೂರ್ವಾಗ್ರಹದ ಹೇಳಿಕೆಗಳಿಂದ ಹಿಡಿದು ಬಂಡಾಯ ಸಾಹಿತಿಗಳ ಬಗ್ಗೆ ಸ್ವಕಲ್ಪಿತ ಅಭಿಪ್ರಾಯ ಮಂಡಿಸುವವರೆಗೂ ಹಬ್ಬಿರುವ ಮುನ್ನುಡಿ 'ಬಾಲಂಗೋಚಿ'ಯ ಬಗ್ಗೆ ಮಾತ್ರ ಕೆಲವು ನಿಖರ ಮಾತುಗಳನ್ನಾಡಿದೆ ; ವಿವಿಧ ವ್ಯಕ್ತಿ ಸಂಬಂಧಗಳು ನಮ್ಮ ಸಾಮಾಜಿಕ-ಆರ್ಥಿಕ ಹಿನ್ನೆಲೆಯಲ್ಲಿ ಕಂಡುಕೊಳ್ಳುವ

ನಿಜ ನೆಲೆಗಳ ಶೋಧವಿರುವ ಈ ಕೃತಿ ಗಂಭೀರ ಕಾಳಜಿಯಿಂದ ಕೂಡಿದೆ. ಕತೆಗೆ ಸ್ವಲ್ಪ ದೊಡ್ಡದಾದ, ಕಾದಂಬರಿಯೆನ್ನಿಸಿಕೊಳ್ಳಲು ತೀರಾ ಸಾಲದಾದ ಸ್ವರೂಪವುಳ್ಳ 'ಬಾಲಂಗೋಚಿ'ಯ ಪರಿಸರಾತ್ಮಕ ವಿವರಗಳು ಕೇಂದ್ರವೊಂದಕ್ಕೆ ದುಡಿಯುವ ಉಸಿರಾಗಿ ಹೊಮ್ಮುವುದಿಲ್ಲ ; ಬಿಡಿ ಬಿಡಿಯಾಗಿ ಅನನ್ಯವಾಗಿವೆ. ಕೃತಿಯ ಮೊದ ಮೊದಲು ಕಾಣುವ ಈ ಕೊರತೆಯನ್ನು ಕಡೆ ಕಡೆಗೆ ನೀಗಲು ಯತ್ನಿಸಲಾಗಿದೆ.

ರಣಹದ್ದು : ಮಾಯಾರಾಜ್

ಒಂದು ಪತ್ತೇದಾರಿ ಕಾದಂಬರಿ. ಕಳ್ಳರಿಂದ ದರೋಡೆ ನಡೆದು ಅವರನ್ನು ಹಿಡಿಯಲು ಹೋದವರಲ್ಲಿ ಸಬ್‌ಇನ್ಸ್‌ಪೆಕ್ಟರ್ ಮಾತ್ರ ಬದುಕುತ್ತಾನೆ—ಅದೂ ಕಾಲಿಗೆ ಗುಂಡೇಟು ತಗುಲಿ. ಕಳ್ಳರೆಲ್ಲ ಸತ್ತು, ದರೋಡೆ ಮಾಡಿದ ಲಕ್ಷಾಂತರ ಹಣ ಹೊತ್ತು ಬರುತ್ತಿದ್ದ ಸಬ್ ಇನ್ಸ್‌ಪೆಕ್ಟರ್ ರಾಜನೆಂಬ ಕುಖ್ಯಾತ ಕಳ್ಳನಿಂದ ಮೋಸ ಹೋಗುತ್ತಾನೆ. ಮತ್ತೆ ಕಳ್ಳರಾಜನ ಹುಡುಕಾಟ. ರಾಜನ ವಿವಿಧ ವೇಷಗಳ ಸಾಹಸ. ಜೊತೆಗೆ ಅವನಿಗೊಬ್ಬ ಪ್ರೇಯಸಿ—ಲಲಿತ. ಪೋಲೀಸರ ಕಣ್ತಪ್ಪಿಸಿ ಬಹಳ ಕಾಲ ಮಣ್ಣು ಮುಕ್ಕಿಸಿದರೂ ಕಡೆಗೆ ಕೈಗೆ ಕೋಳ ಬೀಳಲೆಬೇಕಲ್ಲ. ವಾಸ್ತವದಲ್ಲಿ ಹೇಗೇ ಇದ್ದರೂ ಕತೆಗಳಲ್ಲಿ ಪೋಲೀಸರು ಅತ್ಯಂತ ಕ್ರಿಯಾಶೀಲರೂ, ಜಯಶಾಲಿಗಳೂ ಆಗಲೇಬೇಕಲ್ಲ? ಸರಿ, ರಾಜ ಗುಂಡಿಗೆ ಬಲಿ. ಆತನ ಪ್ರೇಯಸಿಯನ್ನು ಸಾಂತ್ವನ ಗೊಳಿಸುವ ರಾಜನ ಗೆಳೆಯ ಚಂದ್ರುವೇ ಆಕೆಗೆ ಆಸರೆ. ಇಷ್ಟಕ್ಕೆ ಈ ಕೃತಿಸೆರೆಯಿಂದ ನಮಗೆ ಬಿಡುಗಡೆ.

ಹೀಗೊಂದು ಪ್ರೇಮಕತೆ : ಬಿ. ಆರ್. ಲಕ್ಷ್ಮಣರಾವ್

ಹೆಸರೇ ಹೇಳುವಂತೆ ಪ್ರೇಮಕತೆ. ಮುಚ್ಚುಮರೆಯಿಲ್ಲದ ಒಂದು ಸಾಮಾನ್ಯ ಶುದ್ಧ ಪ್ರೇಮಕತೆ. ರವಿ ಮತ್ತು ಗ್ರೇಸಿಯರ ಪ್ರೇಮ ವಿವಾಹವಾಗಿ ಕೊನೆಗೊಳ್ಳು ವಾಗ ಎದುರಾಗುವ ಮಾಮೂಲಿ ಅಡೆತಡೆಗಳು ಮತ್ತು ಅವನ್ನು ಎದುರಿಸುವ ಗಟ್ಟಿ ಪ್ರೇಮಿಗಳ ಈ ಕಾದಂಬರಿಯ ವಿಶೇಷವೆಂದರೆ—ಲವಲವಿಕೆಯ ನಿರೂಪಣೆ ಮತ್ತು ಪಾತ್ರಪೋಷಣೆಯಲ್ಲಿ ಕಾಣುವ ಆಸ್ಥೆ. ರವಿಯ ಮನಸ್ಸು ಮತ್ತು ಪ್ರಜ್ಞೆಗಳ ಮೂಲಕ ಬಿಚ್ಚಿಕೊಳ್ಳುವ ಪರಿಸರ ಹಾಗೂ ಅವನ ಬದುಕಿಗೆ ಸಂಬಂಧಿಸಿದಂತೆ ನಡೆಯುವ ಪ್ರತಿ ಘಟನೆಯನ್ನೂ ಕಾದಂಬರಿಕಾರರು ಸಂಯಮದಿಂದ, ಆದರೆ ಭಾವ ತುಂಬಿದ ಭಾಷೆಯಲ್ಲಿ ಹಿಡಿದಿಡುತ್ತಾರೆ. ಈ ಗುಣವಿಲ್ಲದಿದ್ದರೆ 'ಹೀಗೊಂದು ಪ್ರೇಮಕತೆ' ಹಾಗೇ ರಾಗ ಎಳೆಯುವ ಕೃತಿಯಾಗುತ್ತಿತ್ತು. ನಿರೂಪಣಾ ವಿಧಾನದ ಜೊತೆಗೆ ಪ್ರೇಮ ಪ್ರಕರಣದ ಸ್ವರೂಪದಿಂದ ಲಭ್ಯವಾದ ಸಾಮಾಜಿಕತೆಯೂ ಕೃತಿಯ ಮೌಲ್ಯಕ್ಕೆ ನೆರವಾಗಿದೆ. ಕಾದಂಬರಿಯ ಕಟ್ಟಕಡೆಯಲ್ಲಿ ಬರುವ 'ಯುದ್ಧ ಮುಗಿ ದಿಲ್ಲ...' ಎಂಬ ಮಾತು ಪ್ರೇಮ ಬದುಕಿನ ನಿರಂತರ ಹೋರಾಟವನ್ನು ಸೂಚಿಸಿ ಒಟ್ಟಂದಕ್ಕೆ ಒತ್ತಾಸೆ ನೀಡಿದೆ. ತೀರಾ ಸಾಮಾನ್ಯವಾದ ವಸ್ತುವನ್ನೂ ಓದುವಂತೆ

ಮಾಡಿರುವ ಈ ಅಂಶಗಳು ಕೃತಿಯ 'ಮರ್ಯಾದೆ'ಯನ್ನು ಉಳಿಸಿವೆ. ಇದನ್ನು ಮೀರಿದ ಮಹತ್ವ ಕೃತಿಗಿಲ್ಲ. ಕೃತಿಕಾರರಿಗೂ ಅಂಥ ಮಹತ್ವಾಕಾಂಕ್ಷೆ ಇರುವಂತೆ ಕಾಣುವುದಿಲ್ಲ.

ಒಡಲಾಳ : ದೇವನೂರ ಮಹಾದೇವ

ಒಂದು ವಿಶಿಷ್ಟ ಕಾದಂಬರಿ. ವಿಶಿಷ್ಟತೆ ವಸ್ತು ಮತ್ತು ಶೈಲಿ ಎರಡಕ್ಕೂ ಸಂಬಂಧಿಸಿದ್ದು. ದಮನಕಾರೀ ವ್ಯವಸ್ಥೆಯ ಒಂದು ಮುಖವನ್ನು-ಅಬ್ಬರವಿಲ್ಲದೆ—ಅನುಭವವಾಗಿ ದಕ್ಕುವಂತೆ ಮಾಡುವ ಬರವಣಿಗೆ, ದೇವನೂರ ಮಹಾದೇವರ ಇತರೆ ಕತೆಗಳಂತೆ ಇಲ್ಲಿಯೂ ದಟ್ಟವಾಗಿದೆ. ಕೇಂದ್ರ ಪಾತ್ರವಾದ ಸಾಕವ್ವನ ಒಡಲಾಳದಲ್ಲಿ ಹತ್ತುವ ಉರಿ ವಿಷಾದ ಉಕ್ಕಿಸುವ ರೀತಿಯಲ್ಲಿ ನಮ್ಮನ್ನು ತಟ್ಟುತ್ತದೆ. ಕಳೆದು ಹೋದ ಹುಂಜವನ್ನು ಹುಡುಕುವ ಕ್ರಿಯೆಯನ್ನು ಕೇಂದ್ರವಾಗಿಟ್ಟುಕೊಂಡು ಒಟ್ಟಾರೆ ಪರಿಸರವನ್ನೂ ಕಟ್ಟಿಕೊಡುವ ಕುಸುರೀ ಕೆಲಸ ಕೃತಿಯ ಒಟ್ಟಂದಕ್ಕೆ ಪೂರಕವಾಗಿದೆ. ಸಾಕವ್ವನ ಕುಟುಂಬಕ್ಕೆ ಸಂಬಂಧಿಸಿದ ಚಿತ್ರ ಸಂಕ್ಷಿಪ್ತವಾಗಿದ್ದೂ ಶಕ್ತವಾಗಿದೆ. ನಿರೂಪಣೆಯ ರಭಸದಲ್ಲಿ ತಲೆಹಾಕುವ ಸಣ್ಣ ಸಣ್ಣ ವಿವರಗಳು ಬೇಗ ತಲೆಮರೆಸಿ ಕೊಂಡಂತೆ ಅನ್ನಿಸಿದರೆ ಅದಕ್ಕೆ ಇಡೀ ಕೃತಿಯ ಸಂಕ್ಷಿಪ್ತತೆಯೂ ಕಾರಣ. ಕಡಲೇಕಾಯಿ ಕಳ್ಳನನ್ನು ಹುಡುಕುವ ಪೋಲೀಸನ 'ಸಾಹಸ' ಚಿತ್ರಣ ವಿಡಂಬನೆಯ ಮೊನಚಿನಿಂದ ಕೂಡಿದ್ದರೆ ಪೋಲೀಸ್ ಇನ್ಸ್‌ಪೆಕ್ಟರ ದರ್ಪ ವ್ಯವಸ್ಥೆಯ ದಮನಕಾರೀ ವರ್ತನೆಗೆ ಹಿಡಿದ ಕನ್ನಡಿಯಾಗಿದೆ. ಸಾಕವ್ವನಿಗೆ ಅಗಾಧವಾದದ್ದು, ಪೋಲೀಸ್ ಇನ್ಸ್‌ಪೆಕ್ಟರ್ ಮತ್ತು ಊರಿನ ದೊಡ್ಡ ಕುಳಕ್ಕೆ ಅತಿ ಸಾಮಾನ್ಯ ಹಾಗೂ ನಿರ್ಲಕ್ಷ್ಯದ ಸಂಗತಿ ಯಾದದ್ದು ಸಮಕಾಲೀನ ಸಂದರ್ಭದ ವ್ಯಂಗ್ಯವೂ ಆಗಿದೆ. ನಿರೂಪಣೆಯ ಭಾಷೆ ಯಲ್ಲಿ ಬರುವ ಆಡುಮಾತು ಕೃತಿಗೆ ಗುಣವಾಗಿದ್ದರೂ ಅದರ ನಡುವೆಯೇ ಇಣುಕುವ ಮಧ್ಯಮವರ್ಗದ ಪದಗಳು ದೇವನೂರರ ಭಾಷಾ ಬಳಕೆಯನ್ನು ಕುತೂಹಲದಿಂದ ಕಾಯುವಂತೆ ಮಾಡುತ್ತವೆ. 'ಹೆಂಡತಿ' ಎಂಬುದು 'ಹೆಡ್ತಿ'ಯಾದರೂ 'ಸಪೋರ್ಟು' 'ಸಪೋಲ್ಟು' ಆಗುವುದಿಲ್ಲ, ಮಧ್ಯಮವರ್ಗಕ್ಕೇರಲ್ಪಟ್ಟ ಲೇಖಕನ ಕೆಳವರ್ಗದ ಆಡುಮಾತು ನಿರೂಪಣೆಯಲ್ಲಿ ಬಂದಾಗ ಅದು ಅಳವಡಿಸಿಕೊಂಡ 'ಕಥಾತಂತ್ರ' ಎಂದೇ ಕರೆಯಬೇಕಲ್ಲವೆ?

ವೈಶಾಖ : ಚದುರಂಗ

ಇತ್ತೀಚಿನ ಒಂದು ಮಹತ್ವದ ಕಾದಂಬರಿ ಎಂಬ ಬಗ್ಗೆ ಅನುಮಾನವಿಲ್ಲ. ಇದರ ಕಥಾ ಹಂದರವೇ ವ್ಯಾಪಕವಾದದ್ದು. ಇಲ್ಲಿ ಬರುವ ಅಸಂಖ್ಯಾತವೆನ್ನುವಷ್ಟು ಪಾತ್ರ ಗಳು ತಮ್ಮ ಪ್ರಾದೇಶಿಕ ಹಿನ್ನೆಲೆಯಲ್ಲೇ ಮನುಷ್ಯಸ್ವಭಾವದ ವಿವಿಧ ನೆಲೆಗಳನ್ನು ದಾಖಲಿಸುತ್ತವೆ. ಪ್ರಧಾನವಾಗಿ ಕಾಣುವ ಲಕ್ಕ ಮತ್ತು ರುಕ್ಮಿಣಿಯರು ನಮ್ಮ ಸಮಾಜದಲ್ಲಿ ತುಳಿತಕ್ಕೊಳಗಾದ ಎರಡು ಸ್ತರದ ಸಂಕೇತಗಳಂತೆ ಕಾಣುತ್ತಾರೆ. ಹೀಗಾಗಿ ಈ ಕೃತಿ ಕೇವಲ ಗ್ರಾಮೀಣ ಪ್ರಾದೇಶಿಕತೆಯ ಸಮೃದ್ಧ ವಿವರಗಳಲ್ಲಿ ಮಾತ್ರ ತೃಪ್ತವಾಗದೆ ಸಾಮಾಜಿಕ ಅರಿವಿನ ಆಯಾಮವನ್ನೂ ಪ್ರಕಟಿಸುತ್ತದೆ.

ಹೆಣ್ಣು ಯಾವ ಜಾತಿಯಲ್ಲಿ ಹುಟ್ಟಿದರೂ-ಇಂಡಿಯಾದ ಸಂದರ್ಭದಲ್ಲಿ ದಲಿತಳೇ ಎಂಬ ಪ್ರಸಿದ್ಧ ಅಭಿಪ್ರಾಯವಿದೆ. ಆಕೆಯ ಶೃಂಖಲಿತ ಸ್ಥಿತಿಯನ್ನು ಕಂಡಾಗ ಈ ಅಭಿಪ್ರಾಯದ ತಥ್ಯತೆ ಅರಿವಾಗುತ್ತದೆ. 'ವೈಶಾಖ'ದ ರುಕ್ಮಿಣಿಯ ಆಸೆ ಆಕಾಂಕ್ಷೆಗಳು, ತುಮುಲಗಳು, ಎದುರಿಸುವ ಸಮಸ್ಯೆಗಳು, ನಮ್ಮ ನೆಲದ ಹೆಣ್ಣೊಬ್ಬಳ ಸ್ಥಿತಿ-ಗತಿಗಳ ಗಟ್ಟಿ ಚಿತ್ರಣವಾಗಿವೆ. "ಅಟ್ಟಿಲಿ ಹೆಣ್ಣಾ ಹುಟ್ಟಿದ್ರೆ ಗೋಳುಗರೀತಾರೆ ; ಅದೇ ಹೆಣ್ಣು ಬೆಳೆದು ದೊಡ್ಡವಳಾದ್ರೆ ಊರಿನ ಗಂಡಸ್ರೆಲ್ಲ ಮುದ್ದಾಡ್ತಾರೆ" ಎಂಬ ಬುಂಡಮ್ಮನ ಮಾತು ಯಥಾರ್ಥವಾದುದು. ರುಕ್ಮಿಣಿಯ ಕಾಮ ತನ್ನ ಮಾವನ ಬಲಾತ್ಕಾರದಿಂದ ಪ್ರೇರಿತವಾಗಿ, ಕಡೆಗೆ ಆಕೆಯೇ ಹೊಲೆಯರ ಲಕ್ಕನನ್ನು ಒತ್ತಾಯಿಸಿ ಒಂದಾಗುವ ಘಟ್ಟ ಮುಟ್ಟಿ ಆಕೆಯಲ್ಲಿ ಮೂಡುವ ಗರ್ಭದೊಂದಿಗೇ ಹುಟ್ಟುವ ದ್ವಂದ್ವ ಅನನ್ಯವಾಗಿದೆ. ಲಕ್ಕನ ವ್ಯಕ್ತಿತ್ವದಲ್ಲೂ ಜೀವನದ ಪರಿಮಿತಗಳು, ಸಂದಿಗ್ಧಗಳು, ಅಸ್ಪಷ್ಟ ಸ್ಥಿತಿಗಳು ಕಾಡಿಸುತ್ತವೆ. ಲಕ್ಕ ಈ ಶ್ರೇಣೀಕೃತ ಸಮಾಜದ ನೋವಿನಲ್ಲಿ ತಳ ಮಳಿಸುವ ವ್ಯಕ್ತಿಯಾಗಿದ್ದಾನೆ.

'ವೈಶಾಖ'ದ ಪಾತ್ರವೈವಿಧ್ಯ ಆಸಕ್ತಿದಾಯಕವಾದದ್ದು. ಸ್ತ್ರೀಪಾತ್ರಗಳಲ್ಲಿ ವಿಧವೆಯರು, ಅಪ್ರಾಪ್ತ ವಯಸ್ಕರು, ಬಲತ್ಕಾರ ಕಾಮ ಸಂಬಂಧಿಗಳು, ಗಂಡನಿಂದ ಸುಖ ಸಿಗದೆ ಅತೃಪ್ತರಾದವರು, ಗಂಡುಬೀರಿ ಗಟವಾಣಿಗಳು—ಹೀಗೆ ನಾನಾ ರೀತಿಯ ಹೆಣ್ಣುಗಳಿವೆ. ಗಂಡುಗಳಲ್ಲೂ ದುರ್ಬಲರು ಕಪಟಿಗಳು, ಗುಣಶಾಲಿಗಳು, ಕ್ರೂರಿಗಳು ಹೀಗೆ ರಖಂವಾರಿ ಜನರಿದ್ದಾರೆ. ಈ ಕಾದಂಬರಿ ತುಂಬಿ ಕೊಡುವ ಮನುಷ್ಯ ಸ್ವಭಾವದ ವೈವಿಧ್ಯಕ್ಕೆ ಈ ಪಾತ್ರಗಳು ಸಾಕ್ಷಿ. ಇನ್ನೊಂದು ಅಂಶವೆಂದರೆ ಕಾದಂಬರಿಯಲ್ಲಿ ಬರುವ ಮನುಷ್ಯ ಸಂಬಂಧಗಳು, ಸ್ವಾಭಾವಿಕ, ಅಸ್ವಾಭಾವಿಕ, ಬಲತ್ಕಾರ, ಸ್ವಇಚ್ಛಿತ ಹೀಗೆ ಸಂಬಂಧದ ನೆಲೆಗಳು ಕಾಣಿಸುತ್ತವೆ. ಇಲ್ಲಿ ಲೈಂಗಿಕತೆ ನೈತಿಕತೆಯ ಪ್ರಶ್ನೆಯನ್ನೂ ಎತ್ತುತ್ತದೆ. ಜೊತೆಗೆ ಬದಲಾಗುತ್ತಿರುವ ಘಟ್ಟವೊಂದರಲ್ಲಿ ವ್ಯಕ್ತವಾಗುವ ಸಹಜ ಮನುಷ್ಯ ಪ್ರವೃತ್ತಿಯ ತಾಕಲಾಟಗಳನ್ನು ಧ್ವನಿಸುತ್ತದೆ.

ಭಾಷೆಯಲ್ಲಿ 'ಪ್ರಾದೇಶಿಕತೆಯ ಹಟ' ಅಲ್ಲಲ್ಲೆ ಇಣುಕಿದರೂ ಒಟ್ಟಾರೆಯಾಗಿ ಗ್ರಾಮೀಣತೆಯನ್ನು ಕಟ್ಟಿಕೊಡುವಲ್ಲಿ ಆದರ ಪಾತ್ರ ಮಹತ್ವದ್ದೇ ಆಗಿದೆ.

—ಬರಗೂರು ರಾಮಚಂದ್ರಪ್ಪ

○ ○ ○ ○ ○ ○

ಕಾದಂಬರಿಗಳಲ್ಲಿ ಯಾವುದು ಹೆಚ್ಚು ತೀವ್ರವಾದ ಅನುಭವವನ್ನು ನೀಡು ತ್ತದೆ? ಎಲ್ಲವನ್ನೂ ತಾನೇ ಹೇಳಿಬಿಟ್ಟಾಗ ಕಾದಂಬರಿಕಾರನ ಕೆಲಸ ಸುಲಭ. ದರಿದ್ರ 'ಎಸೆನ್ಸ್' ಅನ್ನು ಬಳಸಿದ ಪಾನೀಯವಿದ್ದ ಹಾಗೆ. ನ್ಯಾಚುರಲಿಸ್ಟ್ ಬರವಣಿಗೆ ಈ ರೀತಿ

ಯದೇ. 'ಜನಪ್ರಿಯ ಸಂಸ್ಕೃತಿ' ಎಂಬ ಕೈಗಾರಿಕೆ ಪ್ರೋತ್ಸಾಹಿಸುವುದು ಇದನ್ನೆ. ಓದುಗ ವರ್ಗದ ಸ್ಟಾಕ್ ಪ್ರತಿಕ್ರಿಯೆಗಳನ್ನು ಬಳಸಿ, ಈ ವ್ಯವಸ್ಥೆಯ ಮುಂದುವರಿಕೆಗೆ ನೆರವಾಗುವುದು. ನಮ್ಮ ಸಮಾಜದ ಅತ್ಯಂತ ಸ್ಫೋಟಕ ಘರ್ಷಣೆಗಳನ್ನು ಕೂಡಾ ಈ ಕಾದಂಬರಿಗಳು ಅತ್ಯಂತ ತೆಳುವಾಗಿ, ನವಿರಾಗಿ ಹೇಳಬಲ್ಲವು. ವಾಸ್ತವ ಸಮಾಜದಲ್ಲಿ ಈ ಘರ್ಷಣೆಗಳು ಪರಿಹಾರ ಆಗದಿದ್ದರೂ ಇಲ್ಲಿ ಅವುಗಳ ನಡುವೆ ಸಾಮರಸ್ಯ ತರಬಲ್ಲದು. ಕಾದಂಬರಿ ಬರವಣಿಗೆಯಲ್ಲಿ ಇದನ್ನೆ ಹೇಳುವ ಕಲೆ ಎನ್ನುತ್ತಾರೆ. ಇದು ನಿಸ್ಸಂದೇಹವಾಗಿ ಯಾವಾಗಲೂ ಕೀಳು.

ಇನ್ನೊಂದು ವಿಧಾನವೆಂದರೆ, ಜೀವನದ ಪ್ರಕಿಯೆಯನ್ನು, ಸನ್ನಿವೇಶಗಳನ್ನು ಕರಗಿಸದೆ ಹಾಗೇ ಸಂಪೂರ್ಣವಾಗಿ ತೋರಿಸುವುದು ಇಲ್ಲಿ ಕಾದಂಬರಿಕಾರನೂ ಒಬ್ಬ ನೋಟಕ. ಹಾಗೇ ಓದುಗ ಕೂಡಾ. ಅನ್ನಾ ಪ್ರಾನ್ಸ್ಕಿಯ ಕುದುರೆ ಬಿದ್ದಾಗ ಒದ್ದಾಡು ವುದನ್ನು, ಮದಾಂಬಾವರಿ ಕಡೆಯಲ್ಲಿ ಆತ್ಮಹತ್ಯಾ ತಳಮಳದಿಂದ ಕಾಯುವುದನ್ನು ಕಗ್ಗಾಡಿನ ಕತ್ತಲಲ್ಲಿ ತಿಮ್ಮಿ ಗುತ್ತಿಯ ಹಿಂದೆ ಹೋಗುವುದನ್ನು, ಐತಾಳರು ಹೆಂಗಸ ರೊಂದಿಗೆ ಕೆಸರಲ್ಲಿ ದುಡಿಯುವುದನ್ನು ಓದುಗ ಎಲ್ಲೋ ಮರೆಯಿಂದ ನೋಡುತ್ತಾನೆ. ಎಪಿಕ್-ಡ್ರಮಾಟಿಕ್ ಕಾದಂಬರಿ ಎಂದು ಕರೆಯುವುದು ಇಂಥವನ್ನೆ. ಜೀವನವೇ ಇಲ್ಲಿ ಅದರೆಲ್ಲಾ ಸಂಕೀರ್ಣತೆ, ಸಮೃದ್ಧತೆಯಿಂದ ಮೂಡಿರುತ್ತದೆ. ಬರೀ 'ಹೇಳುವ' ಕಾದಂಬರಿಯಲ್ಲಿಯಂತೆ ಇಲ್ಲಿ ಓದುಗ ನಿಷ್ಕ್ರಿಯನಲ್ಲ. ತಾನೂ ಓದುವಾಗ ಕ್ರಿಯಾ ಶೀಲನಾಗುತ್ತಾ, ಅರಿಯುತ್ತಾ, ಬೆಳೆಯುತ್ತಾ, ಪ್ರತಿಸ್ಪಂದಿಸುತ್ತಾ ಹೋಗುತ್ತಾನೆ.

ಜಗತ್ತಿನ ಕಾದಂಬರಿ ಚರಿತ್ರೆಯಲ್ಲಿ ಉಳಿಯುವ, ಮನುಕುಲಕ್ಕೆ ಅತ್ಯಂತ ಆಪ್ತ ವಾದ ಕೃತಿಗಳು ಇಂಥವೇ.

ಆದರೆ, ಈ ವರ್ಷ ವಿಮರ್ಶೆಗೆ ಗುರಿಯಾಗಿರುವ ಕಾದಂಬರಿಗಳು ಅಂಥವಲ್ಲ. ಬಹುಮಟ್ಟಿಗೆ ಎಲ್ಲವೂ 'ಹೇಳುವ' ರೀತಿಗೆ ಸೇರಿದಂಥವೇ. ಕನ್ನಡದ ಜನಪ್ರಿಯ ಜಗತ್ತಿನ ಉಳಿದ ನೂರು ಹೆಸರುಗಳಿಗಿಂತ ಇವು ಮೇಲು ಎನ್ನಬಹುದಾದರೂ, ಕನ್ನಡದ ಶ್ರೇಷ್ಠ ಕಾದಂಬರಿಗಳ ಹತ್ತಿರವೂ ಅವು ಸುಳಿಯುವುದಿಲ್ಲ. ಮೂಲತಃ ಕಾದಂಬರಿ ಯೊಂದು ದೊಡ್ಡ ನೈತಿಕ ಅರಿವಿನಿಂದ ಹುಟ್ಟಿರಬೇಕು ಎನ್ನುವ ಸುಳಿವೂ ಇಲ್ಲೆಲ್ಲೂ ಕಾಣುವುದಿಲ್ಲ.

ಗಟ್ಟಿ, ಸತ್ಯಕಾಮ, ನಾರಾಯಣರ ಎರಡು-ಮೂರು ಕಾದಂಬರಿಗಳು ಇಲ್ಲಿವೆ. ಪ್ರತಿಯೊಂದು ಕಾದಂಬರಿಯೂ ಹೊಸಾ ಆಕೃತಿಯ, ಆ ಮೂಲಕ ಹೊಸ ಚಾರಿತ್ರ್ಯದ ಶೋಧನೆ. ಆದರೆ, ಇವು ಬರೀ ಹೇಳುತ್ತವೆ. ದುರ್ಬಲವಾಗಿ ಹೇಳುತ್ತವೆ.

ಇಷ್ಟಲ್ಲದೆ, ಕಾರಂತರ ಕಾದಂಬರಿಯೂ ಬಂದಿದೆ. ಈಚೆಗೆ ಕಾರಂತರಿಗೆ ಏನಾಗಿ ಹೋಗಿದೆ? ಮರಗಟ್ಟಿದ ಬರವಣಿಗೆ. ಎಲ್ಲೂ ಜೀವನ ಪ್ರಿತಿ, ಉತ್ಸಾಹ ಹೊಸದಾಗಿ, ಹಸಿಯಾಗಿ ಉಕ್ಕುವುದಿಲ್ಲ. ಕಾದಂಬರಿಕಾರನಿಗೆ ಮಗುವಿಗಿರುವ ತುಂಬು

ವಿಸ್ಮಯದ ಜೊತೆಗೆ ದೊಡ್ಡದರ ಜೊತೆಗೆ ಅದನ್ನು ಹೊಂದಿಸುವ ತಾತ್ವಿಕತೆ ಎರಡೂ ಇರಬೇಕು. ಇಲ್ಲಿ ವಿಸ್ಮಯ ಮಾಯ. ಆದರೆ, ಮೂಲತಃ ಜೀವವಿಲ್ಲದ ತಾತ್ವಿಕತೆ ಇದೆ.

ಹೀಗಾಗಿ, ವಿಸ್ಮಯ ಮತ್ತು ಜೀವನಾನುಭವದಿಂದ ಹೊಮ್ಮುವ ಜೀವಂತ ತಾತ್ವಿಕತೆ ಎರಡೂ ಇಲ್ಲದ ಬರವಣಿಗೆಗಳನ್ನು ಓದುವ ಈ ಕೆಲಸ ದಣಿವಿನದಾಗಿ ಕಂಡಿದೆ.

ಮನೆ : ಕೆ. ಟಿ. ಗಟ್ಟಿ

ಮಧ್ಯಮವರ್ಗದ ಸಾಧಾರಣ ಓದುಗರಲ್ಲಿ, ಅದರಲ್ಲೂ ಹೆಂಗಸರಲ್ಲಿ ಗಟ್ಟಿ ಸಾಕಷ್ಟು ಜನಪ್ರಿಯ ಕಾದಂಬರಿಕಾರ. ತೀರಾ ಅನಿರೀಕ್ಷಿತ ಕಡೆಗಳಲ್ಲೂ ಶ್ರೀಯುತರ ಧಾರವಾಹಿಗಳ ಬಗ್ಗೆ ತುಂಬುಗಂಟಲಿನ ಮೆಚ್ಚಿಗೆ ಕೇಳಿದ್ದೆ. ಕನ್ನಡದಲ್ಲಿ ಉತ್ತಮವಾದ ಎರಡನೆ ಶ್ರೇಣಿಯ ಕಾದಂಬರಿಕಾರನೊಬ್ಬ ಹುಟ್ಟಿ ಬಂದನೇನೋ ಎನ್ನಿಸಿತ್ತು ಈ ಹೊಗಳಿಕೆ ಕೇಳಿ. ಹೀಗೆ ಹೆಚ್ಚಿನ ನಿರೀಕ್ಷೆಗಳಿಂದಲೇ ಈ ಕಾದಂಬರಿ ಕೈಗೆ ತೆಗೆದುಕೊಂಡೆ. ಮುಗಿಸುವ ಹೊತ್ತಿಗೆ ದೊಡ್ಡ ನಿರಾಸೆಯಾಗಿತ್ತು.

ನಮ್ಮ ಜನಪ್ರಿಯ ಕಾದಂಬರಿಕಾರರು ಯಾಕಿಷ್ಟು ಪೊಳ್ಳು? ಪಾಶ್ಚಾತ್ಯರಲ್ಲಿ ಅತ್ಯಂತ ಕೆಟ್ಟ ಜನಪ್ರಿಯ ಕಾದಂಬರಿಕಾರನಿಗೂ ಕೂಡಾ ಕೆಲವು ಶಕ್ತಿಗಳಿರುತ್ತವೆ. ಇನ್ನು ಲಕಾರೆಯಂಥವರ ಮಾತು ಬಿಡಿ. ಬಹಳ ಸಾರಿ ಉತ್ತಮ ಕೃತಿಯ ಅಂಚಿನಲ್ಲೇ ಇರುತ್ತಾರೆ. ಆದರೆ, 'ದಿ ಅದರ್ ಸೈಡ್ ಆಫ್ ಮಿಡ್‌ನೈಟ್' ನಂತಹ ಕಾದಂಬರಿಗಳಲ್ಲೂ ಆಕರ್ಷಕ ಬರವಣಿಗೆ ಇರುತ್ತದೆ. ನಮ್ಮನ್ನು ಪೂರ್ಣವಾಗಿ ಆವರಿಸುವ ಕಥನ ಕಲೆ ಇರುತ್ತದೆ. ಆದರೆ, ನಮ್ಮ ಜನಪ್ರಿಯ ಕಾದಂಬರಿಕಾರರಿಗೆ ಈ ಶಕ್ತಿಯ ಕಾಲು ಭಾಗವೂ ಇಲ್ಲ.

'ಮನೆ' ಕಾದಂಬರಿ ಸಿದ್ಧ ಪ್ರತಿಕ್ರಿಯೆಗಳ ಬಳಕೆಯ ಮೇಲೆಯೇ ನಿಂತಿರುವ ಕಾದಂಬರಿ. ಕೆಳ ಮಧ್ಯಮವರ್ಗದ ಆವರಣದಲ್ಲಿ ಕಥೆ ನಡೆಯುತ್ತದೆ. ಕೆಳ ಮಧ್ಯಮ ವರ್ಗಗಳ ಬದುಕೆಂದರೆ ಮುಳುಗುತ್ತಿರುವ ಹಡಗು. ಹೀಗಾಗಿ, ಮೂಲಸರಕಿನಲ್ಲೇ ಮೆಲೊಡ್ರಮಾಟಿಕ್ ಗುಣಗಳಿವೆ. ಸ್ವಲ್ಪ ಚುಚ್ಚಿದರೆ ಜೊರೊ ಎಂದು ಗೋಳು ಸುರಿಯುತ್ತದೆ. ಆದರೆ, ಗಟ್ಟಿಯವರ ಗುಣವಿರುವುದು ಇಲ್ಲಿಯೇ. ಅವರಿಗಿಂತ ಕೆಟ್ಟ ಕಾದಂಬರಿಕಾರರಾದರೂ ಈ ವಸ್ತು ತೆಗೆದುಕೊಂಡಿದ್ದರೆ ಮೆಲೊಡ್ರಾಮಾ ಮೇಲು ಮೇಲೇ ತೇಲುತ್ತಿತ್ತು. ಆದರೆ, ಅಷ್ಟರಮಟ್ಟಿಗೆ ಗಟ್ಟಿಯವರಿಗೆ ಬೇರೆ ರೀತಿಯಲ್ಲಿ ಕಥೆ ಹೇಳುವ ತಂತ್ರ ಗೊತ್ತಿದೆ.

ಮೆಲೊಡ್ರಾಮದ ಅಂಚಿಗೆ ತಗುಲಿಸಿಯೂ, ಕಥೆಯನ್ನು ಹಿಂದಕ್ಕೆ ಎಳೆದು ಕೊಂಡು ನಾರಾಯಣನ ಕಥೆ ಹೇಳುತ್ತಾರೆ. ಸರ್ಕಾರೀ ಸ್ಕೀಮೊಂದರ ಪ್ರಕಾರ ಮನೆ ಕಟ್ಟಲು ಈ ನಿವೃತ್ತ ವ್ಯಕ್ತಿ ಪಡುವ ಪಡಿಪಾಟಲನ್ನು ಹೇಳುತ್ತಾ ಹೋಗುತ್ತಾರೆ. ಆದರೆ, ಹೃದಯ ಹೀನ ನೌಕರಶಾಹಿಯ ನಡುವೆ ಅವನ ಪ್ರತಿ ಪ್ರಯತ್ನವೂ

ಅಸಂಬದ್ಧವಾಗುತ್ತಾ ಬರುತ್ತದೆ. ಫೈಲುಗಳ, ಮುಖವಿಲ್ಲದ ವ್ಯಕ್ತಿಗಳ ಜಗತ್ತು ಅದು. ಆದರೆ, ಇಲ್ಲಿ ಕೂಡಾ ಒಟ್ಟಾರೆಯಾಗಿ ವ್ಯವಸ್ಥೆಯ ಅಸಂಬದ್ಧತೆ ಮುಖ್ಯ ವಾಗುವುದಿಲ್ಲ. ಫೈಲುಗಳು ಚಲಿಸದಿರುವ ಬಗ್ಗೆ ಮಧ್ಯಮವರ್ಗ ತೋರುವ ಸಿಟ್ಟು, ಸಿನಿಕತನ ಮುಖ್ಯ. ಮಧ್ಯಮವರ್ಗದ ಓದುಗರಿಂದ ಖಾತ್ರಿಯಾಗಿ ಮೆಚ್ಚುಗೆಯನ್ನು ಈ ಭಾಗಗಳು ಪಡೆಯುತ್ತವೆ.

ಆದರೆ, ಕಡೆಗೆ ವಸ್ತುವಿನ ಆಂತರಿಕ ತರ್ಕವೇ ಗೆಲ್ಲುತ್ತದೆ. ನಾರಾಯಣ ಲಾರಿ ಯೊಂದಕ್ಕೆ ಸಿಕ್ಕಿ ಬಿಡುತ್ತಾನೆ. ಇಲ್ಲಿಯ ಒಳಗೇ ಹರಿಯುತ್ತಿದ್ದ ಅತಿಭಾವುಕತೆ ಇದ್ದ ಕ್ಕಿದ್ದಂತೆ ದಿಢೀರನೆ ಚಿಮ್ಮಿ ಅಪಘಾತ ಮಾಡಿಸುತ್ತದೆ. ಇದಕ್ಕಿಂತ ಭಿನ್ನ ದಾರಿಯಲ್ಲಿ ಕಥೆ ಮುಂದುವರಿದಿದ್ದರೆ ಲೇಖಕನಿಗೆ ಸವಾಲು ಇರುತ್ತಿತ್ತು.

ಗಟ್ಟಿಯವರ ಪ್ರಮುಖ ದೋಷವೆಂದರೆ ಎಲ್ಲವನ್ನೂ ತಾವೇ ಹೇಳುವುದು. ಎಲ್ಲವನ್ನು ಕರಗಿಸಿ 'ಎಸೆನ್ಸ್' ಕೊಡುವುದು. ಅರ್ಥಪೂರ್ಣ ವಾಸ್ತವಿಕತನ ತೋರಿಸು ತ್ತದೆ. ವಿವರಗಳ ದಟ್ಟ ಜಗತ್ತಿನಲ್ಲಿ ವ್ಯಕ್ತಿಗಳು ತಮ್ಮ ಪಾಡಿಗೆ ತಾವು ವರ್ತಿಸುತ್ತಾ ಹೋಗುತ್ತಾರೆ. ಓದುಗರು ಜಗತ್ತಿನಲ್ಲಿ ಇಣಿಕಿ ನೋಡುತ್ತಾರೆ. ಆದರೆ, ಇಲ್ಲಿ ಆಡಿಸ ಲೆಂದೇ ಮಾಡಿದ ಕೀಲು ಗೊಂಬೆಗಳು ಈ ಪಾತ್ರಗಳು. ಆದ್ದರಿಂದ, ಮಧ್ಯಮ ವರ್ಗಕ್ಕೆ ತೀರಾ ಪ್ರಿಯವಾದ ರವೆಇಡ್ಲಿ ಮಿಕ್ಸ್, ಸಾಂಬಾರ್ ಮಿಕ್ಸ್, ಜಾಮೂನ್ ಮಿಕ್ಸ್‌ಗಳ ಥರಹ ಇದೂ ಒಂದು ದಿಢೀರ್ ಕಲೆ. ಕಾದಂಬರಿಗಳಲ್ಲಿ ಬರುವ ಜಗತ್ತಿನಲ್ಲಿ ಸಂಕೀರ್ಣ ಪ್ರಕ್ರಿಯೆ ಮಾಯ.

ಇದಕ್ಕೆ ಹೊಂದಿಕೊಂಡ ಹಾಗೆಯೇ ಇನ್ನೊಂದು ಅಂಶವನ್ನು ಹೇಳಬೇಕಾಗಿದೆ. ಅದು ವಿವರಗಳ ಸಾಂದ್ರತೆಯ ಕೊರತೆ. ಉಸಿರು ಗಟ್ಟಿಸುವ ನಗರ ಜೀವನದ ಕಥೆ ಇದಾದರೂ, ಆ ನಗರ ಎಲ್ಲೂ ದಟ್ಟವಾಗಿ ಮೈ ತಳೆಯುವುದಿಲ್ಲ. ಈ ಪುಸ್ತಕ ಓದುವಾಗ ಆಧುನಿಕ ಬದುಕಿನ ಸಮಸ್ಯೆಯನ್ನೇ ಮಾರ್ಮಿಕವಾಗಿ ಶೋಧಿಸ ಬಯಸಿದ ಟಿ. ಜಿ. ರಾಘವರ 'ಮನೆ' ಕಾದಂಬರಿ ನೆನಪಾಯಿತು. ಎಲ್ಲಿಂದೆಲ್ಲಿಗೆ? ಅಪಾರ ಸಿಡಿಮಿಡಿ, ತಳಮಳದಲ್ಲಿ ಆ ಕಾದಂಬರಿ ಕಟ್ಟಲ್ಪಟ್ಟಿದೆ. ಹಾಗಿಲ್ಲದಿರುವುದೇ ಗಟ್ಟಿಯವರ ಜನ ಪ್ರಿಯತೆಗೆ ಕಾರಣವೇನು ?

ಅವಿಭಕ್ತರು: ಕೆ. ಟಿ. ಗಟ್ಟಿ

ಈ ಕಾದಂಬರಿಯ ಒಂದು ಮುಖ್ಯ ಕೊರತೆ ಎಂದರೆ, ಇದರ ನಾಟ್ಯಕ್ರಿಯಾ ಭಾಗಕ್ಕೂ. ಬರುವ ವಿವರಗಳಿಗೂ ಕ್ರಿಯಾಶೀಲ ಸಂಬಂಧವಿಲ್ಲದಿರುವುದು. ಗೇಣಿ ಮೂಲೆ, ಮಕ್ಕಳ ಪಡುಮನೆ ಈ ಜಗತ್ತುಗಳ ವಿವರ, ಚಾರಿತ್ರಿಕತೆ ನೀಡುವಾಗ ಕಥನಕ್ಕೆ ಚಲನವೇ ಇರದೆ, ಮಾಹಿತಿಗಳ ಕಂತೆಯನ್ನು ಪೇರಿಸಿದಂತಾಗುತ್ತದೆ. ಮುಂದಿನ ಅಥವಾ ಹಿಂದಿನ ನಾಟಕ ಭಾಗಗಳ ಮೇಲೆ ಯಾವ ಬೆಳಕನ್ನೂ ಇವು ಚೆಲ್ಲುವುದಿಲ್ಲ; ಕ್ರಿಯೆಗೆ ಒತ್ತಾಸೆಯನ್ನು ನೀಡುವುದಿಲ್ಲ. ಉದಾಹರಣೆಗೆ, ರಾಮನ ಮದುವೆಯ

ಪ್ರಸಂಗವನ್ನೆ ಗಮನಿಸಬಹುದು. ಹದಿನೆಂಟು ಇಪ್ಪತ್ತು ಪುಟಗಳ ತನಕ ಹೋಗುವ ಈ ಪ್ರಸಂಗಕ್ಕೆ ಇಡೀ ಕಾದಂಬರಿಯ ಬಂಧದಲ್ಲಿ ಅಂಥ ಅನಿವಾರ್ಯ ಸ್ಥಾನವೇನೂ ಇಲ್ಲ. ಆದರೆ, 'ಮಲೆಗಳಲ್ಲಿ ಮದುಮಗಳು'ವಿನಲ್ಲಿ ಬರುವ ಮದುವೆಯ ಪ್ರಸಂಗ ಸುಮ್ಮನೆ ಬೆಳೆಯುತ್ತಾ ಹೋದರೂ, ವಿವರಗಳಿಂದ ತುಂಬಿಕೊಳ್ಳುತ್ತಾ ಹೋದರೂ ಅದೇ ಒಂದು ಮಹಾನ್ ಕ್ರಿಯೆಯಾಗುತ್ತಾ ಹೋಗುತ್ತದೆ. ಎಲ್ಲವೂ ಹಂಡೆಯ ಮೇಲೆ ಧಡ್ ಅಂತ ಬರುವ ಸದ್ದಿಗಾಗಿ ಕಾಯುತ್ತವೆ. ಮತ್ತು ಆ ಮೂಲಕ ಆ ಕಾದಂಬರಿಯ ಮುಖ್ಯ ಪಾತ್ರಗಳು ಜೋತಾಡುತ್ತಿರುವ ಸೂಕ್ಷ್ಮ ಸ್ಥಿತಿ ಪ್ರತೀತವಾಗುತ್ತದೆ.

ಐತಪ್ಪಗಟ್ಟಿ ಸಂಸಾರ ವಿಘಟನೆಗೆ ಒಳಗಾಗುವ ಕಥೆಯನ್ನು ಹೇಳಲು ಗಟ್ಟಿ ಪ್ರಯತ್ನಿಸಿದ್ದಾರೆ. ಐತಪ್ಪಗಟ್ಟಿಯ ಸಾವಿನ ಹಿನ್ನೆಲೆಯಲ್ಲಿರುವುದು ಇದೇ. ಪಾತ್ರಗಳು ಮತ್ತು ಸನ್ನಿವೇಶಗಳು ತೀವ್ರ ರೀತಿಯ ಅಥೆಂಟಿಸಿಟಿಯನ್ನು ಸಾಧಿಸಿಲ್ಲವಾದ್ದರಿಂದ ಕಾದಂಬರಿ ಆಳವಾಗಿ ಮನಸ್ಸನ್ನೂ ಕಲಕುವುದಿಲ್ಲ. ನಿರ್ದಿಷ್ಟ ಸನ್ನಿವೇಶವೊಂದನ್ನು, ವಿಸ್ತಾರವಾಗಿ, ಸಮೃದ್ಧವಾಗಿ ಬರೆಯುವ ಶಕ್ತಿ ಗಟ್ಟಿಯವರಿಗೆ ಇಲ್ಲ. ಹೀಗಾಗಿ, ಯಾವ ಒಂದು ಸನ್ನಿವೇಶವೂ ಸಾಂದ್ರವಾಗಿ ಬೆಳೆಯುವುದಿಲ್ಲ. ಕೊಂಚ ಬರವಣಿಗೆಯ ನಂತರ ಥಟಕ್ಕನೆ ಸಾಮಾನ್ಯೀಕೃತ ವಿವರಣೆಗೆ ಗಟ್ಟಿಯವರು ಇಳಿಯುತ್ತಾರೆ.

ಬಹುಶಃ ಈ ರೀತಿಯ ಬರವಣಿಗೆಯನ್ನೇ ಪತ್ರಿಕೆಗಳು ನಿರೀಕ್ಷಿಸುತ್ತವೆ. ಗಟ್ಟಿ ಅದಕ್ಕಾಗಿ ಬರೆಯುತ್ತಾರೆ.

ಆಹುತಿ : ಸತ್ಯಕಾಮ

ಕರ್ಣನನ್ನು ಕುರಿತ ಕಾದಂಬರಿ ಇದು. ನೆನೆದರೆ ಕಣ್ಣಾಲಿಗಳಲ್ಲಿ ನೀರಾಡುವಂಥ ಪಾತ್ರ ಕರ್ಣನದು. ಹೆತ್ತತಾಯಿ ಕೂಡಾ ಎರಡು ಬಗೆದ ಪಾತ್ರ ಅದು. ಅಧಿಕಾರದ, ಸಿಂಹಾಸನಕ್ಕೆ ನಡೆವ ಕಚ್ಚಾಟಗಳಲ್ಲಿ, ಅಥವಾ ಬದುಕಿನ ಯಾವುದೊ ಒಂದು ಹಂತದಲ್ಲಿ ಎಲ್ಲ ಸಂಬಂಧಗಳೂ ಗೌಣವಾಗಿ ಹೋಗುತ್ತವೆ ಎಂಬ ಸತ್ಯವನ್ನು ಹೇಳುವ ಮಹಾಕಾವ್ಯ ಮಹಾಭಾರತ.

ಕೆಳವರ್ಗದಿಂದ ಬಂದ ಕರ್ಣ ನಿಧಾನಕ್ಕೆ ಅಧಿಕಾರ ಅಂತಸ್ತಿನ ಮೆಟ್ಟಿಲುಗಳೇರುತ್ತ ಮೇಲೆ ಹೋದದ್ದನ್ನು ಸತ್ಯಕಾಮ ಹೇಳುತ್ತಾರೆ. ಬಾಲ್ಯದಲ್ಲಿ ಆಟ ಆಡುವಾಗ ಪ್ರಾರಂಭವಾದ ಅಪಮಾನ ; ಅದರ ಬೆನ್ನಲ್ಲೇ ಬೆಳೆದ ಫಲ. ಮುಂದೆಯು ಇಡೀ ಜೀವನದಲ್ಲಿ ಕರ್ಣನಿಗೆ ಅವಮಾನ ಕಟ್ಟಿಟ್ಟದ್ದೆ. ಒಂದರ ಮೇಲೊಂದು ಇರಿತಗಳು. ಹೀಗಾಗಿ, ಕರ್ಣನ ವ್ಯಕ್ತಿತ್ವದಲ್ಲೇ ಆಳದಲ್ಲಿ ಒಂದು ಬಗೆಯ ದಟ್ಟವಿಷಾದ, ಹತಾಶೆ ತುಂಬಿಕೊಂಡಿದೆ. ಅದಕ್ಕಾಗಿಯೇ ಒಮ್ಮೆ ಕರ್ಣ ಗೊಣಗಿಕೊಳ್ಳುತ್ತಾನೆ "ಲೋಕದಲ್ಲಿ ಬಿದ್ದವರ ರಾಜ್ಯ ಬರುವುದೇ ಇಲ್ಲ. ತುಳಿಯುವವರ ಕಾಲಿಗೆ ಮೆಟ್ಟು ಆಗುವುದೆ".

ಒಂದೆರಡು ಸ್ವಾರಸ್ಯಕರ ಹೊಸ ಅಂಶಗಳನ್ನು ಕಥೆಗೆ ಸತ್ಯಕಾಮರು ಸೇರಿಸಿದ್ದಾರೆ. ದುರ್ಯೋಧನನ ಹೆಂಡತಿ ಸ್ವಯಂವರದ ಸಂದರ್ಭದಲ್ಲಿ ಕರ್ಣನನ್ನೇ ಮೋಹಿಸಿದ್ದಳು, ನಂತರ ದುರ್ಯೋಧನನ್ನು ಅವಳು ಮದುವೆಯಾದರೂ ಕರ್ಣನ ಹುಚ್ಚು ಹೋಗಿರಲಿಲ್ಲ ಎಂಬುದೇ ಈ ಹೊಸ ಸಂಗತಿ. ಭಾನುಮತಿ-ಧುರ್ಯೋಧನರ ಸಮಾಗಮ ಸುಗುಮವಾಗಿ ನಡೆಯುವುದೇ ಇಲ್ಲ. ಯಾವುದೋ ಶಕ್ತಿ ಬಂದು ದುರ್ಯೋಧನನ್ನು ಹಿಂಸಿಸುತ್ತದೆ. ವಿಲಾಸೀರಾತ್ರಿಯಾಗಬೇಕಿದ್ದರೂ ಪೈಶಾಚಿಕ ರಾತ್ರಿಯಾಗುತ್ತದೆ. ಕಡೆಗೆ ಕರ್ಣನೇ ಅದನ್ನು ನಿವಾರಿಸುತ್ತಾನೆ. ಈ ಭಾಗದ ಹಿನ್ನೆಲೆಯಲ್ಲಿರುವ ಒಳ ಸೂಕ್ಷ್ಮಗಳು ಸ್ವಾರಸ್ಯಕರವಾದದ್ದು.

ಹಠತೊಟ್ಟು ಮನಸ್ಸು ಕರಗದೆ ನಿಂತಿದ್ದರೆ ಕರ್ಣ ಉಳಿಯಬಹುದಿತ್ತು. ಆದರೆ, ಕರ್ಣನ ಅವಸಾನದ ಬೇರುಗಳು ಕರ್ಣನಲ್ಲಿ ಕೂಡಾ ಇವೆ. ತೀವ್ರ ಎಚ್ಚರಿರಬೇಕಾದ, ತನ್ನನ್ನು ತಾನು ಕಾಯ್ದುಕೊಳ್ಳಬೇಕಾದ ಕ್ಷಣಗಳಲ್ಲಿ ಕರ್ಣ ಕರಗಿ ಹೋಗುತ್ತಾನೆ. ವಿಹ್ವಲನಾಗುತ್ತಾನೆ. ಆ ದುರ್ಬಲಗಳಿಗೆಗಳಲ್ಲಿ ಬಂದವರು ಅವನ ಪ್ರಾಣದ ಭಾಗಗಳನ್ನು ಕತ್ತರಿಸುತ್ತಾರೆ. ಗುರು, ಗೆಳೆಯ, ತಾಯಿ ಹೀಗೆ ಯಾರಾದರೂ ಸರಿ. ಕಡೆಯ ಭಾಗದಲ್ಲಿ ಕೂಡಾ ಕರ್ಣ ಹೀಗೇ ವಿಹ್ವಲನಾಗುತ್ತಾನೆ. ಶ್ರೀಕೃಷ್ಣ "ಬಂಧುಗಳ ಹಾಗೆ ಆಡಬೇಡಿರಿ, ಶತ್ರುಗಳ ಹಾಗೆ ಕಾಡಬೇಡಿರಿ" ಎಂದಾಗ, ಕರ್ಣ ಕರಗಿ ಹೋದ. ಕಣ್ಣಗೊಂಬೆಯಲ್ಲಿ ಕುಂತಿ ಕುಣಿಯುತ್ತಾಳೆ. ಕಾವು ತಣ್ಣಗಾಗುತ್ತದೆ. ಅರ್ಜುನನ ಬಾಣ ಪ್ರಾಣಾಹುತಿ ತೆಗೆದುಕೊಳ್ಳುತ್ತದೆ.

ಮುಖ್ಯವಾಗಿ ಕರ್ಣನ ಸ್ವಗತದ ಶೈಲಿಯಲ್ಲಿದೆ ಈ ಕಾದಂಬರಿ. ಅಲ್ಲಲ್ಲಿ ಉಳಿದ ಪಾತ್ರಗಳ ಸ್ವಗತವೂ ಬಂದು ಸೇರಿಕೊಳ್ಳುತ್ತದೆ. ಇದೊಂದು ಸ್ವಗತ ಮೇಳ. ಸತ್ಯಕಾಮರ ಆಕರ್ಷಕ ಪತ್ರಿಕೋದ್ಯಮ ಬರವಣಿಗೆ. ಆದುದರಿಂದ ಸಾಂದ್ರತೆ ನಿರ್ಮಾಣವಾಗದೆ ಹೋಗುತ್ತದೆ. ಒಮ್ಮೆ ಸರಾಗವಾಗಿ, ಓದಿಸಿಕೊಳ್ಳುವ ಹತಂಕ್ಕೆ ನಿಲ್ಲುತ್ತದೆ.

ರಾಜಕ್ರೀಡೆ : ಸತ್ಯಕಾಮ

ಇಲ್ಲಿ ಕೃಷ್ಣ ಕಥಾನಾಯಕ. ಪುರಾಣಗಳ ಮಹಾವ್ಯಕ್ತಿ ಕೃಷ್ಣನನ್ನು ಆಧುನಿಕ ಕಾದಂಬರಿಯಲ್ಲಿ ಅರ್ಥೈಸಲು ಯತ್ನಿಸಿದ್ದಾರೆ. ಆಹುತಿಯ ಹಾಗೆ ಇಲ್ಲಿ ಕೂಡಾ ಸಮಕಾಲೀನ ಆಶಯವೊಂದರ ಶೋಧನೆಯನ್ನು ಸತ್ಯಕಾಮರು ಮಾಡಿದ್ದಾರೆ. 'ಆಹುತಿ'ಯಲ್ಲಿ ಶೋಷಣೆ. ಇಲ್ಲಿ ರಾಜಕಾರಣ ಕೃಷ್ಣನ ಪಾತ್ರ ರಾಜಕಾರಣದ ಮೌಲ್ಯಾನ್ವೇಷಣೆಗೆ ತಕ್ಕ ಪಾತ್ರ ಕೂಡಾ ಹೌದು.

'ಲೈಟ್ ಅಟ್ ದಿ ಸೆಂಟರ್' ಕೃತಿಯಲ್ಲಿ ಸ್ವಾಮಿ ಅಗೇಮಾನಂದ ಭಾರತೀಯವರು ಒಂದು ಕಡೆಗೆ ಭಗವದ್ಗೀತೆಯನ್ನು ಚರ್ಚಿಸುತ್ತಾರೆ. ತಾರತಮ್ಯ, ಪ್ರೀತಿ ಪ್ರೇಮ ಹೀಗೆ ಯಾವ ಹಂಗೂ ಇಲ್ಲದೆ ಹತ್ಯೆಯನ್ನು ಕಂಡ, ಪ್ರತಿಪಾದಿಸಿದ ಈ ಕೃತಿ ಕಂಡು ಆ

ಪಾಶ್ಚಾತ್ಯ ಯೋಗಿಗೆ ತಳಮಳ, ಅಸಹ್ಯ. ಭಾರತೀಯ ಸಂಸ್ಕೃತಿಯ ಒಂದು ಪ್ರಧಾನ ಧಾರೆ ಬದುಕನ್ನು ಕಂಡ ರೀತಿಗೆ ಇದೊಂದು ರೂಪಕ. ಈ ಉಪದೇಶವನ್ನು ಹೇಳಿದವನು ಕೃಷ್ಣ ಹೀಗಾಗಿ, ನಮ್ಮ ಸಮಕಾಲೀನ ರಾಜಕಾರಣದ, ಬದುಕಿನ ಅತ್ಯಂತ ಮೂಲಭೂತ ಸಮಸ್ಯೆಗಳನ್ನು ಕೃಷ್ಣನ ಜೀವನದ ನೆರವಿನಿಂದ ಪರೀಕ್ಷಿಸಲು ಸಾಧ್ಯವಿದೆ. 'ಕೊಲುವ ಹಕ್ಕು ನಿಮಗಿಲ್ಲ ಸ್ನೇಹಿತರೆ' ಎಂಬ ಇನ್ನೊಂದು ನಿಲುವು ಇಲ್ಲಿ ನೆನಪಿಗೆ ಬರುತ್ತದೆ. ಗುರಿ ಮತ್ತು ದಾರಿಗಳ ಪ್ರಶ್ನೆಯೂ ಇಲ್ಲಿ ಬರುತ್ತದೆ. ಆದರೆ, ಸತ್ಯಕಾಮರು ರಾಜಕಾರಣದ ಈ ಮೂಲಭೂತ ಪ್ರಶ್ನೆಯಿಂದ ಕೃಷ್ಣನನ್ನು ಕಂಡಿಲ್ಲ. ಅಂಚುಗಳಲ್ಲಷ್ಟೆ ಸುತ್ತಾಡಿದ್ದಾರೆ.

ಕೃಷ್ಣನನ್ನು ಸತ್ಯಕಾಮರು ಕಂಡಿರುವುದು ಸಾಂಪ್ರದಾಯಿಕ ದೃಷ್ಟಿಕೋನದಿಂದ. ಧರ್ಮಗ್ಲಾನಿಯಾದಾಗ ನಾನು ಹುಟ್ಟಿಬರುತ್ತೇನೆ ಎಂಬ ಹೇಳಿಕೆಯನ್ನು ಹೃತ್ಪೂರ್ವಕವಾಗಿ ನಂಬಿದವರು. ಕೃಷ್ಣ ಧರ್ಮದ ನೆಲೆಯಲ್ಲಿ ನಿಂತ ರಾಜಕಾರಣಕ್ಕೆ ಪ್ರತೀಕ. ಎಲ್ಲ ಒಳ್ಳೆಯದರ, ಯೋಗ್ಯವಾದದ್ದರ, ಸತ್ಯವಾದದ್ದರ ಸಂಕೇತ. ಧರ್ಮ ಮತ್ತು ರಾಜಕಾರಣ ಎರಡೂ ಒಂದೇ ಆಗಿರುವ ಸ್ಥಿತಿ ಕೃಷ್ಣ.

ಅಧಿಕಾರ, ಮಾನವೀಯತೆ, ಜನತೆಯ ಸೇವೆ ಹೀಗೆ ಎಲ್ಲ ಕಡೆಗಳಲ್ಲೂ ಕೃಷ್ಣ ಅತ್ಯುತ್ತಮವಾದದ್ದನ್ನೇ ಬಯಸುವವನು. ಅದಕ್ಕಾಗಿ ದುಡಿಯುವವನು. ಹೀಗಾಗಿ, ಕೃಷ್ಣನ ಎಂದಿನ ಸಾಂಪ್ರದಾಯಿಕ ರಾಜಕಾರಣದ ಬಗ್ಗೆ ಜುಗುಪ್ಸೆ ಇದೆ, ತಿರಸ್ಕಾರವಿದೆ. ಆದರೂ, ಅನಿವಾರ್ಯವಾಗಿ ಕ್ರಿಯಾಶೀಲನಾಗುತ್ತಾನೆ.

ನಮ್ಮ ಬದುಕಿನ, ರಾಜಕಾರಣದ ಅನೇಕ ಪ್ರಮುಖ ಪ್ರಶ್ನೆಗಳನ್ನು ಸತ್ಯಕಾಮರು ಪ್ರಸ್ತಾಪಿಸುತ್ತಾರೆ. ಪ್ರಸ್ತಾಪಿಸುತ್ತಾರೆ ಎಂಬ ಮಾತು ಬಳಸಿದ್ದೇಕೆಂದರೆ ಆ ವಿಚಾರಗಳು ಬರೀ ಅಡಿಟಿಪ್ಪಣಿಗಳಾಗಿ, ಟೀಕೆಗಳಾಗಿ ಬರುತ್ತವೆ. ಕಾದಂಬರಿಯ ಸನ್ನಿವೇಶದಲ್ಲೇ ಆವಿರ್ಭವಿಸುವುದಿಲ್ಲ. ರಾಜಕಾರಣವನ್ನು ವಸ್ತುವನ್ನಾಗುಳ್ಳ ಶ್ರೇಷ್ಠ ಕಾದಂಬರಿಗಳಿಗೂ, ಇದಕ್ಕೂ ಇರುವ ವ್ಯತ್ಯಾಸ ಕಾಣುವುದು ಇಲ್ಲಿಯೇ. ಮಾಲ್ರೋ ದಾಸ್ತೋಯೆವಸ್ಕಿ, ಕಾನ್ರಾಡ್ ಮುಂತಾದವರು ತೀವ್ರ ಮಾನವೀಯ ಸನ್ನಿವೇಶಗಳ ಮೂಲಕ ರಾಜಕೀಯದ ಬೇರೆ ಬೇರೆ ಪ್ರಶ್ನೆಗಳನ್ನು ಎತ್ತುತ್ತಾರೆ. ಆದರೆ, ಇಲ್ಲಿ ಅದು ಪತ್ರಿಕೋದ್ಯಮದ ಸಂಪಾದಕೀಯ ಪ್ರಶ್ನೆಗಳಂತೆ ಕಾಣಿಸಿಕೊಳ್ಳುತ್ತದೆ.

ಕೃಷ್ಣ ತನ್ನ ಬಾಲ್ಯದಲ್ಲಿ ರಾಜತ್ವದ ಕನಸು ಮತ್ತು ಕೊಳಲುಗಳ ನಡುವೆ ಎರಡನೆಯದನ್ನೆ ಆರಿಸಿಕೊಂಡವನು. ಮುಂದೆ ಅನಿವಾರ್ಯವಾಗಿ ಆತ ಅದಕ್ಕೆಳಿಯುತ್ತಾನೆ. ಸಾರ್ವಜನಿಕ ವ್ಯಕ್ತಿಯಾದ ನಂತರ ಮೊದಲಿನ ವೈಯಕ್ತಿಕತೆ, ಖಾಸಗಿ ಜಗತ್ತಿನ ಮಾಧುರ್ಯತೆ ಮಾಯವಾಗುತ್ತದೆ. ವೈಯಕ್ತಿಕತೆ-ಸಾರ್ವಜನಿಕಗಳ ನಡುವೆ ವ್ಯತ್ಯಾಸ ಮಾಯವಾಗುತ್ತದೆ. ಇದರ ಬಗ್ಗೆ ಕೃಷ್ಣನಿಗೂ ಪ್ರಜ್ಞೆ ಇದೆ. ಆದರೆ, ಇಂಥ ಕಡೆಗಳಲ್ಲಿ ಏಳುವ ಮಹತ್ವದ ಆಶಯಗಳು ಪೂರ್ಣವಾಗಿ ಬೆಳೆಯುವುದೇ ಇಲ್ಲ. ಹಾಗೇ ಮುರುಟಿ ಹೋಗುತ್ತದೆ.

ಸಮಕಾಲೀನ ಯುಗದ ಮಹತ್ವದ ಕಾದಂಬರಿ ಹುಟ್ಟುವದು ಸಮಕಾಲೀನ ಬದುಕಿನ ವಿವರಗಳ ನಡುವೆಯೇ. ಪೌರಾಣಿಕ ಚೌಕಟ್ಟಿನಲ್ಲಿ ಅಷ್ಟು ತೀವ್ರವಾದ ಸಮೃದ್ಧವಾದ ಕೃತಿ ಹುಟ್ಟುವುದಿಲ್ಲ ಎಂಬ ಮಾತಿಗೆ ಈ ಕಾದಂಬರಿ ಸಾಕ್ಷಿ.

ಚಂಡ ಪ್ರಚಂಡ : ಸತ್ಯಕಾಮ

ಇದು ಈ ವರ್ಷ ಎರಡು ಪೌರಾಣಿಕ ಹಿನ್ನೆಲೆಯ ಕಾದಂಬರಿಗಳನ್ನು ಬರೆದಿರುವ ಸತ್ಯಕಾಮರ ಸಾಮಾಜಿಕ ಕಾದಂಬರಿ. ಎಲ್ಲದಕ್ಕೂ ಅದೇ ಗುಳಿಗೆ ಎನ್ನುವ ಹಾಗೆ ಶೈಲಿಯಲ್ಲಿ ಒಂದು ಚೂರು ಕೂಡಾ ವ್ಯತ್ಯಾಸವಾಗಿಲ್ಲ.

ಸಾಮಾಜಿಕ ಕಾದಂಬರಿಗಳಲ್ಲಿ ಈ ಬಗೆಯ ಶೈಲಿಯಿಂದಾಗಿ ಪಾತ್ರ. ಪರಿಸರ ಯಾವುದೂ ಪೂರ್ಣವಾಗಿ ಮೈದುಂಬಿಕೊಳ್ಳುವುದಿಲ್ಲ ಅಥವಾ ಬರೀ ಕೇಂದ್ರ ಪಾತ್ರ ವೊಂದೇ ವಿಜೃಂಭಿಸಿ ಉಳಿದುವೆಲ್ಲವೂ ಗೌಣವಾಗಿ ಬಿಡುತ್ತದೆ. ಇಲ್ಲೂ ಹಾಗೇ ಆಗುತ್ತದೆ. ಗುಂಡಾಚಾರಿ ಒಬ್ಬ ವಿಜೃಂಭಿಸುತ್ತಾನೆ. ಕಾದಂಬರಿಯ ಬಹಳಷ್ಟು ಹಣದ, ಮೋಸದ, ದಗಾಬಾಜಿಯ ಜಗತ್ತಿನಲ್ಲಿಯೇ ನಡೆಯುವುದರಿಂದ ಗುಂಡಾಚಾರಿಯ ವ್ಯಕ್ತಿತ್ವ ಕೂಡಾ ಎಲ್ಲ ಮುಖಗಳಲ್ಲಿ ಕಾಣಿಸಿಕೊಳ್ಳುವುದಿಲ್ಲ.

ವಿವರಗಳ ಕೊರತೆಯಿಂದಾಗಿ ಕಾದಂಬರಿ ಎಷ್ಟೇ ತೆಳು ಎನಿಸಿದರೂ, ಜೀವನದ ಪಲವು ಕ್ಷೇತ್ರಗಳ ಪರಿಚಯ ಕಾದಂಬರಿಕಾರರಿಗೆ ಇರುವುದು ಸ್ಪಷ್ಟ. ಅನೇಕ ಕಡೆಗೆ ಮನುಷ್ಯನ ಹಲವು ವರ್ತನೆಗಳನ್ನು ಅವರು ಕಾಣುವ ರೀತಿ ಅದಕ್ಕೆ ಸಾಕ್ಷಿ. ಆದರೆ, ಚತುರತೆ, ಕುತಂತ್ರಗಳ ಹಿನ್ನೆಲೆಯಲ್ಲಿ ಮನುಷ್ಯತ್ವಕ್ಕೆ ಒದಗುವ ಅಪಾಯದ ಕಡೆಗೆ ಲೇಖಕರ ಆಸಕ್ತಿ ಕಡಿಮೆ. ಆದ್ದರಿಂದ, ಕಾದಂಬರಿಗೊಂದು ಬಗೆಯ ಸೀಮಿತತೆ ಬಂದುಬಿಟ್ಟಿದೆ.

ಅಂತರ : ಪಿ. ವಿ. ನಾರಾಯಣ

ಈ ಬಾರಿ ನಾರಾಯಣರ ಮೂರು ಕಾದಂಬರಿಗಳಿವೆ. ಆಶ್ಚರ್ಯಕರ ಸಂಗತಿ ಎಂದರೆ, ಈ ಮೂರಕ್ಕೂ ಕೆಲವು ಸಾಮಾನ್ಯ ಸಂಗತಿಗಳಿವೆ. ಅನುಭವದ ನಿರ್ದಿಷ್ಟತೆಯನ್ನು ಪತ್ತೆ ಮಾಡಲು ಯತ್ನಿಸುವುದು, 'ವಿಕಾಸ'ದ ಸ್ವರೂಪವನ್ನು ತಿಳಿದುಕೊಳ್ಳಲು ಒದ್ದಾಡುವುದು—ಈ ಸಂಗತಿಗಳು ಮೂರು ಕಾದಂಬರಿಗಳ ಹಿನ್ನೆಲೆಯಲ್ಲಿವೆ. ಆದರೆ, ಮೂರೂ ಕೂಡಾ ಅತೃಪ್ತಿ ಹುಟ್ಟಿಸುವುದಕ್ಕೆ ಕಾರಣ, ಮೂಲಭೂತವಾಗಿ ಅನುಭವವನ್ನೆ ಸರಿಯಾದ ಫೋಕಸ್ಸಿನಲ್ಲಿ ಇಡಲು ಸಾಧ್ಯವಾಗಿಲ್ಲ ಎನ್ನುವುದು. ಸಂದಿಗ್ಧತೆ, ಒದ್ದಾಟ, ಅಸ್ಪಷ್ಟತೆಗಳಲ್ಲೆ ಕೊನೆಯಾಗುತ್ತವೆ. ಪ್ರಮುಖ ಪಾತ್ರಗಳ ಗೊಂದಲದ ಸ್ಥಿತಿ ಒಟ್ಟಾರೆಯಾಗಿ ಕಾದಂಬರಿಯಲ್ಲಿ ಮೂಡುವ ಅರಿವಿನ ಸ್ಥಿತಿಯೂ ಆಗಿ ಬಿಡುತ್ತದೆ.

ಸೀನುವಿನ ವಿಕಾಸ ಈ ಕಾದಂಬರಿಯ ವಸ್ತು. ತಾರತಮ್ಯ ಪ್ರಜ್ಞೆ ಇರದ ಬಾಲ್ಯಾವ್ಯವಸ್ಥೆಯಿಂದ ಆ ಪ್ರಜ್ಞೆಯ ಕಡೆಗೆ ಕ್ರಮೇಣ ಹುಡುಗ ಬೆಳೆಯುತ್ತಾನೆ. ಬಾಲ್ಯದ ಕೆಲವು ಘಟನೆಗಳನ್ನು ಸಾಕಷ್ಟು ಆತ್ಮೀಯವಾಗಿ ಲೇಖಕರು ಬರೆಯುತ್ತಾರೆ. ಬಹಳ ಸಾರಿ ಉದ್ದೇಶ ಹೀನ ಬರವಣಿಗೆ ಇದು ಅಂತ ಮತ್ತೆ ಮತ್ತೆ ಅನ್ನಿಸಿದರೂ. ಕಡೇ ಪಕ್ಷ ಬಾಲ್ಯದ ಜಗತ್ತಿನ ರೂಪುರೇಖೆಗಳನ್ನಾದರೂ ಇಲ್ಲಿ ಕಾಣುತ್ತೇವೆ. ಆದರೆ, ಆಲನಹಳ್ಳಿ, ಅನಂತಮೂರ್ತಿ, ಕುವೆಂಪು ಅವರ ಈ ಅನುಭವದ ವರ್ಣನೆಯ ಮುಂದೆ ಇದು ಸಪ್ಪೆಯಾಗಿ ಕಾಣುತ್ತದೆ.

ಆದರೆ, ನಾರಾಯಣರ ಉಳಿದ ಕಾದಂಬರಿಗಳಿಗೆ ಹೋಲಿಸಿದಾಗ ಇದು ಹೆಚ್ಚು ವಿವರಪೂರ್ಣ ಕಾದಂಬರಿ. ಸಾಕಷ್ಟು ವಿಸ್ತಾರವಾಗಿ, ಬಿಡುವಿನಿಂದ ಇಲ್ಲಿ ಬರೆಯಲು ಪ್ರಯತ್ನಿಸಿದ್ದಾರೆ. ಆದರೆ, ಪಾತ್ರಗಳನ್ನು ಸೃಷ್ಟಿಸುವಲ್ಲಿ ವೈವಿಧ್ಯ ಮತ್ತು ವರ್ಣಮಯತೆ ಕಡಿಮೆ. ಇದು ಒಟ್ಟಾರೆಯಾಗಿ ನಾರಾಯಣರ ಎಲ್ಲ ಕಾದಂಬರಿಗಳಿಗೂ ಅನ್ವಯಿಸುವ ಮಾತೂ ಹೌದು. ಇದಕ್ಕೆ ಕಾರಣ, ಯಾವ ವಿವರಗಳನ್ನು ಆಯ್ದುಕೊಳ್ಳುವುದರಿಂದ, ಯಾವುದನ್ನು ದೀರ್ಘವಾಗಿ ಚಿತ್ರಿಸುವುದರಿಂದ ಹಳ್ಳಿಯನ್ನು ಪುನರ್‌ಸೃಷ್ಟಿಸಬಹುದು ಎಂಬ ಅರಿವು ಲೇಖಕರಿಗೆ ಕಡಿಮೆ.

ಎಲ್ಲಕ್ಕಿಂತ ಹೆಚ್ಚಾಗಿ, ಅವಶ್ಯಕ ಮತ್ತು ಅನುಷಂಗಿಕಗಳ ನಡುವಿನ ವ್ಯತ್ಯಾಸಗಳ ಅರಿವು ಲೇಖಕರಿಗೆ ಅಷ್ಟು ತೀವ್ರವಾಗಿ ಇಲ್ಲದ್ದರಿಂದ, ಕಾದಂಬರಿ ಅಲ್ಲಲ್ಲಿ ಸುಸ್ತು ಮಾಡುತ್ತದೆ. ಇದು ಬರುವುದು ಲೇಖಕನಿಗೆ ಸ್ಫುಟವಾದ -ನೈತಿಕ ಪ್ರಜ್ಞೆ ಇದ್ದಾಗ ಮಾತ್ರ.

ಶೋಧನೆ : ಪಿ. ವಿ. ನಾರಾಯಣ

ವ್ಯಕ್ತಿ ಸಂಬಂಧಗಳಲ್ಲಿ ನುಸುಳಿ ಬರುವ ಸಣ್ಣತನ, ಹಿಂಸೆಗಳು ಮಧ್ಯಮವರ್ಗದ ವಸ್ತುವನ್ನು ಬರೆಯುವ ಕಾದಂಬರಿಕಾರರಿಗೆ ವಿಶೇಷ ಆಕರ್ಷಣೆ. ಪಿ.ವಿ.ನಾರಾಯಣರ ಈ ಕಾದಂಬರಿ ಇದೇ ಬಗೆಯ ನೆಲೆಯಲ್ಲಿ ಕೆಲಸ ಮಾಡುವಂಥದು. ನಿರೂಪಕ, ತಮ್ಮ, ಶಶಿಧರ, ರಮ-ಈ ಮೂರೂ ಪ್ರಮುಖ ಪಾತ್ರಗಳ ವ್ಯಕ್ತಿತ್ವಗಳು ಬಿಚ್ಚಿಕೊಳ್ಳುತ್ತಾ ಹೋಗುತ್ತವೆ.

ಅಪ್ರಿಯವಾದರೂ ಸತ್ಯದ ವಿವಿಧ ಮುಖಗಳನ್ನು ಹೇಳುವಲ್ಲಿ ಹಲವಾರು ಕಡೆಗೆ ಲೇಖಕರು ಸಾಕಷ್ಟು ದಿಟ್ಟತನ, ತೋರಿಸುತ್ತಾರೆ. ಸಾವಿನ ಸಂದರ್ಭದಲ್ಲೂ ಪ್ರಾವಿಡೆಂಟ್ ಹಣದ ಬಗ್ಗೆ ಯೋಚಿಸುವ ಸಣ್ಣತನ, ತನ್ನ ಬಗ್ಗೆ ಹೆದರಿಕೆ ಮತ್ತು ಅನ್ಯಪ್ರೀತಿ ಇವೆರಡರ ನಡುವೆ ವ್ಯತ್ಯಾಸ ತಿಳಿಯದಿರುವುದು ಮುಂತಾದ ಕ್ಷಣಗಳನ್ನು ಹೇಳುತ್ತಾರೆ. ಆದರೆ, ಒಟ್ಟಾರೆಯಾಗಿ ಜೀವನದ ಸನ್ನಿವೇಶಗಳನ್ನು ಅರ್ಥಮಾಡಿಕೊಳ್ಳುವ ನೈತಿಕ ಒತ್ತಡ ಕಡಿಮೆ. ಆದ್ದರಿಂದಲೇ, ಶಶಿಧರ, ರಮ ಮತ್ತು ನಿರೂಪಕನ ಪ್ರಣಯ ದೃಶ್ಯವನ್ನು ಕದ್ದು ನೋಡಿರಬಹುದಾದ ಸನ್ನಿವೇಶದಲ್ಲಿ ಅಪಾರ ಅಸ್ಪಷ್ಟತೆ ಗೊಂದಲ ಎದ್ದು ಕಾಣುತ್ತದೆ. ಕಡೆಯ ಕನಸಿನ ಸನ್ನಿವೇಶವೂ ಇಂಥ ನೈತಿಕ ಸಂದಿಗ್ಧತೆಯಿಂದಲೇ ನರಳುತ್ತದೆ.

ಟಾಲ್‌ಸ್ಟಾಯ್‌ನ 'ಅನ್ನಾಕರೇನೀನಾ' ಬಗ್ಗೆ ವಿಮರ್ಶಕರು ಮಾತೊಂದನ್ನು ಹೇಳುತ್ತಾರೆ. ಯಾವ ಪಾತ್ರವೂ ಅವನಲ್ಲಿ ಪ್ರೇಮಕ್ಕೆ ಪೂರ್ಣ ಅನರ್ಹವಾದದ್ದಲ್ಲ ಎಂದು. ಜೊತೆಗೆ, ವಿವಿಧ ಮಾನವ ಪಾತ್ರಗಳ ಬಗ್ಗೆ ಅವನಿಗಿದ್ದ ನಿರ್ದಿಷ್ಟ ಕಲ್ಪನೆ, ವಾಸ್ತವವಾದಿ ಕಾದಂಬರಿಯಲ್ಲಂತೂ ಇದೇ ಒಂದು ಕಾದಂಬರಿಯ ಪರೀಕ್ಷೆ ಎಂದರೂ ಸಲ್ಲುತ್ತದೆ. ಇಲ್ಲಿ ಶಶಿಧರ ಮೂಲತಃ ನಿರೂಪಣೆಯಲ್ಲಿ ಪ್ರೀತಿ ಮತ್ತು ಅನುಕಂಪ ಗಳಿಂದ ಹೊರಗೇ ಉಳಿಯುತ್ತಾನೆ. ಒಂದು ಬಗೆಯ ಇರಿಸುಮುರಿಸುತನವೇ ಶಶಿಧರನ ಪಾತ್ರವನ್ನು ನಿರ್ಮಿಸಿರುವ ದ್ರವ್ಯ. ಕಾದಂಬರಿಯಲ್ಲಿ ಪ್ರೀತಿ ಎನ್ನುವುದು ಸಮಾನವಾಗಿ ಹಬ್ಬಿಲ್ಲ.

ನಿರೂಪಕನ ಒದ್ದಾಟ, ಗೊಂದಲ, ಗಾಢ ಪ್ರೀತಿಯ ಕೊರತೆ ಕಾದಂಬರಿಯನ್ನೇ ದುರ್ಬಲವನ್ನಾಗಿಸಿದೆ. ನಿರೂಪಕನ ಮನಸ್ಸಿನ ಮಿತಿಗೇ ಕಾದಂಬರಿಯೂ ನಿಲ್ಲುತ್ತದೆ. ಅದರಾಚೆಗೆ ಬೆಳೆಯದೇ ಇರುವುದರಿಂದ ಕಾದಂಬರಿ ಓದುವಾಗ ಒಂದು ಬಗೆಯ ಪರಚಿಕೆ ಅನುಭವ ಉದ್ದಕ್ಕೂ ಆಗುತ್ತದೆ.

ವಿಕಾಸ : ಪಿ. ವಿ. ನಾರಾಯಣ

ಈ ಕಾದಂಬರಿಯ ನಾಯಕ ಭೋಳೆ ಸ್ವಭಾವದವನು. ಲೈಂಗಿಕ ಅನುಭವಕ್ಕೆ ಅವನು ಜಾಗೃತನಾಗುವುದೇ ಈ ಕಾದಂಬರಿಯ ಪ್ರಮುಖ ವಸ್ತು. ಆದರೆ, ಇದು ನೇರವಾಗಿ ಕಾಣಿಸಿಕೊಳ್ಳುತ್ತದೆ ಎಂದೇನಲ್ಲ. ಮೊದಲ ಪುಟದಿಂದ ಕಡೆಯತನಕ ಇದೇ ಅಬ್ಸೆಷನ್ ಕಾದಂಬರಿಯನ್ನು ಕಾಡಿದೆ. 'ಬ್ರಹ್ಮಚರ್ಯದ' ಪ್ರಸ್ತಾಪದಿಂದ ಕಾದಂಬರಿ ಪ್ರಾರಂಭವಾಗಿ ಸತ್ಯಕ್ಕನನ್ನು ತಬ್ಬಿಕೊಳ್ಳುವುದರಿಂದ ಮುಗಿಯುತ್ತದೆ. ಕಥಾನಾಯಕನ ಸಂಕೋಚ ಕಾದಂಬರಿಕಾರರಿಗೂ ಕಾಡಿರುವುದರಿಂದ ಕಡೆಯಲ್ಲಿ ಆಕೆಯ ಜೊತೆ ಅವನು ಕೂಡುತ್ತಾನೆ ಎಂಬ ಅಂಶದ ಸೂಚನೆಯಿಂದ ಕಾದಂಬರಿ ಮುಗಿಯುತ್ತದೆ. ಕೂಡುವ ಘಟನೆಗೆ ಕಾದಂಬರಿ ಬಂಧದ ದೃಷ್ಟಿಯಿಂದ ಇರಲೇಬೇಕಾದ ಮಹತ್ವವಿಲ್ಲ.

ಈ ಕಾದಂಬರಿಯ ಮುಖ್ಯ ಕೊರತೆಯೆಂದರೆ ವಿವರಗಳ ಗೈರುಹಾಜರಿ. ಕಾಮಕ್ಕೆ ಜಾಗೃತವಾಗುವ ಅನುಭವವನ್ನು ಸಣ್ಣಕತೆಯ ಹರಹಿನಲ್ಲಿ ಅತ್ಯಂತ ತೀವ್ರ ವಾಗಿ ಹಿಡಿದಿಟ್ಟಿರುವ ಅನೇಕ ಕಥೆಗಳು ಇಲ್ಲಿ ನೆನಪಾಗುತ್ತವೆ. ಉದಾ. ಗೊಮ್ಮಟೇಶ. ನಾಯಕನ ಬಗೆಗೆ ಎಲ್ಲವನ್ನೂ ಸ್ಪಷ್ಟವಾಗಿ ಕಾದಂಬರಿಕಾರರೇ ಹೇಳಿ ಬಿಡುತ್ತಾರೆ. ವಿವರಗಳಿಂದ ಓದುಗನೇ ಗ್ರಹಿಸುವುದಕ್ಕೆ ಏನೂ ಉಳಿದಿರುವುದಿಲ್ಲ. ನ್ಯಾಚುರಲಿಸ್ಟ್ ಬರವಣಿಗೆಯ ಅತ್ಯಂತ ದೌರ್ಬಲ್ಯ ಇದು. ಹೀಗಾಗಿ 'ವಿಕಾಸ' ಸಲೀಸಾಗಿ ಓದಿಸಿಕೊಂಡು ಹೋಗುತ್ತದೆಯಾದರೂ, ಗಾಢ ಅನುಭವವನ್ನೇನೂ ನೀಡುವುದಿಲ್ಲ.

ದೊಡ್ಡ ಕಲೆಗೂ ದೊಡ್ಡದಲ್ಲದ ಕಲೆಗೂ ಇರುವ ವ್ಯತ್ಯಾಸ ಇಂಥ ಕಡೆಗಳಲ್ಲಿ ಒಡೆದು ಕಾಣುತ್ತದೆ. ಬೇರೆ ನಾಟಕಕಾರರು ಹಡಗು ಸುಟ್ಟು, ಊರು ಸುಟ್ಟು ದಾಂಧಲೆ ಮಾಡಿದರೆ, ಶೇಕ್ಸ್‌ಪಿಯರ್ ಅದಕ್ಕಿಂತ ಗಾಢ ಪರಿಣಾಮವನ್ನು ಕೇವಲ

ಒಂದು ಕರ್ಚೀಫು ಬಿಳಿಸುವುದರಿಂದ ಮಾಡುತ್ತಾನೆ. ಗೊಮ್ಮಟೇಶ ಆರೇಳು ಪುಟದಲ್ಲಿ ಮಾಡುವುದನ್ನು ಈ ಕಾದಂಬರಿ 127 ಪುಟಗಳಲ್ಲಿ ಮಾಡಲು ಯತ್ನಿಸಿದೆ.

ಕ್ರಾಂತಿ : ಚೈತನ್ಯ

ಬಹಳ ಕಷ್ಟಬಿದ್ದು ಈ ಕಾದಂಬರಿಯನ್ನು ಓದಬೇಕು. ಕಾರವಾರ ಜಿಲ್ಲೆಯ ಹಳ್ಳಿಯಾದ 'ನಾಗಠಾಣ'ದಲ್ಲಿ ಕಾದಂಬರಿಯ ಕ್ರಿಯೆ ನಡೆಯುತ್ತದೆ. ಕೇಶವಮೂರ್ತಿ ಎಂಬ ತರುಣ ಮೈಸೂರಿನಿಂದ ಇಲ್ಲಿಗೆ ಉಪಾಧ್ಯಾಯನಾಗಿ ಬರುತ್ತಾನೆ. ಈತ ಆದರ್ಶವಾದಿ ಬೇರೆ. ಸರಿ, ಸಿನೆಮಾಕ್ಕೆ ಬೇಕಾದ ಅತ್ಯುತ್ತಮ ನಾಯಕನ ಗುಣಗಳೆಲ್ಲವೂ ಈತನಲ್ಲಿವೆ. ಶಾಲೆ, ಹಳ್ಳಿಯ ರಾಜಕೀಯ, ಪುಡಾರಿಗಿರಿ ಎಲ್ಲವೂ ಈತನನ್ನು ಸುತ್ತುವರಿಯುತ್ತವೆ.

ಇಲ್ಲಿರುವ ಪಾತ್ರಗಳೆಲ್ಲವೂ ಕಪ್ಪು-ಬಿಳುಪು ರೀತಿಯವು. ಹೀಗಾಗಿ. ಒಂದೊಂದು ಪಾತ್ರ ಪರಿಚಯವಾದ ನಾಲ್ಕೇ ಸಾಲುಗಳಲ್ಲಿ ಅದರ ಬಗ್ಗೆ ಆಸಕ್ತಿ ಹೊರಟು ಹೋಗುತ್ತದೆ. ಸರಿ, ಏನೇನೊ ತರಲೆಗಳು ಪ್ರಾರಂಭವಾಗಿ, ನಾಯಕನ ಆದರ್ಶವಾದಿತ್ವಕ್ಕೆ ಸವಾಲು ಬರುತ್ತದೆ. ಸಿನಿಮೀಯವಾದ ಅನೇಕ ಘಟನೆಗಳು ನಡೆಯುತ್ತವೆ. ಕಡೆಗೆ ಖಳನಾಯಕನಾದ ಗಣಪನಾಯಕನ ಕೊಲೆಯಾಗುತ್ತದೆ. ಈ ಮಧ್ಯೆ ನಾಯಕನ ಪ್ರೇಮ-ಗೀಮ ಮದುವೆ-ಗಿದುವೆ ಇತ್ಯಾದಿ ಎಲ್ಲವೂ ನಡೆದಿರುತ್ತದೆ. ನಡುವೆ ಸಿದ್ಧಿ ಜನಾಂಗದವರೂ ದಂಗೆ ಏಳುತ್ತಾರೆ. ಕಡೆಗೆ, ಕೇಶವಮೂರ್ತಿ ಸಂಸಾರ ನಡೆಸಲು ಉದ್ಯುಕ್ತನಾಗುತ್ತಾನೆ.

ಇಂಥ ಕಾದಂಬರಿ ಬಗ್ಗೆ ಏನೆಂದು ವಿಮರ್ಶೆ ಬರೆಯುವುದು? ಪಾತ್ರ, ಬಂಧ, ಭಾಷೆ ಎಲ್ಲವೂ ಸಪ್ಪೆಯಾಗಿ ಸತ್ತು ಹೋಗಿವೆ. ಇಂಥ ಸ್ಫೋಟಕವಸ್ತುವನ್ನು ಕೂಡಾ ಕುಲಗೆಡಿಸಿ ಬಿಟ್ಟ ಲೇಖಕರ ಪ್ರತಿಭೆ ಕಂಡು ಭಯವಾಗುತ್ತದೆ. ಶ್ರೀಯುತರ ಕೈಯಿಂದ ಇನ್ನೇನು ಕಾದಿದೆಯೊ. ಸಾಹಿತ್ಯ ವಿಮರ್ಶೆಯ ಕಸುಬಿಗೆ ಇಳಿದ ಮೇಲೆ ಬಂದದ್ದೆಲ್ಲಾ ಬರಲಿ ಎಂದು ಕಾಯುವುದೊಂದೇ ದಾರಿ.

ಉನ್ನತ ಸರಸ್ವತಿ : ಚೈತನ್ಯ

'ನಾಗಠಾಣ'ದಲ್ಲಿ ಕ್ರಾಂತಿಮಾಡಿಸಿದ 'ಚೈತನ್ಯ'ರು ಉನ್ನತ ಶಿಕ್ಷಣವನ್ನು ಕುರಿತು ಬರೆಯಲು ಕ್ಯಾಂಪಸ್ಸಿಗೆ ಬಂದಿದ್ದಾರೆ. ಅಲ್ಲಿ ಕ್ರಾಂತಿ, ಇಲ್ಲಿ ಹಾಸ್ಯ!

ದೊಡ್ಡವಾಡ ಎಂಬ ಸ್ಥಳವೇ ಈ ಕಾದಂಬರಿಯ ಪುಣ್ಯಕ್ಷೇತ್ರ. ಯೂನಿವರ್ಸಿಟಿ ಸಂಸ್ಥಾಪನೆ, ಅಲ್ಲಿಯ ರಾಜಕೀಯ, ಧರ್ಮ, ಜಾತಿಗೀತಿ ಇತ್ಯಾದಿಗಳೆಲ್ಲವನ್ನೂ ಚೈತ್ಯನರು ಬರೆಯಲು ಯತ್ನಿಸಿದ್ದಾರೆ. ಅನೇಕ ರೀತಿಯ ಘಟನೆಗಳನ್ನು ತಂದಿದ್ದಾರೆ. ಅಯೋಗ್ಯರು ವಿಜೃಂಭಿಸುವುದು, ನಿಷ್ಠಾವಂತರು ಹಾಳಾಗುವುದು ಎಲ್ಲವೂ ಬರುತ್ತದೆ ಆದರೆ, ಕೆಲವೊಮ್ಮೆ ಅಸಂಭಾವ್ಯತೆಯ ಗಡಿ ಮುಟ್ಟುತ್ತವೆ. ಉದಾಹರಣೆಗೆ

ಅಕ್ಕಿಯವರಿಗೆ ಪ್ರಕಾಶಕನೊಬ್ಬ ಖೋಟಾನೋಟು ನೀಡಿದ ಪ್ರಸಂಗ; ಕಡೆಗೆ, ಸುಂಕನ ಬಸಪ್ಪನವರ ಹೆಸರಿನಲ್ಲಿ ಅಕ್ಕಿಯವರ ಪುಸ್ತಕ ಪ್ರಕಟವಾದದ್ದು, ವಿದ್ಯಾಸಂಸ್ಥೆಯ ಕಟ್ಟಡಕ್ಕೆ ಬೆಂಕಿ ಬಿದ್ದದ್ದು ಇತ್ಯಾದಿ ಘಟನೆಗಳು ಅಸಂಬದ್ಧವೆನಿಸುತ್ತದೆ. ಲೇಖಕರು ಎಷ್ಟೇ ಒದ್ದಾಡಿ ದುರಂತ ಛಾಯೆ ಮೂಡಿಸಲು ಒದ್ದಾಡಿದರೂ, ಅದು ಅಥೆಂಟಿಕ್ ಆಗದೆ ಹೋಗುತ್ತದೆ.

ಮತ್ತೆ ಊರು ಸುಡುವ, ಹಡಗು ಸುಡುವ ಕಲ್ಪನೆಗೂ, ಬರೀ ಕರ್ಚೀಪು ಬೀಳಿಸಿ ಕೋಲಾಹಲವೆಬ್ಬಿಸುವ ಶೇಕ್ಸ್‌ಪಿಯರನ ಪ್ರತಿಭೆಗೂ ಇರುವ ವ್ಯತ್ಯಾಸ ನೆನಪಾಗುತ್ತದೆ. ಸುಡದೆ, ಸಾಯಿಸದೆ ಇದೇ ಪರಿಸರದ ಅನುಭವವನ್ನು 'ಅಕ್ಟೋಪಸ್' 'ಕಾಲೇಜುರಂಗ' ಮುಂತಾದ ಕೃತಿಗಳು ಮಾರ್ಮಿಕವಾಗಿ ಹೇಳುತ್ತವೆ.

ವಿಡಂಬನಾ ಕಾದಂಬರಿ ಕೂಡಾ ಅತ್ಯಂತ ಕಷ್ಟಸಾಧ್ಯವಾದ ಬರವಣಿಗೆ. ಉತ್ಪ್ರೇಕ್ಷೆ ಮಾಡಿ ಗಬ್ಬೆಬ್ಬಿಸುತ್ತಾ ಹೋದರೆ ನಿಜವಾದ ದುರಂತ, ದುಃಖ ದುಮ್ಮಾನ ಗಳು ಕಾಣೆಯಾಗಿ ಹೋಗುತ್ತವೆ. ವಿಡಂಬನೆ ಎಂದೂ ವಾಸ್ತವದ ಸಂಪರ್ಕವನ್ನು ಬಿಟ್ಟು ಕೊಡಬಾರದು. ಇದಾಗದಿದ್ದರೆ ಅನ್ಯೋಕ್ತಿಯ ಮಾರ್ಗದಲ್ಲಿ, ಯುಟೋಪಿಯ ಮಾರ್ಗದಲ್ಲಿ ಒಳ್ಳೆಯ ಕಾದಂಬರಿಕಾರರು ಇಂಥದನ್ನೇ ಪ್ರಯತ್ನಿಸಿದ್ದಾರೆ. ಈ ಎಲ್ಲ ಕಡೆಗಳಲ್ಲಿ ತೀವ್ರ ನೈತಿಕ ಸಿಟ್ಟು ಮತ್ತು ಕಲೆ ಒಟ್ಟೊಟ್ಟಿಗೇ ಹೋಗುತ್ತದೆ.

ಈ ಯಾವ ಗುಣಗಳೂ ಎಳ್ಳುಕಾಳಿನಷ್ಟೂ ಇರದೇ ಇರುವುದರಿಂದ ಈ ಕೃತಿ ಕೆಟ್ಟ ಬರವಣಿಗೆಯ ಶ್ರೇಷ್ಠ ಮಾದರಿಯಾಗಿದೆ.

ಕಣ್ಣಿದ್ದೂ ಕಾಣರು : ಶಿವರಾಮಕಾರಂತ

ಕಾರಂತರರದು ಮೂಲತಃ ತೀಕ್ಷ್ಣ ಸಾಮಾಜಿಕ ಪ್ರತಿಭೆ. ಎಲ್ಲವನ್ನು ಚುಚ್ಚುತ್ತಾ ಸಂದೇಹಿಸುತ್ತಾ ಹೋಗುವ ಮನಸ್ಸು ಅವರದು. ಎಲ್ಲಿಯತನಕ ಜೀವನದ ಸೂಕ್ಷ್ಮಾತಿ ಸೂಕ್ಷ್ಮಗಳಿಗೆ ಉಕ್ಕುತ್ತಾ ವಿಸ್ಮಯದಿಂದ ಪ್ರತಿಸ್ಪಂದಿಸುತ್ತಾರೆ, ಅಲ್ಲಿಯತನಕ ಈ ರೀತಿಯ ಕಾದಂಬರಿಕಾರರು ಮಹತ್ವದ್ದನ್ನು ಸೃಷ್ಟಿಸಬಲ್ಲರು. ಕಾರಂತರ ಶ್ರೇಷ್ಠ ಬರವಣಿಗೆ ಈ ರೀತಿಯದು. ಆದರೆ, ಉಕ್ಕುವಿಕೆ ಕಡಿಮೆಯಾದ ಘಳಿಗೆಗಳಲ್ಲಿ ವಿದ್ಯುತ್ ಹರಿಯದೆ ಬರೀ ಕಬ್ಬಿಣದ ತಂತಿಯಾಗಿ ಬಿಡುತ್ತದೆ ಬರವಣಿಗೆ. ಸನ್ನಿವೇಶ ನಿರ್ಮಾಣ, ಕಥನ ಕ್ರಮ ಒಟ್ಟಾರೆಯಾಗಿ ಒರಟಾಗಿಬಿಡುತ್ತವೆ. ಜೀವನಾಸಕ್ತಿ ಬದಲಿಗೆ ವೈಚಾರಿಕ ಆಸಕ್ತಿ ಕಾಣುತ್ತೇವೆ. ಕಾರಂತರಲ್ಲಿ ಈಚೆಗೆ ಈ ರೀತಿಯ ಬರವಣಿಗೆ ಕೂಡಾ ಧಂಡಿ ಯಾಗಿದೆ. ಈ ಕಾದಂಬರಿ ಅಂಥ ಒಂದು ಕೃತಿ.

ಧರ್ಮದ ಬಗೆಗೆ ಕಾರಂತರ ದೃಷ್ಟಿಕೋನ ಬಹುಮಟ್ಟಿಗೆ ಆಂಥ್ರೊಪಾಲೊಜಿ ಕಲ್ ನೆಲೆಯಿಂದಲೇ ಹುಟ್ಟುವಂಥದು. ಹೀಗಾಗಿ, ಧರ್ಮದ ಬಗೆಗೆ, ಧಾರ್ಮಿಕ ಶಕ್ತಿಗಳ ಬಗೆಗೆ ವೈಚಾರಿಕ ಅನಾದರ, ಭಾವುಕ ನಿರಾಸಕ್ತಿ, ಅವರಲ್ಲಿ ಹೆಚ್ಚು. ಈ ದೃಷ್ಟಿ ಕೋನವೇ ಈ ಕಾದಂಬರಿಯನ್ನು ಕಟ್ಟಿದೆ.

ಈ ಕಾದಂಬರಿಯಲ್ಲಿ ಕೂಡಾ ಕಾರಂತರ ವಿಶೇಷ ಗುಣವಾದ ಅಥೆಂಟಿಸಿಟಿಯನ್ನು ಕಾಣಬಹುದು. ಆದರೆ, ಇಲ್ಲಿ ಅದು ಹಳ್ಳಿಯ ಜನರ ಸಮಸ್ತ ವ್ಯವಹಾರವನ್ನು ಬಲ್ಲ ಶಾನುಭೋಗನ ಅಧಿಕೃತತೆ. ಕಾದಂಬರಿಕಾರನೊಬ್ಬನ ಸೂಕ್ಷ್ಮಪ್ರಜ್ಞೆ, ಸಹಾನುಭೂತಿ, ಆನ್ಮಪ್ರೀತಿಯಿಂದ ಬಂದದ್ದಲ್ಲ. ಯಾವ ವಿವರವೂ ಸನ್ನಿವೇಶವೂ ಇಲ್ಲಿ ಉಲ್ಲಾಸದಿಂದ, ವಿಸ್ಮಯದಿಂದ ಬಂದದ್ದಲ್ಲ. ಗಣೇಶನ ಬದುಕನ್ನು ಉತ್ಸಾಹದಿಂದ ಹಿಂಬಾಲಿಸಬೇಕು ಅಂತ ಅನ್ನಿಸುವುದೇ ಇಲ್ಲ.

ಅನೇಕ ರೀತಿಯ .ಪಾತ್ರಗಳು ಇಲ್ಲೂ ಬಂದು ಹೋಗುತ್ತಾರೆ. ರಾಮಕೃಷ್ಣ ಹೆಗಡೆ, ಸುನಾಲಿನಿ ಇಬ್ಬರು ಮಾತ್ರ ಸಾಕಷ್ಟು ಗಟ್ಟಿತನವನ್ನು ಉಳ್ಳ ಪಾತ್ರಗಳು. ಜೊತೆಗೆ, ಜೀವನದ ಅನೇಕ ಕ್ಷೇತ್ರಗಳಿಂದ ಪಾತ್ರಗಳು, ಸನ್ನಿವೇಶಗಳು ಬರುವುದರಿಂದ ಒಂದು ಬಗೆಯ ಆಸಕ್ತಿಯನ್ನು ಕಾದಂಬರಿ ಹುಟ್ಟಿಸುತ್ತದೆ ಅಲ್ಲಲ್ಲಿ.

ಈ ಕಾದಂಬರಿಯ ನಿಜವಾದ ಕಂಪನಕ್ಷೇತ್ರ ಇರುವುದು ಧರ್ಮ ಉಳಿದ ಸಾಮಾಜಿಕ ಸಂಸ್ಥೆಗಳೊಂದಿಗೆ ಬೆರೆಯುವಲ್ಲಿ. ಪವಾಡಗಳು, ಅತೀಂದ್ರಿಯ ವಿದ್ಯಮಾನಗಳು, ಸಮಾಜದ ಬೀಳುವ ಪರಿಣಾಮವನ್ನು ಕಾರಂತರು ಸೂಕ್ಷ್ಮವಾಗಿ ಪರಿಶೀಲಿಸುತ್ತಾರೆ. ಈ ದೃಷ್ಟಿಯಿಂದ ಕಾದಂಬರಿಯ ಕಡೆಯ 100 ಪುಟ ಸಾಕಷ್ಟು ತೀವ್ರವಾಗಲು ಯತ್ನಿಸುತ್ತದೆ.

ಆದರೆ, ಈ ಕಾದಂಬರಿಯನ್ನು ಓದುವಾಗ ನಮಗೆ ನೆನಪಾಗುವುದು ಕಾರಂತರ ಅತ್ಯುತ್ತಮ ಕಾದಂಬರಿಗಳಾದ 'ಮರಳಿಮಣ್ಣಿಗೆ', 'ಬೆಟ್ಟದಜೀವ' ಇತ್ಯಾದಿ. ಕಾದಂಬರೀ ಪ್ರಕಾರವನ್ನು ಕಡೆಗಣಿಸಿದ್ದರಿಂದ ಈ ಬಗೆಯ ಅಸೂಕ್ಷ್ಮತೆ ಹುಟ್ಟಿತೇ ? ಏಕೆಂದರೆ, ಈ ಕಾದಂಬರಿಯಲ್ಲಿ ಇಷ್ಟೊಂದು ವಿಸ್ತಾರವಾದ ಪಾತ್ರ, ಪರಿಸರ, ವೈವಿಧ್ಯವಿದ್ದರೂ ಏಕೊ ಎಲ್ಲ ಜಡವಾದಂತೆ ಕಾಣುತ್ತದಲ್ಲ !

ಕಾದಂಬರಿ ತನ್ನನ್ನು ಮರೆಯುವ ಲೇಖಕನ ಮೇಲೆ ಹೀಗೆ ಪ್ರತೀಕಾರ ತೆಗೆದುಕೊಳ್ಳುತ್ತದೆಯೇ ?

—ಡಿ. ಆರ್. ನಾಗರಾಜ್

○ ○ ○ ○ ○ ○ ○ ○

ಕೃ.ನ. ಮೂರ್ತಿಯವರ 'ಹಬ್ಬಿದಾ ಮಲೆ ಮಧ್ಯದೊಳಗೆ' ಎಂಬ ಕಾದಂಬರಿ ನೀಲಗಿರಿಯ ಆದಿವಾಸಿಗಳಾದ ತೋಡರ ಸಂಪ್ರದಾಯ, ಸಂಸ್ಕೃತಿ, ಧರ್ಮ, ದೇವರು

ಗುಂಪಿನ ನಾಯಕರ ನಡವಳಿಕೆ ಮತ್ತು ಅವರ ಜೀವನದ ರೀತಿ ನೀತಿಗಳನ್ನು ವಿವರವಾಗಿ ಚಿತ್ರಿಸುತ್ತದೆ. ಇವರೊಂದಿಗೆ ಮೂಲ ನಿವಾಸಿಗಳು ಗುಂಪು ಬಿಟ್ಟು ಅಲ್ಲಲ್ಲಿ ಮಾಡುಕಟ್ಟಿಕೊಂಡು ಬಾಳುತ್ತಿರುವ ಸೋಲಿಗರು, ಕೊರಗರು ಈ ಕಾದಂಬರಿಯಲ್ಲಿ ಚಿತ್ರಿತರಾಗಿದ್ದಾರೆ. ಅನಕ್ಷರಸ್ಥರಾದರೂ ಅನಾಗರಿಕರಲ್ಲದ ಆದಿವಾಸಿಗಳ ಜೀವನ ಕ್ರಮವನ್ನು ಇಲ್ಲಿಸ ಕಾಲ್ಪನಿಕ ಕಥೆಗೆ ಲೇಖಕರು ಆಧಾರವಾಗಿಟ್ಟುಕೊಂಡಿದ್ದಾರೆ.

ಅಲ್ಲದೆ, ಋಷಿ ಪುತ್ರನೆಂದು ಹೇಳಲಾದ ವಾಲ್ಮೀಕಿಯನ್ನು ಆದಿವಾಸಿಗಳ ಗುಂಪೊಂದು ಕದ್ದು ತಂದು ತಮ್ಮೊಡನೆ ಅವನನ್ನು ಸಾಕಿಕೊಂಡು ವೀರನಾಯಕನಾಗಿ ಬೆಳೆಸಿದರೆಂಬ ಕಲ್ಪಿತ ಕಥೆಯೊಂದನ್ನು ಈ ಕೃತಿಯಲ್ಲಿ ತಂದಿದ್ದಾರೆ. ಕರುಣ ಕಾಮಿನಿ ಎಂಬ ಪ್ರೇಮಿಗಳನ್ನು ಲೇಖಕರು ವಾಲ್ಮೀಕಿ ಮತ್ತು ಅವನ ಹೆಂಡತಿಯ ಪ್ರತೀಕವಾಗಿ ಚಿತ್ರಿಸಿದ್ದಾರೆ. ಗಂಡನ ಪಾಪ ಜೀವನಕ್ಕೂ ಹೆಂಡತಿಗೂ ಯಾವ ಸಂಬಂಧವಿಲ್ಲವೆಂಬ ಕಾಮಿನಿಯ ಒಂದು ಮಾತು ಕರುಣನ ಆತ್ಮೋದ್ಧಾರಕ್ಕೆ ಕಾರಣವಾಯಿತೆಂಬ ಘಟನೆ ನಾಟಕೀಯವಾಗಿದೆ. ಇಲ್ಲಿ ಬಳಸಿರುವ ಗ್ರಾಮೀಣ ಪ್ರದೇಶದ ಭಾಷೆಯಲ್ಲಿ ಮಣ್ಣಿನ ವಾಸನೆ ಸೂಸುತ್ತಿದೆ. ಒಟ್ಟಿನಲ್ಲಿ ಆದಿವಾಸಿಗಳ ಜೀವನ ಕ್ರಮವನ್ನು ವಿವರವಾಗಿ ನೀಡಿರುವ ಈ ಕೃತಿಯಲ್ಲಿ ವೈವಿಧ್ಯವಿದೆ. ಚರ್ವಿತ ಚರ್ವಣದ ವಸ್ತು-ಪಾತ್ರಗಳನ್ನೊಳಗೊಂಡ ಕಾದಂಬರಿಗಳನ್ನೇ ಹೆಚ್ಚು ಹೆಚ್ಚು ಓದುತ್ತಿರುವ ಇಂದಿನ ಓದುಗರಿಗೆ ಈ ಕೃತಿ ಹೊಸ ಅನುಭವವನ್ನು ನೀಡುತ್ತದೆ.

'ಸ್ನೇಹಸೌರಭ' ವಿ. ಆರ್. ಅಡಕೆಯವರ ಪ್ರಥಮ ಕಾದಂಬರಿ. ಖಾಸಗಿ ಶಿಕ್ಷಣ ಸಂಸ್ಥೆಯೊಂದರಲ್ಲಿ ತಾಂಡವವಾಡುವ ಆಡಳಿತ ವ್ಯವಸ್ಥೆಯ ಭ್ರಷ್ಟಾಚಾರ, ಅನೀತಿ, ಹಣದ ದುರುಪಯೋಗ, ಹೆಣ್ಣಿನ ಮಾನಹಾನಿ-ಇವೇ ಮೊದಲಾದ ಸಮಸ್ಯೆಗಳ ಸುತ್ತ ಲೇಖಕರು ತಮ್ಮ ಕಾದಂಬರಿಯನ್ನು ಹೆಣೆದಿದ್ದಾರೆ. ಆದರ್ಶ ಅಧ್ಯಾಪಕನಾಗಬೇಕೆಂಬ ಹಿರಿಯಾಸೆಯನ್ನು ಹೊತ್ತ ವಿದ್ಯಾವಂತ ತರುಣನೊಬ್ಬ ಅನಿವಾರ್ಯವಾಗಿ ಖಾಸಗಿ ಶಿಕ್ಷಣ ಸಂಸ್ಥೆಯನ್ನೂ ಸೇರಿ ಅಲ್ಲಿನ ಆಡಳಿತ ವರ್ಗದವರ ಕಪಿಮುಷ್ಟಿಯಲ್ಲಿ ಸಿಕ್ಕಿ ಪರದಾಡುವ ಚಿತ್ರ ಇಲ್ಲಿದೆ. ಇಂದಿನ ಶಿಕ್ಷಣ ಸಂಸ್ಥೆಯ ಆಡಳಿತ ವೈಖರಿ ನೈಜವಾಗಿ ಮೂಡಿ ಬಂದಿದೆ. ವ್ಯವಸ್ಥೆಯ ಕ್ರೂರ ಮುಖಕ್ಕೆ ಈ ಕೃತಿ ಕನ್ನಡಿ ಹಿಡಿದಿದೆ. ನಾಯಕನ ಬಾಳಿನ ಕಹಿ ಅನುಭವದ ಮಧ್ಯವದಲ್ಲಿಯೂ ನಾಯಕನ ಪ್ರಣಯ ಜೀವನ ಮತ್ತು ಅವನ ಆಪ್ತ ಸ್ನೇಹಿತನ ಹೃದಯ ಶ್ರೀಮಂತಿಕೆ, ತ್ಯಾಗದ ಹಿರಿಮೆ-ಇವು ನಾಯಕನ ಬದುಕಿನಲ್ಲಿ ಜೇನಿನ ಸವಿ ನೀಡುತ್ತವೆ. ಒಂದು ವಿಚಿತ್ರವೆಂದರೆ ಇಲ್ಲಿ ಉದ್ಭವಿಸುವ ಸಮಸ್ಯೆಗಳಿಗೆಲ್ಲಾ ಬಹುಬೇಗ ಪರಿಹಾರ ಒದಗಿ ಈ ಕೃತಿ ಸುಖಾಂತವಾಗುತ್ತದೆ. ಹೀಗಾಗಿ ಈ ಕಾದಂಬರಿ ಗಂಭೀರ ಸಮಸ್ಯೆಯನ್ನು ಎತ್ತಿಕೊಂಡರೂ

ಅದು ಸರಳೀಕೃತಗೊಂಡು ಪರಿಹಾರ ಕಂಡುಕೊಳ್ಳುವುದುರಿಂದ ಓದುಗರ ಮೇಲೆ ತೀವ್ರ ಪರಿಣಾಮವನ್ನುಂಟು ಮಾಡುವ ಅವಕಾಶವನ್ನು ಕಳೆದುಕೊಂಡಿದೆ. ಆದರೆ ಪ್ರಯತ್ನ ಪಟ್ಟರೆ ಇವರಿಂದ ಇನ್ನಷ್ಟು ಉತ್ತಮ ಕೃತಿಗಳನ್ನು ನಿರೀಕ್ಷಿಸಬಹುದೆಂಬ ಭರವಸೆಯನ್ನು ಲೇಖಕರು ತಮ್ಮ ಪ್ರಥಮ ಪ್ರಯತ್ನದಲ್ಲಿ ತೋರಿಸಿದ್ದಾರೆ.

ಸದ್ಯೋಜಾತ ಮೂರ್ತಿಯವರ 'ಪ್ರಭಶುಭ ಶೋಭ' ಭಾಷೆ, ನಿರೂಪಣಾಶೈಲಿ ತೆಳುವಾದ ವಸ್ತು, ಸೊರಗಿದ ಪಾತ್ರಗಳು-ಈ ಎಲ್ಲ ದೃಷ್ಟಿಯಿಂದ ತೀರಾ ಬಾಲಿಶವಾದ ಕೃತಿ. ಕಾದಂಬರಿಯ ಮೊದಲ ಪುಟದಿಂದ ಕಡೆಯ ಪುಟದವರೆಗೆ ಪ್ರಭ ಎಂಬ ಪಾತ ಸಾಂಸಾರಿಕ ಜಂಜಾಟದಲ್ಲಿ ತೊಳಲಾಡುವ ಚಿತ್ರಣವಿದೆ. ಉಳಿದ ಪಾತ್ರಗಳಾದ ಶುಭ-ಶೋಭ ಕಾದಂಬರಿಯಲ್ಲಿ ಉಲ್ಲೇಖಿತರಾಗಿದ್ದಾರೆ. ಈ ಮೂರು ಪಾತ್ರಗಳ ಹೆಸರನ್ನು ಈ ಕಾದಂಬರಿಗಿಟ್ಟಿರುವ ಔಚಿತ್ಯವೇನೆಂದು ಅರ್ಥವಾಗುವುದಿಲ್ಲ. ತಮ್ಮ ಈ ಪ್ರಥಮ ಕಾದಂಬರಿಯನ್ನು ಲೇಖಕರು ಮೂವರು ವಿದ್ವಾಂಸರಿಗೆ ಅರ್ಪಿಸಿರುವುದೇ ಈ ಕೃತಿಯ ಒಂದು ವಿಶೇಷವೆಂದು ಹೇಳಬಹುದು.

ರಮಾನಂದ ಅಮೀನರ 'ಕಬ್ಬಿಣದ ಕಡಲೆ' ಅವಿವಾಹಿತ ತಾಯಿಯ ಸುತ್ತ ಕೇಂದ್ರೀಕೃತವಾದ ಕಾದಂಬರಿ. ಈ ಕಾದಂಬರಿಯ ಪಾತ್ರಗಳಾದ ಇಂದು ರಾಣಿ, ನೀಲಕಾಂತ, ಮೀನಾಕ್ಷಿ-ಈ ಮೂವರ ಹೆಸರಿನಲ್ಲಿ ಕತೆಯನ್ನು ನಿರೂಪಿಸಲಾಗಿದೆ. ಆದರೆ ಪಾತ್ರಗಳ ಮುಖಾಂತರವೇ ಅವರ ಅನುಭವಗಳ ಸುರುಳಿ ಬಿಚ್ಚಿಕೊಂಡಿದ್ದರೆ ನಿರೂಪಣಾತಂತ್ರ ಮೆಚ್ಚಬಹುದಾಗಿತ್ತು. ಆದರೆ ಇಲ್ಲಿ ಹಾಗಾಗಿಲ್ಲ. ಲೇಖಕರೇ ನಿರೂಪಕರಾಗಿದ್ದಾರೆ. ಯೌವನದಲ್ಲಿ ದುಡುಕಿ ತಾಯಿಯಾದ ಮೀನಾಕ್ಷಿಯನ್ನೂ ಶಶಿಕಾಂತನ ಮನೆಯವರು ತಮ್ಮ ಮಗನಿಗೆ ಮದುವೆ ಮಾಡಿಕೊಳ್ಳಲು ಸಮ್ಮತಿಸು ವುದಿಲ್ಲ. ಹೀಗೆ ಸಮಸ್ಯೆಯನ್ನು ಬೇರಿನಲ್ಲೇ ಚಿವುಟದೆ ಅದು ಹೆಮ್ಮರವಾಗಿ ಬೆಳೆಯಲು ಹಿರಿಯರು ಅವಕಾಶ ಮಾಡಿಕೊಡುತ್ತಾರೆ. ಮದುವೆಯಿಲ್ಲದೆ ತಾಯಿಯಾದ ಮೀನಾಕ್ಷಿ ಬದುಕನ್ನು ಧೈರ್ಯದಿಂದ ಎದುರಿಸಿ ತನ್ನ ಕಾಲಮೇಲೆ ತಾನು ನಿಲ್ಲುತ್ತಾಳೆ, ಆದರೆ ಇವಳಷ್ಟೇ ತಪು ಮಾಡಿ ಇದಕ್ಕೆ ಕಾರಣನಾದ ಶಶಿಕಾಂತ ಪರಿಸ್ಥಿತಿಯನ್ನು ಎದುರಿಸುವ ಧೈರ್ಯವಿಲ್ಲದೆ ನಿರುಪಾಯನಾಗುತ್ತಾನೆ. ಊರುಬಿಟ್ಟು ಹೋಗುತ್ತಾನೆ.

ಮುಂದೆ ಮೀನಾಕ್ಷಿಯ ಮಗುವಿಗೆ ನೀಲಕಾಂತ ತಂದೆಯ ಸ್ಥಾನದಲ್ಲಿ ನಿಲ್ಲು ವುದು ; ತನ್ನ ತಂದೆಯ ವಯಸ್ಸಿನವರಾದ ನೀಲಕಾಂತರನ್ನು ಮೀನಾಕ್ಷಿ ಮದುವೆ ಯಾಗುವುದು ಇವೆಲ್ಲ ನಿಜಜೀವನದಲ್ಲಿ ಅಸಂಭವ. ಹೀಗೆ ಉಗುರಿನಿಂದ ತೆಗೆಯ ಬಹುದಾಗಿದ್ದ ಸಮಸ್ಯೆ ಬೃಹದಾಕಾರವಾಗಿ ಬೆಳೆದು ಕಡೆಗೆ ವಿಚಿತ್ರ ಪರಿಹಾರ ಕಂಡು ಕೊಳ್ಳುತ್ತದೆ.

ಬಿ. ಎಲ್. ವೇಣು ಅವರ 'ಪರಾಜಿತ' ಹಿಂಸೆ, ಕ್ರೌರ್ಯ, ಲೈಂಗಿಕತೆ, ಕೊಲೆ-ಮೊದಲಾದ ಮಸಾಲೆಗಳಿಂದ ಕೂಡಿದ ಒಂದು ನಿಗೂಢ ರಹಸ್ಯಾತ್ಮಕ ಕಾದಂಬರಿ. ಕಮರ್ಷಿಯಲ್ ಚಿತ್ರಗಳಿಗೆ ಲಾಯಖ್ಖಾದ ಕತೆಯಿರುವ ಈ ಕೃತಿ ಒಂದು ಬಗೆಯ ಓದುಗರನ್ನು ರಂಜಿಸುತ್ತದೆ. ಕುತೂಹಲದಿಂದ ಓದಿಸಿಕೊಂಡು ಹೋಗುತ್ತದೆ. ತನ್ನ

ಹೆಂಡತಿಯ ಶೀಲ ಕೆಡಸಿ ಅವಳು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣನಾದ ತನ್ನ ಅಣ್ಣನನ್ನು ದ್ವೇಷಿಸುತ್ತಾನೆ. ಡಾ. ರಮೇಶ್ ಅಣ್ಣನ ಸಾವಿನ ನಂತರ ಅವನ ಮೂರು ಮಕ್ಕಳ ಅತ್ಯಾಚಾರವನ್ನು ತಡೆಗಟ್ಟುವಲ್ಲಿ ವಿಫಲನಾದ ಡಾ. ರಮೇಶ್ ಮೂವರನ್ನು ವಿಚಿತ್ರ ರೀತಿಯಲ್ಲಿ ಕೊಲೆ ಮಾಡಿ ಪೋಲಿಸರ ಕಣ್ಣಿಗೆ ಮಂಣ್ಣೆರಚಿ ಸಭ್ಯನಾಗಿ ಬದುಕು ತ್ತಿರುತ್ತಾನೆ. ಕಡೆಗೆ ಡಾ. ರಮೇಶ್ ತನ್ನ ಮಗ ಪೋಲೀಸ್ ಇನ್ಸ್‌ಪೆಕ್ಟರ್ ಶಂಕರನಿಂದ ಬಂಧಿತನಾಗಿ ಪರಾಜಿತನಾಗುವುದು ಈ ಕಾದಂಬರಿಯ ಮುಖ್ಯ ಎಳೆ. ಅಲ್ಲದೆ ಅಣ್ಣನ ವಂಶವನ್ನು ನಿರ್ವಂಶ ಮಾಡುತ್ತೇನೆಂದು ಹೊರಟು ಅವನ ಮೂರು ಮಕ್ಕಳನ್ನು ಒಬ್ಬೊಬ್ಬರನ್ನಾಗಿ ರಹಸ್ಯವಾಗಿ ಕೊಲೆ ಮಾಡಿದ ಡಾ. ರಮೇಶ್ ಕಡೆಗೆ ಅಣ್ಣನ ವಂಶದ ಕುಡಿಯೊಂದು (ಅಣ್ಣನ ಮಗ ಆನಂದನಿಗೆ ಅಕ್ರಮವಾಗಿ ಜನಿಸಿದ ಮಗು) ಶಂಕರನ ಜಾಣ್ಮೆಯಿಂದ ಉಳಿಯುತ್ತದೆ. ಇಲ್ಲಿಯೂ ರಮೇಶ್ ಪರಾಜಿತನಾಗು ತ್ತಾನೆ. ಒಂದೇ ಸೂರಿನಡಿಯಲ್ಲಿ ಅಪ್ಪ-ಮಗ ಇದ್ದರೂ ತಂದೆಯೇ ಕೊಲೆಗಾರನೆಂದು ಮಗನಿಗೆ ತಿಳಿಯದೆ ಕೊಲೆಯ ಪತ್ತೇದಾರಿ ಕೆಲಸವನ್ನು ಬಹಳ ಎಚ್ಚರದಿಂದ ಚಾಣಾಕ್ಷತನದಿಂದ, ತಾಳ್ಮೆಯಿಂದ ನಡೆಸುವ ಇನ್ಸ್‌ಪೆಕ್ಟರ್ ಶಂಕರನ ಪಾತ್ರ ಚಿತ್ರಣ ಸಹಜವಾಗಿದೆ. ಆನಂದನ ಕೊಲೆ 'ಆತ್ಮಹತ್ಯೆ' ಎಂದು ದಾಖಲೆಯಾಗುವುದರಿಂದ ಮೊದಲಾಗುವ ಈ ಕಾದಂಬರಿ ಅವನ ಅಣ್ಣ ಗಿರೀಶ, ತಂಗಿ ವೈಶಾಲಿ-ಇವರ ಕೊಲೆ ಯೊಡನೆ ಮುಗಿಯುತ್ತದೆ. ಇದರ ಜೊತೆ ಜೊತೆಯಲ್ಲೇ ಆನಂದ, ಗಿರೀಶ, ವೈಶಾಲಿ ಯರ ಮೋಜಿನ ಜೀವನ, ಹಣದ ಮದದಿಂದ ಬಡವರನ್ನು ತಮ್ಮ ಅಂಗೈ ಮೇಲಿಟ್ಟು ಕುಣಿಸುವುದು. ಹೆಣ್ಣಿನ ಶೀಲಭಂಗ, ಆಕ್ರಮಣ, ಬಡಹೆಣ್ಣು ಮಕ್ಕಳನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುವುದು, ಅವರನ್ನು ಬಸಿರು ಮಾಡುವುದು, ಬಲವಂತವಾಗಿ ಅಬಾರ್ಷನ್ ಮಾಡಿಸುವುದು, ಸ್ವಇಚ್ಛೆಯಿಂದ ಅಬಾರ್ಷನ್ ಮಾಡಿಸಿಕೊಳ್ಳುವುದು– ಇವೆಲ್ಲಾ ಲೀಲಾಜಾಲವಾಗಿ ನಡೆಯುತ್ತದೆ. ಇನ್ಸ್‌ಪೆಕ್ಟರ್ ಶಂಕರನ ಪತ್ತೇದಾರಿ ಕೆಲಸಕ್ಕೆ ಸಹಾಯಕವಾಗಿ ಬರುವ ಡಾ. ರಾಣಿ, ಡಾ. ವಿನಯ್ ಮೊದಲಾದ ಪೋಷಕ ಪಾತ್ರಗಳು ಜೀವಂತವಾಗಿದೆ. ಶಂಕರನ ಮನೆಯ ಅಡಿಗೆ ಭಟ್ಟ ಡಾ. ರಮೇಶನ ಕೊಲೆಯ ಕಾರ್ಯದಲ್ಲಿ ಸಹಭಾಗಿಯಾಗಿರುತ್ತಾನೆ. ಅಪರಾಧಿ ಡಾ. ರಮೇಶನನ್ನು ಶಂಕರ ಬಂಧಿಸುತ್ತಾನೆ. ದುಷ್ಟ ಪೀಳಿಗೆಯಲ್ಲಿ ಉಳಿಯುವ ಒಂದು ಮರಿಯನ್ನು ದೊಡ್ಡಮ್ಮ ಸಾಕುವ ಹೊಣೆ ಹೊರುತ್ತಾರೆ. ಅಂತ್ಯದಲ್ಲಿ ಸ್ಫೋಟಗೊಳ್ಳುವ ನಿಗೂಢ ಕೊಲೆಗಳ ರಹಸ್ಯವನ್ನು ಲೇಖಕರು ಬಿಚ್ಚಿಡುವ ರೀತಿ ಮೆಚ್ಚುವಂತಹುದು. ಡಾ. ರಮೇಶ್ ಅಪರಾಧೀ ಸ್ಥಾನದಲ್ಲಿ ನಿಲ್ಲುವ ಸನ್ನಿವೇಶ ರೋಮಾಂಚಕಾರಿಯಾಗಿದೆ.

ಮನು ಅವರ 'ಹಿಮಜ್ವಾಲೆ' ತುಂಬಾ ಕುತೂಹಲದಿಂದ ಓದಿಸಿಕೊಳ್ಳುವ ಆಕರ್ಷಕ ಕಾದಂಬರಿ. ಸದಾಶಿವರಾಯರು, ಮುರಳೀಧರ್, ಉಮೇಶ್ ಮತ್ತು ಪನ್ನಾಲಾಲ್ ಎಂಬ ನಾಲ್ವರು ಪ್ರವಾಸಿ ಪ್ರಿಯರು ಹಿಮಾಲಯದ ತಪ್ಪಲಿನಲ್ಲಿರುವ ಜಸವಂತ್‌ಸಿಂಗ್‌ನ ಅರಮನೆಯಲ್ಲಿ ಮಿಲಿಟರಿ ಅಧಿಕಾರಿ ಬಲಬೀರ್‌ಸಿಂಗ್‌ನ ಚಾಣಾಕ್ಷ ತನದಿಂದ ಬಂಧಿತರಾಗುತ್ತಾರೆ. ತಾವು ಬಂಧಿತರಾಗಿರುವ ವಿಷಯ ತಿಳಿದ ಮೇಲೆ

ನಾಲ್ವರು ಸ್ನೇಹಿತರು ಭುಬಿಂಗ್ ಕಣಿವೆಯಿಂದ ಪಾರಾಗಲು ಯತ್ನಿಸಿ ವಿಫಲರಾಗು ರಾಗುತ್ತಾರೆ.

ಬಲಬೀರ್‌ಸಿಂಗ್‌ನ ತಾತ ಮಾನ್‌ಸಿಂಗ್ ರಾಜಾಸ್ಥಾನದ ದೊರೆ. ಬ್ರಿಟೀಷರ ಆಳ್ವಿಕೆಗೆ ಸಿಡಿದೆದ್ದು ನಿಂತ ಮಾನ್‌ಸಿಂಗ್ ತಮ್ಮ ಅಪಾರ ಸಂಪತ್ತು ಮತ್ತು ಪರಿವಾರ ದೊಡನೆ ಹೊರಟು ಹಿಮಾಲಯದ ತಪ್ಪಲಿನಲ್ಲಿ ಪ್ರವಾಸಿ ಮಾಡುತ್ತಿದ್ದಾಗ ದುರ ದೃಷ್ಟವಶಾತ್ ದಾರಿತಪ್ಪಿ ಹಿಮಾಲಯದ ಗರ್ಭದಲ್ಲಿ ಅಡಗಿ ಹೋಗುತ್ತಾರೆ.

ಮಿಲಿಟರಿ ಸರ್ವಿಸ್‌ನಲ್ಲಿದ್ದ ಪ್ರವಾಸಿ ಪ್ರಿಯರಾದ ನಾಲ್ವರು ಮಿತ್ರರು ಹಿಮಾಲಯದ ತಪ್ಪಲಿನಲ್ಲಿ ಪ್ರವಾಸ ಮಾಡುತ್ತಿದ್ದಾಗ ಅವರಿಗೆ ಮಾನ್‌ಸಿಂಗ್‌ನ ಅಪಾರ ಸಂಪತ್ತು ಸಿಗುತ್ತದೆ. ಅದನ್ನು ಅವರು ಅಪಹರಿಸಿ ತಮ್ಮ ತಮ್ಮಲ್ಲೇ ಹಂಚಿ ಕೊಂಡು ಕೋಟ್ಯಾಧೀಶ್ವರರಾಗಿ ತಾವು ಕೆಲಸ ಮಾಡುತ್ತಿದ್ದ ಮಿಲಿಟರಿ ಸರ್ವೀಸಿನಿಂದ ಕಳಚಿಕೊಳ್ಳುತ್ತಾರೆ. ಅನೇಕ ಕಾಲದವರೆಗೆ ಈ ನಾಲ್ವರು ಮಿತ್ರರಲ್ಲಿಯೇ ರಹಸ್ಯವಾಗಿದ್ದ ಈ ವಿಷಯವನ್ನೂ ಪತ್ತೆಹಚ್ಚಿ ಅವರನ್ನು ಹಿಮಾಲಯದ ಅರಮನೆಯಲ್ಲಿ ಬಂಧಿಸಿ, ಅವರು ಅಪಹರಿಸಿಕೊಂಡು ಹೋದ ಸಂಪತ್ತಿನ ರಹಸ್ಯವನ್ನು ಅವರಿಂದಲೇ ಹೇಳಿಸಿ ಅದನ್ನು ಗುಪ್ತವಾಗಿ ಧ್ವನಿ ಮುದ್ರಿಸಿಕೊಂಡು ಅಪರಾಧಿಗಳನ್ನು ಹಿಡಿದು ಅವರನ್ನು ಮಿಲಿಟರಿ ಕೋರ್ಟ್‌ಗೆ ಒಪ್ಪಿಸಿದ ಕೀರ್ತಿ ಬಲಬೀರ್‌ಸಿಂಗ್‌ನದು. ನಾಲ್ವರು ತಾವು ಅಪಹರಿಸಿದ ಸಂಪತ್ತಿನ ಬಹುಭಾಗವನ್ನು ಒಪ್ಪಿಸಿದ ಮೇಲೆ ಬಲಬೀರ್‌ಸಿಂಗ್ ತಾನು ತೆಗೆದುಕೊಳ್ಳದೆ ಅದು ದೇಶದ ಸಂಪತ್ತು, ಅದರ ಮೇಲೆ ನನಗೆ ಹಕ್ಕಿಲ್ಲ' ಎಂದು ಹೇಳಿ ಅದನ್ನು ಸರಕಾರಕ್ಕೆ ವಾಪಸ್ಸು ಮಾಡುತ್ತಾನೆ.

ವಯಸ್ಸಾದ ಸದಾಶಿವರಾಯರು ಹಿಮಾಚ್ಛಾದಿತ ವಾತಾವರಣದಲ್ಲಿ ಅನು ಭವಿಸಿದ ಯಾತನೆ, ನಾಲ್ವರೂ ಒಬ್ಬರನ್ನೊಬ್ಬರು 'ಬ್ಲಾಕ್ ಮೇಲ್' ಮಾಡುತ್ತಿರ ಬಹುದೆಂದು ಶಂಕಿಸುವುದು ; ಉಮೇಶ್, ಪನ್ನಾಲಾಲ್, ಮುರಳಿಧರ್ ಇವರ ವರ್ತನೆ ಇವೆಲ್ಲಾ ಸನ್ನಿವೇಶಕ್ಕೆ ತಕ್ಕಂತೆ ಸಹಜವಾಗಿ ಮೂಡಿ ಬಂದಿವೆ. ಕಾಲ್ಪನಿಕ ಸಾಹಸಪ್ರದ ಕಾದಂಬರಿಯೆಂದು ಕರೆಯಬಹುದಾದ ಈ ಕಾದಂಬರಿ ಓದುಗರ ಕುತೂ ಹಲವನ್ನು ಸೆರೆಹಿಡಿಯುವಲ್ಲಿ ಯಶಸ್ವಿಯಾಗಿದೆ. ಅಪರಾಧಿಗಳ ಶೋಧನೆಗೆಂದು ಹೊರಟ ಬಲಬೀರ್‌ಸಿಂಗ್ ಜಸವಂತ್‌ಸಿಂಗ್‌ನ ಅರಮನೆಯನ್ನು ಸೇರಿದ ಮೇಲೆ ಕಥೆ ಹೊಸ ತಿರುವನ್ನು ಪಡೆದುಕೊಳ್ಳುತ್ತದೆ. ಒಟ್ಟಿನಲ್ಲಿ ಹೊಸ ಅನುಭವವನ್ನು ನೀಡುವ ಮತ್ತು ಪ್ರಕೃತಿಯ ಭವ್ಯ ವಾತಾವರಣದಲ್ಲಿ ಮನುಷ್ಯನ ವಿಚಿತ್ರ ನಡವಳಿಕೆ ಯನ್ನು ಚಿತ್ರಿಸುವ ಈ ಕೃತಿ ಓದುಗರನ್ನು ಕೆಲವು ಘಂಟೆಗಳ ಕಾಲ ರಮ್ಯವಾದ ಕಾಲ್ಪನಿಕ ಪ್ರಪಂಚಕ್ಕೆ ಕರೆದೊಯ್ಯುತ್ತದೆ. ಈಗಾಗಲೇ ತಮ್ಮ ಇತರ ಕಾಲ್ಪನಿಕ ಸಾಹಸ ಪ್ರಧಾನವಾದ ರಂಜನೀಯ ಕಾದಂಬರಿಗಳಿಂದ ಭರವಸೆ ಹುಟ್ಟಿಸುವ 'ಮನು' ಅವರಿಂದ ಇನ್ನೂ ಉತ್ಕೃಷ್ಟವಾದ ಕೃತಿಗಳನ್ನು ನಿರೀಕ್ಷಿಸಬಹುದು.

—ಎನ್. ವಿ. ವಿಮಲ

ಐತಿಹಾಸಿಕ ಮತ್ತು ಪತ್ತೇದಾರಿ ಕಾದಂಬರಿಗಳು

'ಧರ್ಮಸ್ಥಳದಲ್ಲಿ ಗೊಮ್ಮಟನು ಮೂಡಿದನು' ಶ್ರೀ ಹೆಚ್. ವಿಠಲಶೆಣ್ಯೈರವರ ಐತಿಹಾಸಿಕ ಕಾದಂಬರಿಯಾಗಿದೆ. ಲೇಖಕರು ಈಗಾಗಲೇ ಹಲವು ಸಾಮಾಜಿಕ ಕಾದಂಬರಿಗಳನ್ನೂ, ಪತ್ತೇದಾರಿ ಕಾದಂಬರಿಗಳನ್ನೂ ಬರೆದಿದ್ದಾರೆ. ಪ್ರಾಚೀನ ಕಾಲದಲ್ಲಿ ಚಾಮುಂಡರಾಯನ ಪೋಷಣೆಯಿಂದ ಶ್ರವಣಬೆಳಗೊಳದಲ್ಲಿ ಗೊಮ್ಮಟೇಶ್ವರ ಮೂರ್ತಿಯ ಪ್ರತಿಷ್ಠಾಪನೆಯಾಯಿತಷ್ಟೆ. ಅದೇ ರೀತಿಯಲ್ಲಿ ಈ ಶತಮಾನದಲ್ಲಿ ರಂಜಾಳಗೋಪಾಲಶೆಣ್ಯೆ ಅವರಿಂದ ಕೆತ್ತಲ್ಪಟ್ಟ ಗೊಮ್ಮಟನ ವಿಗ್ರಹ ಧರ್ಮಸ್ಥಳದಲ್ಲಿ ಪ್ರತಿಷ್ಠಾಪನೆ ಮಾಡಿಸಿದ್ದು ಈ ಕಾದಂಬರಿಯ ವಸ್ತುವಾಗಿದೆ. ಈ ಕಾದಂಬರಿಯಲ್ಲಿ ಮುಖ್ಯವಾಗಿ ಎದ್ದು ತೋರುವ ಅಂಶವೆಂದರೆ ಕಲಾಕಾರರ ಇಂದಿನ ಸ್ಥಿತಿ ಏನಾಗಿದೆ ಯೆಂಬುದೇ ಆಗಿದೆ. ಕಲಾಕಾರರಾಗಿ ಹುಟ್ಟಿ ತಮ್ಮ ಪ್ರತಿಭೆಯನ್ನು ಬೆಳಗುವ ಕಲಾ ಕಾರರು ಆರ್ಥಿಕ ದೃಷ್ಟಿಯಿಂದ ಎಷ್ಟು ಹೀನಾಯವಾದ ಸ್ಥಿತಿಯಲ್ಲಿರುತ್ತಾರೆ ಎಂಬುದರ ಕಡೆಗೂ ಈ ಕಾದಂಬರಿ ಬೆಳಕು ಚೆಲ್ಲುತ್ತದೆ. ಕೇವಲ ಗೊಮ್ಮಟನನ್ನು ಮಂಗಲಪಾದೆ ಯಲ್ಲಿ ಕೆತ್ತಿದ್ದು ಅದನ್ನು ಧರ್ಮಸ್ಥಳಕ್ಕೆ ಕಠಿಣ ಶ್ರಮದಿಂದ ಸಾಗಿಸಿ ಪ್ರತಿಷ್ಠಾಪಿಸಿದ್ದು ಇವುಗಳನ್ನೇ ವರ್ಣಿಸಿದರೆ ನೀರಸ ನಿರೂಪಣೆಯಾಗುವುದು-ಆದರಿಂದ ಓದುಗರಿಗೆ ಬೇಸರವಾಗುವುದು, ಎಂಬುದನ್ನು ಗಮನದಲ್ಲಿಟ್ಟುಕೊಂಡು ಕಾದಂಬರಿ ರೂಪದಲ್ಲಿ ಗೊಮ್ಮಟನು ಪ್ರತಿಷ್ಠಾಪನೆಯಾದ ಕಥೆಯನ್ನು ಹೆಣೆಯಲಾಗಿದೆ.

ಇಲ್ಲಿಯ ನಾಯಕನಾದ ಪ್ರೇಮಚಂದ್ರ ಪಿಹೆಚ್.ಡಿ., ಪದವಿಗಾಗಿ ಅಧ್ಯಯನ ನಡೆಸಿರುವ ಕಾಲೇ ಜೊಂದರ ಅಧ್ಯಾಪಕನಾಗಿರುವ ಸುಂದರ ತರುಣ. ಸುಂದರ ತರುಣ ನಾದರೂ ಅವನು ತನ್ನ ನಡವಳಿಕೆಯಿಂದ ಶ್ರೀಧರನನ್ನು ಮೆಚ್ಚಿಸುತ್ತಾನೆ. ಶ್ರೀಧರ ಈಗ ಪ್ರೇಮಚಂದ್ರನ ಆಪ್ತಮಿತ್ರನೇ ಆದ. ಶ್ರೀಧರನ ತಂಗಿ ಆನಂದಮಯಿಯನ್ನು ಕಂಡೊಡನೆ ಮೊದಲ ನೋಟದಲ್ಲೇ ಅವಳಲ್ಲಿ ಅನುರಕ್ತನಾಗಿ ಪ್ರೇಮಚಂದ್ರ ತನ್ನ ಹೃದಯವನ್ನೇ ಅವಳಿಗೆ ಅರ್ಪಿಸಿಬಿಡುತ್ತಾನೆ. ಆದರೆ ಎಲ್ಲಾ ಸಾಮಾಜಿಕ ಕಾದಂಬರಿಗಳಂತೆಯೇ ಈ ಇಬ್ಬರು ಪ್ರೇಮಿಗಳ ವಿವಾಹಕ್ಕೂ ಅನೇಕ ಅಡಚಣೆಗಳಿವೆ. ಇಲ್ಲಿ ಶ್ರೀಧರನ ತಂದೆ ತಮ್ಮ ಮಗಳನ್ನು ಶ್ರೀಮಂತರ ಮಗನಿಗೆ ಕೊಡುವ ಆಶಯವುಳ್ಳವರು. ಅವರು ಆಗಾಗ್ಗೆ ಮನೆಗೆ ಬರುವ ಪ್ರೇಮಚಂದ್ರನನ್ನು ಬಯಸುವುದಿಲ್ಲ. ಆದರೆ ಅವರು ನಂಬಿದ್ದ ಶ್ರೀಮಂತರು ಕೈಕೊಟ್ಟಾಗ ವಿಧಿಯಿಲ್ಲದೆ ಪ್ರೇಮಚಂದ್ರನನ್ನೇ ತಮ್ಮ ಅಳಿಯನನ್ನಾಗಿಸಿ ಕೊಳ್ಳುತ್ತಾರೆ. ಅಷ್ಟು ಹೊತ್ತಿಗೆ ಪ್ರೇಮಚಂದ್ರನಿಗೆ ಪಿಹೆಚ್.ಡಿ., ಪದವಿ ದೊರೆತಿರು ತ್ತದೆ. ಮತ್ತೊಂದು ಪ್ರೇಮಪ್ರಸಂಗ ಶ್ರೀಧರ ಮತ್ತು ಬಡವಳಾದ ಶಾರದೆಯ ದಾಗಿದೆ. ಶಾರದೆಗಾಗಿ ಮನೆಯನ್ನೇ ತ್ಯಜಿಸಿದ ಶ್ರೀಧರ. ಕೆಲವೊಂದು ಪೇಲವ ಪ್ರಸಂಗಗಳನ್ನು ಬಿಟ್ಟರೆ ಕಾದಂಬರಿ ಓದಲು ರಮ್ಯವಾಗಿದೆ. ವರ್ಣನಾ ಪ್ರಸಂಗಗಳನ್ನು ಲೇಖಕರು ಕುಶಲತೆಯಿಂದ ಮಾಡಿದ್ದಾರೆ. ಆದರೆ ಈ ಪ್ರೇಮಿಗಳ ಕಥೆಗಳು

ಕಾದಂಬರಿಯ ಹಂದರ ಮಾತ್ರವಾಗಿದೆ. ಕಾದಂಬರಿಯ ನಿಜವಾದ ಒಳತಿರುಳೇ ಬೇರೆ. ಕಲ್ಲನ್ನು ಆಯುವುದರಿಂದ ಹಿಡಿದು ಸುಂದರವಾದ ಶಿಲ್ಪವನ್ನು ಕೆತ್ತಿದ ರಂಜಾಳ ಗೋಪಾಲಶೆಣ್ಯೆರವರ ನೈಜ ಕಥಾನಕ ಕಾದಂಬರಿಯ ಆರಂಭದಿಂದ ಕೊನೆಯವರೆಗೂ ಧಾರೆಯಂತೆ ಹರಿದಿದೆ. ಶೆಣ್ಯೆರವರು ಪ್ರಶಸ್ತಿ ಪಡೆಯಲು ಪ್ರಯತ್ನಿಸಿ ತಮ್ಮ ಸುಂದರ ಶಿಲ್ಪವನ್ನೂ, ಪ್ರಶಸ್ತಿಯನ್ನೂ, ಗೆಳೆಯನನ್ನೂ ಕಳೆದುಕೊಂಡುದರ ವಿಷಯವೂ ಇದರಲ್ಲಿದೆ. ಮುಂದೆ ಪ್ರಶಸ್ತಿಯ ಆಯ್ಕೆ ಮಾಡುವವರು ಶೆಣ್ಯೆರಲ್ಲಿಗೆ ಬಂದು ಅವರ ಎಲ್ಲಾ ಕೃತಿಗಳನ್ನು ಪರೀಕ್ಷಿಸಿ ನೋಡಿ 'ಇಷ್ಟು' ಮಾತ್ರಕ್ಕೆ ನಿಮಗೆ ಪ್ರಶಸ್ತಿ ಸಿಗದೆಂದು ಹೇಳಿದಾಗ-ಶೆಣ್ಯೆರವರು ಮಂಗಲಪಾದೆಯಲ್ಲಾಗುತ್ತಿದ್ದ ಗೊಮ್ಮಟನ ದರ್ಶನವನ್ನು ಅವರಿಗೆ ಮಾಡಿಸುತ್ತಾರೆ. ನಂತರ ಅನಿರೀಕ್ಷಿತವಾಗಿ ಪ್ರಶಸ್ತಿ ಬಂದಾಗ 'ಎಲ್ಲಾ ಗೊಮ್ಮಟನ ದಯದಿಂದ' ಬಂದಿತೆನ್ನುತ್ತಾರೆ. ಹಿಂದಿನ ಚಾಮುಂಡರಾಯನಂತೆ ಈಗ ವೀರೇಂದ್ರ ಹೆಗ್ಗಡೆಯವರೂ, ರತ್ನಮ್ಮ ಹೆಗ್ಗಡೆ ಯವರೂ ಗೊಮ್ಮಟನ ನಿರ್ಮಾಣಕ್ಕಾಗಿ ಶ್ರಮಿಸಿದವರೂ, ಶಿಲ್ಪಿಗಳನ್ನು ನೇಮಿಸಿ ದವರೂ ಆಗಿದ್ದಾರೆ. ಕಾದಂಬರಿಯಲ್ಲಿ ಬೇಸರಕ್ಕೆಡೆ ಕೊಡದಿರಲು ಯಕ್ಷಗಾನ ಪ್ರಸಂಗ ಅದರಲ್ಲಿಯೂ ಭಗದತ್ತ ವಧೆ, ಮತ್ತು ಅಭಿಮನ್ಯು ಕಾಳಗಗಳು ನಡೆಯುವ ರೀತಿ ಯನ್ನು ರೋಚಕವಾಗಿ ವರ್ಣಿಸಲಾಗಿದೆ. ಇಲ್ಲಿನ ಸ್ತ್ರೀ ಪಾತ್ರಗಳನ್ನು ವಿಮರ್ಶಿಸು ವಾಗ ಒಂದು ಮಾತು ಹೇಳಬೇಕು. ಅದೆಂದರೆ ಎಲ್ಲಾ ಸ್ತ್ರೀಪಾತ್ರಗಳು ತಮ್ಮ ಸೀಮಾರೇಖೆಯನ್ನು ಬಿಟ್ಟು ಆಚೆಗೆ ಬರದಿರುವುದು. ಆನಂದಮಯಿ, ಅವಳ ತಾಯಿ ಶಾರದೆ, ಈ ಮೂವರ ಪಾತ್ರಗಳೂ ನೈಜವಾಗಿಯೇ ಮೂಡಿಬಂದಿದೆ. ಪ್ರಿಯಕರನಿಗಾಗಿ ಎಷ್ಟು ದಿನವಾದರೂ ಕಾಯಬಲ್ಲ ಆನಂದಮಯಿಯು, ಪಾತ್ರ ಮುಗ್ಧ ಹುಡುಗಿಯ ಪಾತ್ರಕ್ಕೆ ಸರಿಯಾಗಿದೆ.

ಲೇಖಕರ ಶೈಲಿ ಪತ್ತೇದಾರಿ ಕಾದಂಬರಿಯಲ್ಲಿಯೇ ಒಂದು ವಿಧವಾಗಿದ್ದರೆ ಈ ಕಾದಂಬರಿಯಲ್ಲಿ ಚೆನ್ನಾಗಿ ಹರಿದಿದೆ. ಭಾಷೆಯ ಬಳಕೆಯೂ ಅಷ್ಟೇ. ಬಹಳ ಸಂಯಮದಿಂದ ಭಾಷೆಯನ್ನೂ, ಶಬ್ದಗಳನ್ನೂ, ಬಳಸಿಕೊಂಡಿದ್ದಾರೆ. ವಾಕ್ಯ ರಚನೆ ಎಲ್ಲಿಯೂ ತಪ್ಪದೆ ಸರಿಯಾಗೇ ಬಂದಿದೆ. ಸೊಗಸಾದ ಕಾಗದವನ್ನು ಬಳಸಿ ಮುದ್ರಿಸಲಾದ ಈ ಕಾದಂಬರಿಗೆ ಇನ್ನೂ ಸುಂದರ ಮುಖ ಚಿತ್ರವಿದ್ದಿದ್ದರೆ ತುಂಬಾ ಚೆನ್ನಾಗಿರುತ್ತಿತ್ತು. ಒಟ್ಟಾರೆಯಾಗಿ ಹೇಳುವುದಾದರೆ ಲೇಖಕರು ಬಹಳ ಶ್ರಮಪಟ್ಟು ಮಾಹಿತಿಗಳನ್ನು ಆರಿಸಿ ಕಲ್ಪನೆಯೊಡನೆ ಕಾದಂಬರಿಯನ್ನು ನಿರ್ಮಿಸಿದ್ದಾರೆ. ಐತಿ ಹಾಸಿಕ ಪ್ರಜ್ಞೆಯುಳ್ಳ ಶ್ರೀ ವಿಠಲಶೆಣ್ಯೆರವರು ತಮ್ಮ ಮುಂದಿನ ಐತಿಹಾಸಿಕ ಕಾದಂಬರಿ ರಾಜಾವೀರ ಪಾಂಡ್ಯನನ್ನು ಬರೆಯುವಲ್ಲಿಯೂ ಐತಿಹಾಸಿಕ ಅಂಶಗಳ ಕಡೆಗೆ ಹೆಚ್ಚು ಗಮನ ಕೊಡುತ್ತಾರೆಂದೇ ನಂಬಬಹುದು. ಧರ್ಮಸ್ಥಳದ ಗೊಮ್ಮಟನ ವಿಷಯವನ್ನು ತಿಳಿಯುವವರಿಗೆ ಈ ಕಾದಂಬರಿ ನಿಜಕ್ಕೂ ಅನೇಕ ವಿವರಗಳನ್ನು ಬಿಟ್ಟುಕೊಡುವುದು ಶ್ಲಾಘನೀಯವಾದ ಸಂಗತಿಯಾಗಿದೆ ಎಂದು ಹೇಳಬಹುದು.

ಈ ಸಲದ ಪತ್ತೇದಾರಿ ಕಾದಂಬರಿಗಳಲ್ಲಿ ಕೆಲವಾದರೂ ಉತ್ತಮ ಅಂಶಗಳಿಂದ ಕೂಡಿರುವುದು ಸಮಾಧಾನಕಾರಿಯಾದ ಸಂಗತಿಯಾಗಿದೆ. ಚೈತನ್ಯ, ಗೀತಾನಂದ, ಕಾಕೋಳು ರಾಮಯ್ಯ, ವಿಠಲಶೆಣೈ, ಮತ್ತು ಕೆ. ಆರ್. ಪದ್ಮಜೆಯವರು ಬರೆದಿರುವ ಪತ್ತೇದಾರಿ ಕಾದಂಬರಿಗಳು ಓದುಗರ ಕುತೂಹಲವನ್ನು ಕೆರಳಿಸಿಕೊಂಡು ಹೋಗು ವಲ್ಲಿ ಸಫಲವಾಗಿವೆ. ಪತ್ತೇದಾರಿ ಕಾದಂಬರಿಗಳಿಗೆ ಅಗತ್ಯವಾದ ಕೊಲೆಯ ಪ್ರಸಂಗ ಗಳು, ಲೈಂಗಿಕತೆಯ ಸಮಾವೇಶ, ದುಷ್ಟರನ್ನು ಶಿಕ್ಷಿಸುವ ಬಗೆ ಇವೆಲ್ಲವೂ ಈ ಕಾದಂಬರಿ ಗಳಲ್ಲಿ ಸೇರಿವೆ. ಹೀಗಾಗಿ ಹಿಂದಿನ ಪತ್ತೇದಾರಿ ಕಾದಂಬರಿಗಳ ಪರಂಪರೆಗಿಂತಲೂ ಈ ಪತ್ತೇದಾರಿ ಕಾದಂಬರಿಗಳು ತೀರಾ ಭಿನ್ನವಾಗೇನೂ ಇಲ್ಲ, ಕೆಲವೊಂದು, ಅಂಶ ಗಳಿಂದ ಮಾತ್ರ ಭಿನ್ನತೆಯನ್ನು ಪಡೆದಿದೆ.

ಕೆ. ಆರ್. ಪದ್ಮಜೆಯವರ 'ಸಾವಿನ ಅಲೆ' ಪತ್ತೇದಾರಿ ಕಾದಂಬರಿ ಕುತೂಹಲವನ್ನು ಉಕ್ಕಿಸುತ್ತಾ ಓದಿಸಿಕೊಂಡು ಹೋಗುತ್ತದೆ. ಆದರೆ ಊದಿದ ಬೆಲೂನು ಸೂಜಿ ಚುಚ್ಚಿದ ಒಡನೆಯೇ ಒಡೆದು ಹೋಗುವಂತೆ, ಓದುಗರ ಕುತೂಹಲ ಕಾದಂಬರಿಯ ಅಂತ್ಯವನ್ನು ಓದುತ್ತಿದ್ದಂತೆಯೇ ಸ್ತಬ್ಧಗೊಳ್ಳುತ್ತದೆ. ಏಕೆಂದರೆ ಪತ್ತೇ ದಾರನಾದ ಪುಲಿಕೇಶಿ ದುಷ್ಟರ ನಡುವೆ ಸಿಕ್ಕಿಹಾಕಿಕೊಳ್ಳುತ್ತಿದ್ದಂತೆಯೇ ಕಾದಂಬರಿ ಮುಗಿಯುತ್ತದೆ. ಇವರ ಮುಂದಿನ ಭಾಗ 'ಚಿನ್ನದ ಗಿಣಿ' ಎಂದು ಲೇಖಕರು ಹೇಳಿಕೊಂಡಿದ್ದಾರೆ. ಆದರೆ ಅದುವರೆಗಿನ ಕುತೂಹಲವನ್ನು ತಡೆದಿಟ್ಟು ಕೊಳ್ಳುವು ದಂತೂ ಓದುಗರಿಗೆ ಅಸಾಧ್ಯ ವಿಷಯವಾಗಿದೆ. ಕಾದಂಬರಿಯಲ್ಲಿ ಲೈಂಗಿಕತೆ ನವೀನ ಮಾದರಿಯ ಕಥಾ ಪ್ರಸಂಗಗಳನ್ನು ತುಂಬಲಾಗಿದೆ.

ಸುಧಾಮಣಿ ಶ್ರೀಮಂತ ಗೃಹಿಣಿ. ಅವಳ ಗಂಡನನ್ನು ಶ್ಯಾಮಸುಂದರನೆಂಬುವನು ಕೊಲೆ ಮಾಡುತ್ತಾನೆ. ನಂತರ ಪೋಲಿಸರಿಗೆ ಸಿಕ್ಕ ಅವನಿಗೆ ಕೊಲೆಯ ಆರೋಪದ ಮೇಲೆ ಮರಣದಂಡನೆಯನ್ನು ವಿಧಿಸಲಾಗುತ್ತದೆ. ಆದರೆ ತನ್ನ ಗಂಡ ಶ್ಯಾಮಸುಂದರ ಕೊಲೆಗಾರನೇ ಅಲ್ಲ ಎಂದೂ, ಬೇರೆ ಯಾರೋ ಕೊಲೆಗಾರರಿರುವರೆಂದು ಬಲವಾಗಿ ನಂಬಿರುತ್ತಾಳೆ. ಶ್ಯಾಮಸುಂದರನ ಪತ್ನಿ ನಾಗಮಣಿ. ಮರಣದಂಡನೆಗೆ ಕೆಲವೇ ದಿನಗಳಿದೆಯೆನ್ನುವಾಗ ಅವಳು ತನಗೆ ಸಿಕ್ಕ ಪುರಾವೆಗಳಿಂದ ಪತ್ರಿಕಾಗೋಷ್ಠಿಯನ್ನು ಸೇರಿಸಿ ಅದರಲ್ಲಿ ನಿಜ ಬಹಿರಂಗಪಡಿಸುವುದಾಗಿ ಹೇಳಿಕೊಳ್ಳುತ್ತಾಳೆ. ಇದಕ್ಕೆ ಶ್ರೀಮಂತೆ ಸುಧಾಮಣಿಯೂ ನೆರವು ನೀಡಬೇಕೆಂದೂ, ಸತ್ಯ ಸಾಬೀತಾಗುವಂತೆ ಪತ್ತೇದಾರಿ ಯೊಬ್ಬನನ್ನು ನೇಮಿಸಬೇಕೆಂದೂ ಆಶಿಸುತ್ತಾಳೆ. ಸುಧಾಮಣಿ ಪತ್ತೇದಾರ ಪುಲಿಕೇಶಿ ಯನ್ನು ಈ ಕಾರ್ಯಕ್ಕೆ ನಿಯೋಜಿಸುತ್ತಾಳೆ. ಸುಧಾಮಣಿಯ ಮನೆಗೆ ಆಗಾಗ ಬರುತ್ತಿದ್ದ ಸಬ್ ಇನ್ಸ್‌ಪೆಕ್ಟರ್ ಕಾನಿಟ್ಕರನಿಗೂ ಪತ್ತೇದಾರ ಪುಲಿಕೇಶಿಗೂ ವಿರಸವಿರುತ್ತದೆ. ಅವನು ಸುಧಾಮಣಿ ಇಂದೋ ನಾಳೆಯೋ ಸಾಯುವಂತಿರುವ ಶ್ಯಾಮಸುಂದರನ ಬಗೆಗೆ ಆಸಕ್ತಿ ವಹಿಸಿ ಪುಲಿಕೇಶಿಯನ್ನು ಪತ್ತೇದಾರ ಕೆಲಸಕ್ಕೆ ನಿಯಮಿಸಿದ್ದನ್ನು ಕಂಡು ಅವಳ ಮೇಲೆ ಸಿಡಿಮಿಡಿಗೊಳ್ಳುತ್ತಾನೆ. ಕಥೆ ಹೀಗೆ ಮುಂದುವರಿಯುತ್ತದೆ. ಪುಲಿಕೇಶಿ

ಹಾಗೂ ಕಾನಿಟ್ಕರನ ನಡುವೆ ನಡೆದ ಘರ್ಷಣೆಯ ಪ್ರಸಂಗಗಳನ್ನು ಲೇಖಿಕಿ ಹೃದಯಂಗಮವಾಗಿ ಚಿತ್ರಿಸಿದ್ದಾರೆ. ಇದಲ್ಲದೆ ಮುಂಬೈನ ಮತ್ಸ್ಯೋದ್ಯಮ ಮಹಾ ನಿಗಮದ ಪಾಲಕರ ವಿಷಯವೂ ಕಾದಂಬರಿಯಲ್ಲಿದೆ. ಸುಧಾಮಣಿಯ ಅಂಗಾಂಗಳ ವರ್ಣನೆಯನ್ನು ರಸವತ್ತಾಗಿ ಮಾಡಿರುವ ಲೇಖಿಕಿಯವರು ಓದುಗರ ಮನಸ್ಸಿನಲ್ಲಿ ಉದ್ರೇಕವುಂಟಾಗುವಂತೆ ಪಾತ್ರವನ್ನು ಕಡೆದಿದ್ದಾರೆ. ಪತ್ತೇದಾರಿ ಕಾದಂಬರಿಯಾಗಲಿ, ಸಾಮಾಜಿಕ ಕಾದಂಬರಿಯಾಗಲಿ ಪದ್ಮಜೆಯವರ ಶೈಲಿ ಏರುಪೇರಾಗಿ ಹರಿಯದೆ ಒಂದೇ ರೀತಿಯಲ್ಲಿ ಮುಂದುವರಿಯುವುದು ಮೆಚ್ಚತಕ್ಕ ಅಂಶವಾಗಿದೆ. ಇಂಗ್ಲಿಷ್ ಕಾದಂಬರಿಯ ಪ್ರೇರಣೆಯಿಂದ ಮೂಡಿಬಂದಿರುವ ಇದು ಮೊದಲೇ ಹೇಳಿದಂತೆ ಅಪೂರ್ಣ ಕಾದಂಬರಿಯಾಗಿದೆ. ಈ ಕಾದಂಬರಿಯೂ ಪತ್ತೇದಾರಿ ಕಾದಂಬರಿಗಳ ಸಮುದ್ರದಲ್ಲಿ ಸೇರಿ ಹೋಗಿ ತನ್ನ ಅಸ್ತಿತ್ವವನ್ನು ಕಳೆದುಕೊಳ್ಳುತ್ತದೆ ಎಂದು ಹೇಳಬಹುದು.

ಚೈತನ್ಯರವರ 'ಲಯವಿಲ್ಲದ ಪ್ರೀತಿ' ಪತ್ತೇದಾರಿ ಕಾದಂಬರಿಯ ಮೂಲ ಮಂತ್ರ 'ಲಯವಿಲ್ಲದ ಪ್ರಿತೀಯೇ' ಆಗಿದೆ.

ಪ್ರಸಿದ್ಧ ಸಿನಿಮಾ ನಟಿಯಾದ ಕಲಾದೇವಿ ಒಮ್ಮೆ ಚಿತ್ರೀಕರಣಕ್ಕಾಗಿ 'ಮರವಂತೆ'ಯ ಕಡಲು ತೀರದ ಬಳಿ ಹೋದಾಗ ಅಲ್ಲಿ ಕುಂಚ ಬಣ್ಣಗಳೊಡನೆ ಅವಳದೇ ಚಿತ್ರವನ್ನು ಚಿತ್ರಿಸುತ್ತಿದ್ದ ವಾಸುದೇವನನ್ನು ನೋಡುತ್ತಾಳೆ. ಅವನ ಕಲೆಯಲ್ಲಿ ಆಸಕ್ತಳಾದ ಸಿನಿಮಾ ನಟಿಯೂ ಕಲಾವಿಮರ್ಶಕಿಯೂ ಆದ ಕಲಾದೇವಿ ಅವನನ್ನು ತನ್ನೊಡನೆ ತನ್ನೂರಿಗೆ ಕರೆದೊಯ್ಯುತ್ತಾಳೆ. ತನ್ನ ಜೀವನದಲ್ಲೇ ಅನಿರೀಕ್ಷಿತವಾದ ತಿರುವು ಪಡೆದ ವಾಸುದೇವ ಕಲಾದೇವಿಯ ಸಹಾಯದಿಂದ 'ಮಧುರ' ಪತ್ರಿಕೆಯಲ್ಲಿ ಕಲಾಕಾರನಾಗಿ ಸೇರಿ ಕೆಲಸ ಮಾಡುತ್ತಾನೆ. ಅವನು ಬಹಳ ಕಷ್ಟಪಟ್ಟು ಬರೆದ 'ದೂರ' ಚಿತ್ರ ಕಲಾಸ್ಪರ್ಧೆಯಲ್ಲಿ ಪ್ರಥಮ ಬಹುಮಾನವನ್ನು ಪಡೆಯುತ್ತದೆ. ಕಾರಣಾಂತರದಿಂದ ಸರಿಹೊಂದದೆ ಮಧುರ ಪತ್ರಿಕೆಯನ್ನು ಬಿಡುತ್ತಾನೆ. ವಾಸುದೇವ ಅಲ್ಲಿ ತಮಿಳು ಕಥೆಗಳಿಗೆ ಚಿತ್ರ ಬರೆಯಬೇಕಾಗಿ ಬಂದಾಗ ವಿರೋಧಿಸಿ ಕೆಲಸ ಕಳೆದುಕೊಳ್ಳುತ್ತಾನೆ. ಕಲಾದೇವಿ ಇದರಿಂದ ನೊಂದು ಅವನು ಚಿತ್ರವೊಂದನ್ನೇಕೆ ನಿರ್ಮಿಸಬಾರದೆಂದು ಸಲಹೆ ನೀಡುತ್ತಾಳೆ. ಪ್ರಾರಂಭದಲ್ಲಿ ಅದನ್ನು ಒಪ್ಪದಿದ್ದರೂ ನಂತರ ಅವಳು ಬಹುವಾಗಿ ಹೇಳಲು ಚಿತ್ರ ತಯಾರಿಸಲು ಮನಸ್ಸು ಮಾಡುತ್ತಾನೆ. 'ಮಧುರ' ಪತ್ರಿಕೆಯನ್ನು ಬಿಟ್ಟ ವಾಸುದೇವ ಕಲಾದೇವಿಯ ಅತಿಪ್ರೋತ್ಸಾಹದಿಂದಲೇ ಚಿತ್ರ ತಯಾರಿಸಲು ತೊಡಗಿದುದು.

ವಿನೂತನ ಪತ್ತೇದಾರಿ ಕಾದಂಬರಿ ಎಂಬ ಹೆಸರಿಗೆ ತಕ್ಕಂತಿದೆ ಚೈತನ್ಯರವರ 'ಆಕಾಶದಿಂದ ಇಳಿದವರು' ಕಾದಂಬರಿ. ಕಾದಂಬರಿಯ ಹಿಂಬದಿಯ ರಕ್ಷಾಪುಟದಲ್ಲಿ ಇಡೀ ಕಾದಂಬರಿಯ ಸಾರಾಂಶವನ್ನೇ ನೀಡಲಾಗಿದೆ. ಅದನ್ನೇ ಇಲ್ಲಿ ಕೊಡಬಹುದು.

"ಜಗತ್ತಿನಲ್ಲಿ ಮಾನವನ ಉಗಮುವನ್ನು ಉಂಟುಮಾಡಿದ ಲೋಕದಿಂದಲೇ ಆಪೆಕ್ಸಗಾಮ ಭೂಲೋಕಕ್ಕೆ ಬರುತ್ತಾನೆ. ಆದರೆ ದೇವರ ಸಾಕ್ಷಾತ್ಕಾರದ ದಾರಿಯನ್ನು ಹುಡುಕುವ ಆತ ತನ್ನ ಲೋಕದಿಂದಲೇ ಬೇರೆಯಾಗಿ ಸಿಡಿದು ನಿಲ್ಲುತ್ತಾನೆ. ಆತನನ್ನು ಹುಡುಕಲು ಆತನ ಲೋಕದವರೇ ಬರುತ್ತಾರೆ. ಆದರೆ ಗಾಮ ಸಾಕ್ಷಾತ್ಕಾರದ ದಾರಿಯನ್ನು ಹುಡುಕಿಕೊಂಡು ಮುಳ್ಳಯ್ಯನಗಿರಿ ಹೊರಡುತ್ತಾನೆ. ಆ ಗಿರಿಯಲ್ಲಿಯ ನಿಧಿಯನ್ನು ಹುಡುಕಿಕೊಂಡು ಮೂವರು ಖದೀಮರು ಬರುತ್ತಾರೆ. ಈ ಜಾಲವನ್ನು ಭೇದಿಸಲು ಸಿ.ಐ.ಡಿ. ಅಧಿಕಾರಿ ಚಂಡೀದಾಸ್ ಮತ್ತು ಗಾಮಾನ ಕೈದಿಯಾಗಿ ಪತ್ತೇದಾರ ಪ್ರಶಾಂತ ಬರುತ್ತಾರೆ."

ಆಕಾಶದಿಂದ ಇಳಿದು ಧರೆಗೆ ಬಂದು ವ್ಯಕ್ತಿಗಳ ರೂಪವನ್ನು ಹೊಂದಿದವರಲ್ಲಿ ಶಾಂತಲಾ ವತ್ಸನ್, ಗುರು ವತ್ಸನ್, ಗಾಮಾ ಹಾಗೂ ವೀರೇಂದ್ರ ಮುಖ್ಯರಾದವರು. ಗಾಮಾ ತನ್ನ ಲೋಕದವರ ವಿಶಿಷ್ಟ ಶಕ್ತಿಯಿಂದ ಬೇಸತ್ತವನಾಗಿ ಪುನಃ ತನ್ನ ಲೋಕಕ್ಕೆ ಹೋಗಲು ಇಷ್ಟಪಡದೆ ಭಾರತದಲ್ಲೇ ಉಳಿಯುತ್ತಾನೆ. ಇಲ್ಲಿನ ಪುರಾಣ ವಾಸ್ತು ಶಿಲ್ಪಗಳಲ್ಲಿ ಆಸಕ್ತನಾದ ಗಾಮಾನನ್ನು ಮತ್ತೆ ತಮ್ಮ ಲೋಕಕ್ಕೆ ಕರೆದೊಯ್ಯಲು ಲೋಕಕರ್ತೃವಿನ ಆಜ್ಞೆಯಂತೆ ಶಾಂತಲಾ, ವೀರೇಂದ್ರ, ಗುರು ಬರುತ್ತಾರೆ. ಕಾದಂಬರಿಯಆರಂಭ ರುದ್ರಯ್ಯನು ತನ್ನ ಒಡೆಯ ಒಡತಿಯರನ್ನು ಸ್ವಾಗತಿಸುವುದರೊಂದಿಗೆ ಆಗಿದೆ. ಒಮ್ಮೆ ರುದ್ರಯ್ಯನಿಗೆ ಜ್ವರ ಬಂದಾಗ ಅವನ ಮಗ ಶಿವಯ್ಯ ಮನೆ ಕಾವಲಿಗೆ ಬಂದು ಶಾಂತಲಾ ಗುರು ಅವರ ಅಮಾನುಷ ಶಕ್ತಿಯನ್ನು ಕಂಡು ದೆವ್ವವೆಂದು ಬಗೆದು ಖಾಯಿಲೆ ಬೀಳುತ್ತಾನೆ.

ಗಾರೆ ಕೆಲಸದ ಸುದೃಢ ಯುವಕ ಶಿವಯ್ಯ ಮೈಸೂರಿನ ಬಳಿ ಗಾರೆ ಕೆಲಸ ಮಾಡುತ್ತಾ ದೆವ್ವದ ನೆನಪಿನಿಂದ ಭೀತನಾಗಿ ಮೂರ್ಛೆ ಬೀಳುತ್ತಾನೆ. ಪತ್ತೇದಾರ ಪ್ರಶಾಂತ, ಭಾರತೀಯ ಇತಿಹಾಸದಲ್ಲಿ ಡಾಕ್ಟರೇಟ್ ಪಡೆದ ರೀಟಾ, ಹಾಗೂ ಪ್ರಶಾಂತನ ಸಹಾಯಕ ಗುಂಡಪ್ಪ ಇವರಿಗೆ ಇದರ ಬಗೆಗೆ ಕುತೂಹಲ ಹುಟ್ಟಿ ಅನ್ಯ ಲೋಕದ ರಹಸ್ಯ ಭೇದಿಸುವ ಪ್ರಯತ್ನ ಮಾಡುತ್ತಾರೆ. ಈ ಮಧ್ಯೆ ಪುರಾತತ್ವ ಇಲಾಖೆಯ ಖ್ಯಾತ ಅಧಿಕಾರಿ ನರಸಿಂಹಮೂರ್ತಿಗಳ ಅಪಹರಣವಾಗುತ್ತದೆ. ಮುಳ್ಳಯ್ಯನ ಗಿರಿಯ ಬೆಟ್ಟ, ಕೊಳ್ಳಗಳಲ್ಲಿ ಚಂದರಸನೆಂಬ ಜೈನರಾಜನ ನಿಧಿಯಿರುವುದನ್ನು ಕೇಳಿದ ಜಾರ್ಜ್, ಕಣ್ಣನ್, ನಿಂಗ ಅದನ್ನು ಪಡೆಯುವ ಹೊಂಚು ಹಾಕಿ ನಕ್ಷೆಯನ್ನು ಸಂಪಾದಿಸುತ್ತಾರೆ. ಮುಳ್ಳಯ್ಯನ ಗಿರಿಯಲ್ಲಿರುವ ಯೋಗಿಗಳ ದರ್ಶನವಾಗುವುದೆಂಬ ಹಂಬಲದಿಂದ ಗಾಮಾನೂ ತನ್ನ ತಂಡದೊಡನೆ ಹೊರಡುತ್ತಾನೆ. ಈ ಮೊದಲು ಗಾಮಾನ ಇರುವನ್ನು ತಿಳಿದುಕೊಳ್ಳಲು ಬಂದ ಪ್ರಶಾಂತ, ರೀಟಾ, ಗುಂಡಪ್ಪ ಅವನ ಬಂಧಿಗಳಾಗುತ್ತಾರೆ.

ಗಾಮಾನಿಗೊಬ್ಬಳು ಸಹಾಯಕಿ. ಅವಳೇ ಸರಸ್ವತಿ. ಅವಳಿಗೂ ಪರಮಾತ್ಮ ಸಾಕ್ಷಾತ್ಕಾರದ ಬಯಕೆ. ಖದೀಮರನ್ನು ಹಿಡಿಯಲು ಹೊರಟ ಪೋಲಿಸ್ ಇಲಾಖೆಯ ಚಂಡೀದಾಸ, ಅವನ ಸಹಾಯಕ ಶಿವಾಜಿ, ಗಾಮಾನನ್ನು ತಮ್ಮೊಡನೆ ಕರೆದೊಯ್ಯ ಬಯಸಿದ ಶಾಂತಲಾ ಗುರು, ವೀರೇಂದ್ರ ಮುಂತಾದ ಅನ್ಯಲೋಕ ಜೀವಿಗಳು-ಹೀಗೆ ಇವೆಲ್ಲರ ನಡುವಿನ ಸಾಹಸಮಯ, ಘರ್ಷಣಾಮಯ, ಅದ್ಭುತರಮ್ಯವಾದ ಘಟನೆ ಗಳಿಂದ ಈ ಕಾದಂಬರಿ ಕೂಡಿದೆ. ಯೋಗಿಗಳ ವಿಚಾರ, ಯೋಗಿಯೊಬ್ಬ ಹೆಬ್ಬಾ ವನ್ನು ಹೊತ್ತುಕೊಂಡು ಗುಹೆಯಿಂದ ಹೊರ ಬರುವುದು, ಖದೀಮರು ತಪ್ಪಿಸಿ ಕೊಳ್ಳುವ ಸೂಕ್ಷ್ಮ ಚಾತುರ್ಯ ಕೊನೆಗೆ ದುರಂತದಲ್ಲಿ ಖದೀಮರು ಸಾವು, ಅನ್ಯ ಲೋಕದ 'ಲೋಕಕರ್ತೃವೇ ಬಂದರೂ ಯೋಗಿಗಳಿಂದ ಅಜೇಯನಾಗಿ ಉಳಿದ ಗಾಮಾ, ಮರಳಿ ತನ್ನ ಲೋಕಕ್ಕೆ ಹೋಗದಿರುವುದು, ನರಸಿಂಹಮೂರ್ತಿ ತಮ್ಮ ತಾತನೇ ತಿಮ್ಮಾಭಟ್ಟನೆಂದು ಹೇಳುವುದು, ಸರಸ್ವತಿಗೆ ಒದಗಿದ ವಿಚಿತ್ರ ಸನ್ನಿವೇಶ, ಇವುಗಳೆಲ್ಲವನ್ನೂ ತಿಳಿದುಕೊಳ್ಳಲು ರೋಮಾಂಚನಕಾರಿಯಾದ ಅನುಭವವನ್ನು ನೀಡುವ ಚೈತನ್ಯರ 'ಆಕಾಶದಿಂದ ಇಳಿದವರು' ಕಾದಂಬರಿ ಎಲ್ಲರೂ ಓದುವಂತಹು ದಾಗಿದೆ.

ಕಾದಂಬರಿ ಹೀಗೆ ಕೊನೆಗೊಳ್ಳುತ್ತದೆ. "ಪ್ರಶಾಂತ ಗುಂಡಪ್ಪ, ಮತ್ತು ರೀಟಾ ತಮ್ಮ ಕಾರಿನಲ್ಲಿ ಮೈಸೂರು ತಲಪಲು ಸಾಗಿದರು. ಆಯ ತಪ್ಪಿದ ದೋಣಿಯಂತೆ ಸರಸ್ವತಿಯು, ಗಾಮಾನ ಕಾರಿನಲ್ಲಿ ಹೊರಟಳು ಮೈಸೂರನ್ನು ತಲಪಿದೊಡನೆ ಜೋಲ್ಪ್ ಆಫೀಸಿನಲ್ಲಿ ಶಿವಯ್ಯ ನಗುನಗುತ್ತಾ ಪ್ರಶಾಂತ ಮತ್ತು ಇತರರನ್ನು ಬರಮಾಡಿಕೊಂಡ. "ಅವರು ದೆವ್ವ ಅಲ್ಲವೇ ಸಾರ್" ಎಂದು ಕೇಳಿದ. ಮೂವರೂ ಮೌನವಾಗಿದ್ದರು".

ಯಾವುದೇ ರೋಚಕವಾದ ವಿವರಗಳ ವರ್ಣನೆಯಿಲ್ಲದೆ ಸರಳ ಭಾಷಾ ಶೈಲಿ ಯಲ್ಲಿ ರಚಿತವಾಗಿರುವ ಈ ಸೊಗಸಾದ ಕಾದಂಬರಿ ಇತರ ಪತ್ತೇದಾರಿ ಕಾದಂಬರಿ ಗಳಿಗಿಂತಲೂ ಒಂದು ವಿಶಿಷ್ಟವಾದ ಪತ್ತೇದಾರಿ ಕಾದಂಬರಿಯಾಗಿದೆ. ಆದರೆ ಕಾದಂಬರಿಯ ಮುಖಚಿತ್ರ, ಮುದ್ರಣಕ್ಕಾಗಿ ಬಳಸಲಾದ ಕಾಗದ ಕಳಪೆ ಮಟ್ಟದ್ದಾಗಿರು ವುದು ಈ ಕಾದಂಬರಿಯ ಕೊರತೆಯೇ ಆಗಿದೆ.

ಐತಿಹಾಸಿಕ ಸಾಮಾಜಿಕ ಕಾದಂಬರಿಗಳಷ್ಟೇ ಸಮರ್ಥವಾಗಿ ತಾವು ಪತ್ತೇದಾರಿ ಕಾದಂಬರಿಯನ್ನು ಬರೆಯಬಲ್ಲರೆಂಬುದನ್ನು ಹೆಚ್. ವಿಠಲಶೆಣೈರವರು "ಕೃತಕಉಪಗ್ರಹ ರಹಸ್ಯ"ದಲ್ಲಿ ತೋರಿಸಿ ಕೊಟ್ಟಿದ್ದಾರೆ. ಅಜಿತ್‌ಸಿಂಗ್‌ಎಂಬ ಭಾರತೀಯನು ರಷ್ಯಾ ದೇಶದಲ್ಲಿ ನಡೆದ ಸೈಕಲ್ ಸವಾರರ ಸ್ಪರ್ಧೆಯಲ್ಲಿ ಪ್ರಥಮವಾಗಿ ಗೆಲ್ಲುವುದರ ವಿಷಯ ದಿಂದ ಕಾದಂಬರಿ ಆರಂಭಗೊಂಡಿದೆ. ರಷ್ಯಾದ ಸಂಸ್ಥೆಯೊಂದನ್ನು ಭಾರತೀಯ

ವೈಜ್ಞಾನಿಕ ಸಂಘದ ಶಿಷ್ಟ ಮಂಡಲಿಯೊಂದು ಸಂದರ್ಶಿಸಲು ಇಚ್ಛಿಸಿದ್ದಿತು. ಅದ ಕ್ಕಾಗಿಯೇ ರಷ್ಯನ್ ಸಂಸ್ಥೆಯ ಮುಖ್ಯಸ್ಥ 'ಗ್ಲೆಬ್‌ಸ್ಕಿ' ಒಬ್ಬರೇ ಸಂಸ್ಥೆಯಲ್ಲಿ ಇದ್ದಾಗ ಅವರ ಕೊಲೆಯಾಗಿರುತ್ತದೆ. ಇಲ್ಲಿಂದ ಪತ್ತೇದಾರಿ ಕಾದಂಬರಿಯಲ್ಲಿನ 'ಸಸ್ಪೆನ್ಸ್' ಆರಂಭವಾಗುತ್ತಾ ಹೋಗುತ್ತದೆ. 'ಗ್ಲೆಬ್‌ಸ್ಕಿ'ಯವರು ತಮ್ಮ ಶ್ವೇತಮಂದಿರದಲ್ಲೇ ಮಡಿದು ಬಿದ್ದಿರುವುದನ್ನು ಮೊದಲು ಕಂಡವರೇ ಇವಾನ್. ಅವರು ಕೂಡಲೇ ಪೋಲಿಸಿನ ವೆಲಿಚ್ಕೋ ಅವರನ್ನು ಕರೆಸಿಕೊಳ್ಳುತ್ತಾರೆ. ಕೊಲೆಯ ಕಾರಣವನ್ನು ವೆಲಿಚ್ಕೋ ಹೀಗೆ ವಿಶ್ಲೇಷಿಸಿಕೊಳ್ಳುತ್ತಾರೆ. "ವೆಲಿಚ್ಕೋ ಶವವನ್ನು ನಿರೀಕ್ಷಿಸಿದರು. ವಿಷಾಕ್ತ ಸೂಜಿಯ ಪ್ರಯೋಗದಿಂದ ಕೊಲೆ ನಡೆದಿದೆಯೆಂದು ಅವರು ಊಹಿಸಿದರು ಅವರು ಕುರ್ಚಿಯ ಹಿಂದೆ ನಿಂತಾಗ ಕೊಲೆಗಾರನು ಹಿಂದಿನಿಂದ ಬಂದು ಸೂಜಿಯನ್ನು ಚುಚ್ಚಿರಬೇಕೆಂದೂ ವೃದ್ಧ ಗ್ಲೆಬ್‌ಸ್ಕಿಯವರು ಕೂಡಲೇ ಅಲ್ಲೇ ಸತ್ತುಬಿದ್ದಿರಬೇಕೆಂಬು ದನ್ನೂ ತರ್ಕಿಸಿದರು. ವೆಲಿಚ್ಕೋರವರ ಪೋಲೀಸ್ ತನಿಖೆ ಆರಂಭವಾಯಿತು. ಎಲ್ಲದಕ್ಕೂ ಮುಖ್ಯವಾದುದನ್ನು ಜ್ಞಾಪಿಸಿಕೊಂಡು ವೆಲಿಚ್ಕೋ ಕೇಳಿದರು. "ಕೃತಕ ಉಪಗ್ರಹ ರಚನೆಯ ರಹಸ್ಯಗಳನ್ನೊಳಗೊಂಡ ಕಾಗದ ಪತ್ರಗಳು ಎಲ್ಲಿಡಲ್ಪಟ್ಟಿವೆ ಯೆಂದು ಹೇಳಬಲ್ಲಿರಾ? ಇವಾನ್ ಕೈ ಬೆರಳಿನಿಂದ ಅವುಗಳನ್ನಿಟ್ಟಿದ್ದ ಜಾಗವನ್ನು ತೋರಿಸಿದರು. ಹೀಗೆಯೇ ಕಾದಂಬರಿ ಮುಂದುವರಿಯುತ್ತದೆ. ಮಧ್ಯೆ ಮಧ್ಯೆ ಕಾದಂಬರಿಯಲ್ಲಿ ವರ್ಣನೆಗಳ ಪೂರವೇ ಹರಿದಿದೆ. ಅಲ್ಲಿ ಕವಿತಾ ಗಂಗೆ ಹರಿದಿದೆಯೆಂದೇ ಹೇಳಬೇಕು. ಏಕೆಂದರೆ ಶೆಣೈಯವರು ಹಾಗೆ ವರ್ಣಿಸುತ್ತಾ ಹೋಗುತ್ತಾರೆ. ಉದಾ ಹರಣೆಗೆ, ಮೂರನೆಯ ಭಾಗವಾದ 'ಜೋಗ್‌ದಲ್ಲಿ' ಜೋಗ್ ಜಲಪಾತದ ವರ್ಣನೆ ಹೀಗೆ ಬಂದಿದೆ. ಬಂಗಾಲೀ ಕೃತಿಗಳ ಶೈಲಿಯಂತಿದೆ ಇದು. "ಚಂದ್ರ ಕಿರಣಗಳು ಬಿದ್ದಾಗ ಶಿವನ ಜಟಾಜೂಟಕ್ಕೆ ಆಗಸದಿಂದ ಭೋರ್ಗರೆಯುತ್ತ ನೆಗೆಯುವ ಧವಲ ಆಕಾಶಗಂಗೆಯಂತೆ ತೋರಿ ಜಲಪಾತದ ಶಿರೋಭಾಗದಲ್ಲಿ ಕಂಗೊಳಿಸುವ ಚಂದ್ರನು ಶಿವನ ತಲೆಯಲ್ಲಿರುವ ಅರ್ಧೇಂದುವಿನಂತೆ ವಿರಾಜಿಸುವನು. ವರ್ಷಾ ಕಾಲದ ಮಳೆಯ ಅಜಸ್ರಧಾರೆ ಸುರಿವಾಗ ಶಿವನ ಪ್ರಳಯ ನಾಟ್ಯ ಆರಂಭವಾಯಿತೋ ಎಂಬಂತೆ ರೌದ್ರರವ ಭೂಕಂಪವನ್ನುಂಟು ಮಾಡುವುದು, ಪ್ರಳಯಾಗ್ನಿಯ ಧೂಮ ರಾಶಿಯಂತೆ ಹೊಗೆ ಬಾನ್‌ಬುವಿಗಳನ್ನು ಮುಸುಕುವುದು. ಅದ್ಭುತ ಮಹೇಂದ್ರ ಜಾಲವು ನಡೆದು ಹೊಗೆಯ ಪರದೆಯೊಂದು ಜಲಪಾತವು ಅದೃಶ್ಯವಾಗುವಂತೆ ಮಾಡುವುದು". ಹಾಗೆಯೇ ಈ ವರ್ಣನೆಯನ್ನು ಗಮನಿಸಬಹುದು.

"ಕವಿತಾಶೈಲಿಯಲ್ಲಿ ಹೇಳುವುದಾದರೆ ವಿದ್ಯುಲ್ಲಕ್ಷ್ಮಿ ಇಲ್ಲಿ ಸದಾಕಾಲ ಹಾಡು ತ್ತಿದ್ದಾಳೆ. ಜಲದೇವಿ ತಾಂಡವನಾಟ್ಯವಾಡುತ್ತಿದ್ದಾಳೆ. ಪ್ರಕೃತಿದೇವಿಯು ಹಾಡನ್ನು ಕೇಳಿ ಮುಗುಳು ನಗುವಳಾದರೆ ತಾಂಡವ ನಾಟ್ಯವನ್ನು ಕಂಡು ಬೆರಗಾಗಿ ದ್ದಾಳೆ. ಪ್ರಕೃತಿ ದೇವಿಯ ಇಬ್ಬಗೆಯ ಭಾವಗಳನ್ನು ಇಲ್ಲಿ ಸುಲಭವಾಗಿ ಗುರುತಿಸ

ಬಹುದು.” ಇಂತಹ ವರ್ಣನೆಗಳು ಈ ಕಾದಂಬರಿಗೆ ಅಗತ್ಯವಿತ್ತೆ? ಎಂಬ ಪ್ರಶ್ನೆ ಓದುಗರಿಗೆ ಸಹಜವಾದರೂ ಓದುವ ಓಟ ಅವರನ್ನು ಓಡಿಸಿಕೊಂಡು ಹೋಗುತ್ತದೆ. ಕೃಷ್ಣ ಕುಮಾರ, ವಿಲಾಸಿನಿ, ವಿಕ್ಟರ್ ಹೀಗೆ ಹಲವಾರು ಪಾತ್ರಗಳನ್ನೊಳಗೊಂಡಿರುವ "ಕೃತಕ ಉಪಗ್ರಹ ರಹಸ್ಯ" ಪತ್ತೇದಾರಿ ಕಾದಂಬರಿ ಒಂದು ಸಲ ಓದಬಹುದಾದಂತಹ ಕಾದಂಬರಿ. ಈ ಕಾದಂಬರಿಯ ಬಗೆಗೆ ಇನ್ನೇನು ಹೇಳದಿರುವುದೇ ಮೇಲು.

ಖ್ಯಾತರಾದ. ಗೀತಾನಂದರ, ಇತರ ಪತ್ತೇದಾರಿ ಕಾದಂಬರಿಗಳ ಗುಂಪಿನಲ್ಲಿಯೇ 'ವಿಜ್ಞಾನಿಯ ಕೊಲೆ'ಯೂ ಸೇರಿಹೋಗುತ್ತದೆ. ಗೀತಾನಂದರು 'ವಿಜ್ಞಾನಿಯ ಕೊಲೆ' ಎಂಬ ಕಾದಂಬರಿಯ ಕಥೆ ಇದು. ಖ್ಯಾತ ವಿಜ್ಞಾನಿಯಾದ ಪ್ರೊ. ಚಂದ್ರಶೇಖರಯ್ಯನವರು 'ಮಾತನಾಡುವ ಮಿದುಳುಗಳು' ಎಂಬುದರ ಬಗೆಗೆ ಸಂಶೋಧನೆ ಮಾಡಿ ಲೇಖನವನ್ನು ಬರೆದಿರುತ್ತಾರೆ. ಆದರೆ ಅದನ್ನು ಪ್ರಕಟಪಡಿಸುವಷ್ಟರಲ್ಲಿಯೇ ಕೊಲೆಯಾಗಿ ಹೋಗಿರುತ್ತಾರೆ. ಅವರಿಗೆ ಸಂಶೋಧಿಸಲು, ಪ್ರಯೋಗ ನಡೆಸಲು ಮಾನವರ ಮಿದುಳುಗಳನ್ನು ಒದಗಿಸುತ್ತಿದ್ದವರ ಹಿಂದೆ ಭಾರೀ ರಾಜಕೀಯ ಜಾಲವೇ ಗೋಚರಿಸುತ್ತದೆ. ಸಮಾಧಿಗಳನ್ನಗೆದು ಹೆಣಗಳ ತಲೆಬುರುಡೆಯನ್ನಪಹರಿಸುವುದಿರಲಿ ಜೀವಂತ ಮಾನವರನ್ನೇ ಹಿಡಿದುಕೊಂಡು ಹೋಗಿ ಕೊಂದು ಅವರ ಮಿದುಳನ್ನುಪಯೋಗಿಸಿಕೊಳ್ಳುವ ನೀಚ ಕಾರ್ಯ ನಡೆಯುತ್ತಿರುತ್ತದೆ. ಇವರೆಲ್ಲರಿಗಿಂತ ಮುಖ್ಯ ವ್ಯಕ್ತಿಯಾಗಿ ಖ್ಯಾತಿವೆತ್ತವನು ಗುರುಸಿದ್ದಪ್ಪ. ಅವನು ಹೇಳಿದ್ದೇ ಮಾತು ಆಡಿದ್ದೇ ಆಟ. ಬೇರೆ ವಿಚಾರವೇ ಇಲ್ಲ. ಅವನಿಗೆ ಬುದ್ಧಿ ಹೇಳಹೋದವರು ಈ ಲೋಕದಲ್ಲೇ ಇಲ್ಲವಾಗುತ್ತಾರೆ, ಅಷ್ಟೆ. ಇವನ ಜಾಲವನ್ನು ಪತ್ತೇದಾರರು ಭೇದಿಸುತ್ತಾರೆ. ಚಂದ್ರಶೇಖರಯ್ಯನವರ ಮನೆಯಸುತ್ತ ಪೋಲಿಸಿನವರ ಕಾವಲಿಡುವಷ್ಟರ ಮಟ್ಟಿಗೆ ಗುರುಸಿದ್ದಪ್ಪ ಎಂ. ಎಲ್.ಎ. ಗಳನ್ನು ತನ್ನ ವಶಪಡಿಸಿಕೊಂಡಿರುತ್ತಾನೆ. ಪತ್ರಿಕೆಯ ಸಂಪಾದಕ ಕೃಷ್ಣಮೂರ್ತಿಯೂ ಗುರುಸಿದ್ದಪ್ಪನ ಬೆಂಬಲಿಗ, ಆದರೆ ಉಪಸಂಪಾದಕ ಇದಕ್ಕೆ ವಿರುದ್ಧ. ಉಪಸಂಪಾದಕನ ಗೆಳತಿಯೂ ಶ್ರೀಮಂತರ ಮಗಳೂ ಆದ ನಿರ್ಮಲಾ ರಹಸ್ಯವನ್ನು ಭೇದಿಸಹೋಗುತ್ತಾಳೆ. ಆದರೆ ಈ ಮಧ್ಯೆ ನಿರ್ಮಲಾಳ ಅಪಹರಣವಾಗುತ್ತದೆ. ಪತ್ತೇದಾರನನ್ನು ಕರೆಸಿದಾಗ ಆತ ದುಷ್ಟರ ರಹಸ್ಯವನ್ನು ಕಂಡುಹಿಡಿಯುತ್ತಾನೆ.

ಗೀತಾನಂದರ ಪತ್ತೇದಾರಿ ಕಾದಂಬರಿ 'ಅಪಹರಣ'. ಅವರದೇ ಮತ್ತೊಂದು ಕಾದಂಬರಿಯಾದ 'ವಿಜ್ಞಾನಿಯ ಕೊಲೆ'ಗಿಂತಲೂ ಚೆನ್ನಾಗಿದೆ. ಅಪಹರಣ ಕಾದಂಬರಿಯ ಹಿಂಬದಿಯ ರಕ್ಷಾಪುಟದಲ್ಲಿ ಇಡೀ ಕಾದಂಬರಿಯ ಸಾರಾಂಶವನ್ನು ಕೆಲವೇ ವಾಕ್ಯಗಳಲ್ಲಿ ಕೊಡಲಾಗಿದೆ. ಅದನ್ನೇ ಇಲ್ಲಿ ಕೊಡಬಹುದು. “ಯಾಲಕ್ಕಿ ಗುಂಡಿ” ಕಾಫಿ ಎಸ್ಟೇಟಿನ ಯಜಮಾನ ನಯ್ಯರ ಹೊರಗಡೆಗೆ ಪ್ರಾಮಾಣಿಕನಂತೆ ನಟಿಸುತ್ತ ಒಳಗೊಳಗೆ 'ಬ್ಲಾಕ್ ಹೌಂಡ್ಸನ' ಕುಪ್ರಸಿದ್ಧ ಕಳ್ಳಸಾಗಣೆದಾರ ಜಾನ್ ನಂಬೂದರಿಯ ಬಲಗೈಯಂತಿರುತ್ತಾನೆ. ಡಿ.ಐ.ಜಿ. ಬಿಡ್ಡಪ್ಪನವರ ಮಗಳಾದ ರತಿ ಈ ಜಾಲದಲ್ಲಿ ಸಿಕ್ಕಿಹಾಕಿಕೊಳ್ಳುತ್ತಾಳೆ. ಈ ಮಧ್ಯೆ ಕೂಲಿಕಾರರ ಪರವಾಗಿ ಕೆಲಸ ಮಾಡುತ್ತಿದ್ದ

ಕಮ್ಯುನಿಸ್ಟ್ ಕಾರ್ಯಕರ್ತ ಮುರುಗನ್‌ನ ಅಪಹರಣವಾಗುತ್ತದೆ. ಆದರೆ ಪತ್ತೇದಾರ ಕ್ಯಾII ಆನಂದನು ಸಿ.ಬಿ.ಐ. ಅಧಿಕಾರಿ ಚೌದರಿಯವರ ಸಂಗಡ ಕೂಡಿಕೊಂಡು ಜಾನ್ ನಂಬೂದರಿಯನ್ನು ಬಯಲಿಗೆಳೆಯುತ್ತಾನೆ."

ಕಾದಂಬರಿಗೆ 'ಅಪಹರಣ'ವೆಂಬ ಹೆಸರು ಏಕೆಂದರೆ ಇಲ್ಲಿ ಯುವತಿಯರನ್ನು ಅಪಹರಣ ಮಾಡಲಾಗುತ್ತದೆ ಹಾಗೂ ಕಮ್ಯುನಿಸ್ಟ್ ನಾಯಕನಾಗಲಿ, ಅಥವಾ ತಮ್ಮನ್ನು ವಿರೋಧಿಸುವ ಇತರ ಯಾರಿಗೇ ಆಗಲಿ ಬ್ಲಾಕ್ ಹೌಂಡ್ಸನ ಕಡೆಯವರು ಅಪಹರಿಸಿ ಕಿರುಕುಳ ಕೊಡುತ್ತಾರೆ.

ಕಾದಂಬರಿಯ ನಾಯಕಿಯಾದ 'ರತಿ' ಹೆಸರಿಗೆ ತಕ್ಕಂತಿದ್ದಳು. ಬಿಡ್ಡಪ್ಪನವರ ಮಗಳಾದ ಅವಳು ಮಾನಸಗಂಗೋತ್ರಿಯಲ್ಲಿ ಎಂ.ಎ., ಪದವಿಗಾಗಿ ಓದುತ್ತಿದ್ದಳು· ಅಲ್ಲಿ ಕಾಲಕ್ರಮೇಣ ನಯ್ಯರನ ಸಂಪರ್ಕಕ್ಕೆ ಬಂದಳು. ನಯ್ಯರ್ ನೋಡಲು ಸುಂದರ· ಅವನ ಸೌಂದರ್ಯಕ್ಕೆ ಮರುಳಾಗಿ ರತಿ ಅವನೊಡನೆ ಲೈಂಗಿಕ ಸುಖವನ್ನು ಬಯಸಿದ್ದಳು. ಆದರೆ ಸುಂದರಾಂಗನಾದ ನಯ್ಯರ್ ಪೌರುಷ ಹೀನನಾದವನೆಂಬ ಅಂಶ ಅವಳಿಗೆ ಗೊತ್ತಾಯಿತು. ನಪುಂಸಕನಾದ ನಯ್ಯರ್‌ನಿಂದ ದೂರವಾಗಲು ಅವಳು ಬಯಸಿದಂತೆ ಅವನ ಜಾಲದಲ್ಲಿ ಆಳವಾಗಿ ಸಿಲುಕಿಕೊಳ್ಳುತ್ತಾ ಹೋದಳು. ಅವನು ಅವಳನ್ನು ಸೀದಾ ತನ್ನ ಗುರುಗಳ ಬಳಿಗೆ ಕರೆದೊಯ್ದ. ಅವನ ಗುರು ಜಾನ್ ನಂಬೂದರಿ ಕೇರಳದಲ್ಲಿದ್ದವ. ಅಲ್ಲಿಗೆ ರತಿಯನ್ನು ಕರೆದುಕೊಂಡು ಹೋಗಿ ಅವನ ಎದುರು ನಗ್ನ ಮಾಡಲಾಯಿತು. ಗುರುವಿನ ಎದುರು ಚಾಕುವಿನಿಂದ ಅವಳ ಮರ್ಮಾಂಗದಿಂದ ರಕ್ತತೆಗೆದು ಅವಳ ಹೆಣ್ತನವನ್ನು ಅಪಹರಿಸಲಾಯಿತು. ಇದೊಂದು ಚಟ ನಂಬೂದರಿಗೆ. ಅಲ್ಲಿಂದ ಮತ್ತೆ ರತಿ ಯಾಲಕ್ಕಿಗುಂಡಿ ಎಸ್ಟೇಟಿಗೆ ಬಂದು ನಯ್ಯರನೊಡನಿರುತ್ತಾಳೆ. ತನಗಾದುದಕ್ಕೆ ಪ್ರತೀಕಾರ ತೆಗೆದುಕೊಳ್ಳಲು ಸುಂದರ ದೃಢಕಾಯರಾದ ಯುವಕರನ್ನು ಬಯಸಿ ಅವರೊಡನೆ ರಮಿಸಿ ಅವರನ್ನು ಕೆಡಿಸುತ್ತಾಳೆ. ಬ್ಲಾಕ್ ಹೌಂಡ್ಸನ ದುಷ್ಕೃತ್ಯಗಳ ವರ್ಣನೆ, ವೆಂಕಟೇಶ ಶೆಟ್ಟಿಯ ವಜ್ರಗಳ ಹುಚ್ಚು, ಲಕ್ಕ, ಕುಟ್ಟಿಯವರ ಕೊಲೆ, ರತಿಯ ಕಾರಣ ಎಲ್ಲರನ್ನೂ ಹಿಡಿದು ಕ್ಯಾ ಆನಂದ ಪೋಲಿಸಿನವರಿಗೆ ಒಪ್ಪಿಸುವುದು, ನಯ್ಯರ್ ಹಾಗೂ ನಂಬೂದರಿಗೆ ಕೊನೆಯಲ್ಲಿ ಭಿನ್ನಾಭಿಪ್ರಾಯಗಳ ಕಾರಣ ದ್ವೇಷ ಉಂಟಾಗುವುದು, ಇವೆಲ್ಲವೂ ಕಾದಂಬರಿಯಲ್ಲಿ ಸೊಗಸಾಗಿ ಬಂದಿದೆ. ಆಧುನಿಕ ಚಲನಚಿತ್ರವೊಂದಕ್ಕೆ ಬೇಕಾಗಬಲ್ಲಂತಹ ಸಮಗ್ರ ಸಾಮಗ್ರಿಗಳೂ ಈ ಪತ್ತೇದಾರಿ ಕಾದಂಬರಿಯಲ್ಲಿದೆ ಎಂದು ಹೇಳಬಹುದು.

ಕಾಕೋಳು ರಾಮಯ್ಯನವರ 'ಚಕ್ರವ್ಯೂಹದಲ್ಲಿ ಚಾಣಕ್ಯ' ಇತರ ಪತ್ತೇದಾರಿ ಕಾದಂಬರಿಗಳ ಸಾಲಿನಲ್ಲೇ ನಿಲ್ಲುತ್ತದೆ. ಈ ಕಾದಂಬರಿಯಲ್ಲಿ ಚಾಣಕ್ಯನ ಸಾಹಸಗಳು, ಚೆಂಗೀಸ್‌ಖಾನನ ಕುಯುಕ್ತಿ ಇವುಗಳನ್ನು ಲೇಖಕರು ಹೃದಯಂಗಮವಾಗಿ ವರ್ಣಿಸಿ ಕಾಕೋಳು ರಾಮಯ್ಯನವರು ಒಂದು ಪತ್ತೇದಾರಿ ಕಾದಂಬರಿಯಲ್ಲಿರಬೇಕಾದ ಎಲ್ಲಾ ಮಸಾಲೆಗಳನ್ನು ಇದರಲ್ಲಿ ತುಂಬಿಸಿದ್ದಾರೆ. ಒಮ್ಮೆ ಕಾದಂಬರಿಯನ್ನು ಹಿಡಿದರೆಂದ

ಮೇಲೆ ಪೂರ್ಣ ಓದುವಂತೆ ಅದು ಮಾಡುತ್ತದೆ. ಚಾಣಕ್ಯನ ದೇಶಭಕ್ತಿ, ಹೊರದೇಶ ದವರು ಅಪಹರಿಸಿಕೊಂಡು ಹೋಗಿದ್ದ ರಹಸ್ಯ ಪತ್ರಗಳನ್ನು ವೇಷ ಮರೆಸಿಕೊಂಡು ಅಲ್ಲಿಗೇ ಹೋಗಿ ಚಾಣಕ್ಯತನದಿಂದ ವಾಪಸ್ಸು ತರುವುದು ಇವು ಚೆನ್ನಾಗಿ ಚಿತ್ರಿತ ವಾಗಿವೆ. ಈ ಕಾದಂಬರಿಯ ಮುಖಪುಟ ಚೆನ್ನಾಗಿದ್ದರೂ ಮುದ್ರಣಕ್ಕಾಗುಪಯೋಗಿ ಸಿದ ಕಾಗದ ಕಳಪೆಯಾಗಿದೆ.

—ಕೆ. ರಮಾನಂದ

○ ○ ○ ○ ○

ಮಹಿಳೆಯರು ಬರೆದ ಕಾದಂಬರಿಗಳು

ಪ್ರತಿ ವರ್ಷದಂತೆ ಈ ವರ್ಷವೂ ಮಹಿಳೆಯರು ಬರೆದ ಅನೇಕ ಕಾದಂಬರಿ ಗಳು ವಿಮರ್ಶೆಗೆ ಬಂದಿವೆ. ಈ ಕಾದಂಬರಿಗಳ ಸಂಖ್ಯೆ ಹೆಚ್ಚಾಗಿದೆಯೇ ವಿನಃ ಗುಣ, ಮೌಲ್ಯಗಳ ದೃಷ್ಟಿಯಿಂದ ನೋಡಿದಾಗ ಯಾವ ಹೊಸ ಅಂಶವೂ ಗೋಚರಿಸುವುದಿಲ್ಲ. ಸಾವಿರಾರು ಪುಟಗಳ ಕಾದಂಬರಿಗಳನ್ನು ಬರೆದು ಹಾಕುವ ಮಹಿಳಾ ಲೇಖಕಿಯರು ಸಂಶೋಧನೆ, ವಿಮರ್ಶೆ, ಹಸ್ತಪ್ರತಿಗಳ ಸಂಪಾದನೆ ಇವುಗಳ ಕಡೆ ಗಮನ ಹರಿಸದೆ ಇರುವುದು ತುಂಬಾ ವಿಷಾದನೀಯವಾದ ಸಂಗತಿಯಾಗಿದೆ. ಪ್ರೇಮ, ಕಾಮ, ಮಹಿಳೆಯರ ಸಾಮಾಜಿಕ ಸಮಸ್ಯೆಗಳು, ಅವರ ಅಲಂಕಾರದ ವೈಖರಿ, ಅವರು ಮಾಡುವ ಅಡಿಗೆಗಳ ವರ್ಣನೆ, ಮೂಢನಂಬಿಕೆಗಳಿಗೆ ಒಳಗಾಗಿ ಅವುಗಳನ್ನು ಆಚರಿಸುವ ವಿಧಾನ, ವಿಪರೀತವಾದ ದೈವಭಕ್ತಿ, ಶ್ರೀಮಂತ ಗಂಡ-ಬಡ ಹೆಣ್ಣುಮಗಳು, ಅತ್ತೆ-ಸೊಸೆಯರ ಹಳಸಲು ಪ್ರಸಂಗಗಳು, ಅತಿಶಯವಾದ ಘಟನೆ ಗಳು, ಸಿನಿಮಾದಲ್ಲಿ ನಡೆಯುವಂತಹ ಪ್ರಸಿದ್ಧವೂ ಆಕಸ್ಮಿಕವೂ ಆದ ನಡವಳಿಕೆಗಳು,- ಈ ವಿಷಯಗಳ ಬಗೆಗೇ ಬರೆಯಲಾದ ಕಾದಂಬರಿಗಳಲ್ಲಿ ಓದುಗರಾಗಲಿ, ವಿಮರ್ಶಕ ರಾಗಲಿ ಹೊಸತನವನ್ನೂ, ಹೊಸ ವಿಧಾನಗಳನ್ನು ಅಳವಡಿಸಿರುವ ಬಗೆಯನು ತಿಳಿಯುವುದು, ಮರಳುಗಾಡಿನ ಯಾತ್ರಿಕರು ಓಯಸಸ್‌ನು ಹುಡುಕಿಕೊಂಡು ಹೋದಂತೆ ಜಟಿಲವೇ ಸರಿ. ನಮ್ಮ ಮಹಿಳಾ ಲೇಖಕಿಯರು ತಮ್ಮ ಅನುಭವವನ್ನು ಹಾಗೇ ಬರೆಯುವುದರ ಬದಲು ಕಲ್ಪನಾ ಲೋಕದಲ್ಲಿ ವಿಹರಿಸುವುದೇ ಇದಕ್ಕೆಲ್ಲಾ ಮೂಲ ಕಾರಣವಾಗಿದೆ. ನದಿಯಲ್ಲಿನ ಸುಳಿಗಳಂತೆ ಕೆಲವೊಂದು ಘಟನೆಗಳ ಸುತ್ತಲೇ ಸುತ್ತುವ ಲೇಖಕಿಯರ ಕಲ್ಪನೆಗೆ ಪ್ರಶಂಸಿಸಬೇಕಾದ ಅಗತ್ಯವೇನೂ ಇಲ್ಲ. ಹೀಗೆಂದ ಮಾತ್ರಕ್ಕೆ ಎಲ್ಲಾ ಲೇಖಕಿಯರ ಕಾದಂಬರಿಗಳೂ ಕಳಪೆಯಾಗಿದೆಯೆಂದು ಅರ್ಥವಲ್ಲ. ನವೀನ ರೀತಿಯಲ್ಲಿ ಬರೆಯಲಾದ ಹಲವು ಕಾದಂಬರಿಗಳನ್ನು ವಿಮರ್ಶಿಸಲೋಸುಗ

ಓದಿದಾಗ ಕೆಲವು ಮನಸ್ಸಿಗೆ ಸಮಾಧಾನವನ್ನು ಕೊಟ್ಟಿದ್ದುಂಟು. ಉದಾಹರಣೆಗೆ ಧಾರಿಣಿಯವರ 'ಶಕ್ತಿಶ್ರೀ', ಹೆಚ್. ಜಿ. ರಾಧಾದೇವಿಯವರ 'ಮನಸ್ಸಿನ ಕಣ್ಣು', ಸಾಯಿಸುತೆಯವರ 'ಚೈತ್ರದ ಕೋಗಿಲೆ'.

'ಪ್ರಜಾಮತ' ವಾರಪತ್ರಿಕೆಯಲ್ಲಿ, ಪ್ರಕಟಗೊಂಡು ತುಂಬಾ ಜನರ ಮೆಚ್ಚುಗೆ ಪಡೆದ ಕಾದಂಬರಿ ಸಾಯಿಸುತೆಯವರ 'ಮಂದಾರ ಕುಸುಮ'. ಇಲ್ಲಿನ ನಾಯಕಿಯಾದ ಉಮಾ ಯಾರಿಗೂ ಲಭ್ಯವಾಗದೆ ಕೊನೆಗೆ ಮಂದಾರ ಕುಸುಮದಂತೆಯೇ ಉಳಿದು ಬಿಡುವುದು ಈ ಕಾದಂಬರಿಯ ಮುಖ್ಯ ಘಟನೆಯಾಗಿದೆ. ತಮ್ಮ ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂದು ಮಹೇಶನನ್ನು ಬಾಲ್ಯದಿಂದಲೂ ಸಾಕಿ ಅವನ ವಿದ್ಯಾಭ್ಯಾಸದ ಹೊಣೆಯನ್ನು ಹೊರುತ್ತಾರೆ. ಉಮಾಳ ತಂದೆ-ತಾಯಿಗಳಾದ ರಾಮರಾಯರು ಕಮಲಾಕ್ಷಮ್ಮ. ಆದರೆ ಐ.ಎ.ಎಸ್., ಪದವಿ ಪಡೆದು ವಿದ್ಯಾವಂತನಾದ ಮಹೇಶ ಮೆಚ್ಚುವುದು ಶ್ರೀಮಂತ ರಾಜೇಂದ್ರ ಕುಮಾರರ, ಮಗಳು ಸುಷ್ಮಾಳನ್ನು. ಇದರಿಂದ ದುಃಖಿತರಾದ ರಾಮರಾಯರೂ, ಕೆಲವು ದಿನಗಳ ನಂತರ ಕಮಲಾಕ್ಷಮ್ಮನೂ ಮಡಿಯುತ್ತಾರೆ. ಕಲಿತ ಸಂಗೀತವನ್ನೇ ಆಧಾರವಾಗಿಟ್ಟುಕೊಂಡು ಉಮಾ ತನ್ನ ಜೀವನವನ್ನು ಸಾಗಿಸುತ್ತಾಳೆ. ಮಹೇಶನನ್ನು ಪ್ರೀತಿಸಿ ನಿರಾಶಳಾದ ಅವಳು ತನ್ನ ಸ್ನೇಹಿತೆ ಶೈಲಾಳ ಸಂಬಂಧಿಕನಾದ ಮನೋಹರ ತಾನಾಗಿ ಮುಂದೆ ಬಂದು ವಿವಾಹ ವಾಗಲು ಕೇಳಿಕೊಂಡಾಗ ಅವನನ್ನು ನಿರಾಕರಿಸುತ್ತಾಳೆ. ದೇವಕಿಬಾಯಿ, ಜೀವನ್, ಲೀಲಾವತಿ-ರಾಧಮ್ಮ ಮುಂತಾದ ಪೋಷಕ ಪಾತ್ರಗಳಿಂದ ಕಾದಂಬರಿ ಕಳೆಕಟ್ಟಿದೆ. ಸುಲಭವಾಗಿ ಓದಿಸಿಕೊಂಡು ಹೋಗುವ ಈ ಕಾದಂಬರಿ ತುಂಬಾ ಸರಳವಾದ ಭಾಷೆ ಯಲ್ಲಿ ರಚಿತಗೊಂಡಿದೆ.

ಮಧ್ಯಮವರ್ಗದ ಹೆಣ್ಣೊಬ್ಬಳು ಶ್ರೀಮಂತನನ್ನು ಕೈ ಹಿಡಿದಾಗ ಅವಳ ಮನಸ್ಸಿನ ಭಾವನೆಗಳಿಗೆ, ಎಂತಹ ಆಘಾತವಾಗುತ್ತದೆಂಬುದರ ಸುಂದರ ಚಿತ್ರಣ ಸಾಯಿಸುತೆಯವರ 'ಸ್ವರ್ಣಮಂದಿರ' ಕಾದಂಬರಿಯಲ್ಲಿದೆ. ಕಥಾನಾಯಕಿ ಭಾವನಾ ಹೆಸರಿಗೆ ತಕ್ಕಂತೆ ಭಾವಾವೇಶದಿಂದ ಕೂಡಿದವಳು. ಅವಳ ಮನಃಸ್ಥಿತಿ, ಶ್ರೀಮಂತನಾದ ಸತೀಶನ ಅತಿಯಾದ ಶಿಸ್ತು, ದಕ್ಷತೆಗಳಿಗೆ ಹೊಂದಿಕೊಳ್ಳುವುದೇ ಇಲ್ಲ. ಒಂದು ಹೆಣ್ಣು ಬಯಸಬಹುದಾದ ಎಲ್ಲವೂ ಆಭರಣಗಳು, ಕಣ್ ಕೋರೈಸುವ ಸೀರೆಗಳು, ಕಾರು, ಬಂಗಲೆ, ಸುಂದರನಾದ ಪತಿ-ಇದ್ದರೂ ಅವಳು ಅವನ್ನು ತಿರಸ್ಕರಿಸುತ್ತಾಳೆ. ಆ ಶ್ರೀಮಂತನ ಭವನವು ಅವಳಿಗೆ ಸ್ವರ್ಣಪಂಜರವಾಗುತ್ತದೆ. ಸ್ವರ್ಣಪಂಜರದ ಪಕ್ಷಿ ಯಂತಾದ ಭಾವನಾ ಕೆಲವೇ ದಿನಗಳಲ್ಲಿ ಮನಸ್ವಾಸ್ಥ್ಯವನ್ನು ಕಳೆದುಕೊಂಡು ಹುಚ್ಚಿಯಾಗುತ್ತಾಳೆ.

ಸತೀಶನ ಪ್ರೀತಿ, ಅನುರಾಗ, ಅನುಕಂಪಗಳಿಗಾಗಿ ಹಾರೈಸಿದ, ನಂತರ ನಿರಾಶ ಳಾದ ಭಾವನಾ, ತನ್ನನ್ನು ಕಣ್ಣುಗಳಂತೆ ಪ್ರೀತಿಸುವ ಅಣ್ಣ ಶರತ್‌ನ ಸನ್ನಿಧಿಯಲ್ಲಿದ್ದಾಗ ಕ್ರಮೇಣ ಸುಧಾರಣೆ ಹೊಂದುತ್ತಾಳೆ. ತನ್ನ ಮನಸ್ಸಿನ ಬೇಸರ ಕಳೆಯಲು ತಾನೇ ಕೆಲಸಕ್ಕೆ ಸೇರಿ ಅದರಿಂದ ಹರ್ಷಚಿತ್ತಳಾಗುತ್ತಾಳೆ. ಭಾವನಾಳಿಲ್ಲದೆ ಸತೀಶನೂ ಬೇಸರ

ಹೊಂದುವ ಕ್ಷಣಬಂದಾಗ ಭಾವನಾ ತಾನೇ ತಾನಾಗಿ ಅವನಿಂದ ದೂರವಾಗಲಿಚ್ಛಿಸಿ ನಂತರ ಮತ್ತೆ ಅವನವಳಾಗುತ್ತಾಳೆ. ಸತೀಶನ ಮನೆ ಈಗ ಅವಳಿಗೆ ಸ್ವರ್ಣಪಂಜರ ವಾಗದೆ ಹೋಯ್ತು. ಅವನ ಹೃದಯ ಈಗ ಅವಳಿಗೆ ಸ್ವರ್ಣಮಂದಿರವಾಗಿದೆ ಮಹೇಶ, ಶರತ್, ತುಳಸಮ್ಮ, ಡಾ. ಚಂದ್ರಚೂಡರ ಪಾತ್ರಗಳು ಚೆನ್ನಾಗಿ ಮೂಡಿ ಬಂದಿದೆ. ಸಿನಿಮಾಗಾಗಿ ಬರೆದಂತಿರುವ ಈ ಕಾದಂಬರಿಯಲ್ಲಿ ಹಿಂಜಿ ಹಿಂಜಿ ಸಂಭಾಷಣೆ ಗಳನ್ನು ಬಳಸಲಾಗಿದೆ. ವೇಗವಾಗಿ ಹರಿಯುವ ನದಿಯು ಚಪ್ಪಟೆಯಾದ ನೆಲ ಸಿಕ್ಕಾಗ ಮುಂದೆಯೂ ಹರಿಯದೆ, ಹಿಂದೆಯೂ ಉಳಿಯದೆ ಅಲ್ಲೇ ನಿಲ್ಲುವಂತೆ ಈ ಕಾದಂಬರಿ ಯಲ್ಲಿನ ಕೆಲವೊಂದು ಘಟನೆಗಳು ಮತ್ತೆ ಮತ್ತೆ ಬೇರೆ ವಿಧದಲ್ಲಿ ಬರುತ್ತವೆ. ಹೆಂಗಸರ ಅನುಕಂಪವನ್ನು ಪಡೆಯುವಲ್ಲಿ ಈ ಕಾದಂಬರಿ ಯಶಸ್ವಿಯಾಗಿದೆ ಎಂದು ಹೇಳ ಬಹುದಷ್ಟೆ !?

ಇದೇ ಲೇಖಕಿಯ ಇನ್ನೊಂದು ಕಾದಂಬರಿಯಾದ 'ಚೈತ್ರದ ಕೋಗಿಲೆ'ಯಲ್ಲಿ ಬಡ ವಿದ್ಯಾವಂತ ಯುವಕ ಮುರಳಿ, ಶ್ರೀಮಂತ ಗಿರಿಜೆ, ಮಧ್ಯಮವರ್ಗದ ಅತಿ ಫ್ಯಾಷನ್‌ಬಲ್ ಎಂದು ಹೆಸರು ಪಡೆದ ಉಷಾ, ಇವರು ಮೂವರ ಪ್ರೇಮಕಥೆ ಮಿಳಿತಗೊಂಡಿದೆ. ಈ ಕಾದಂಬರಿಯಲ್ಲಿನ ಕೆಲವು ಘಟನೆಗಳಂತೂ ಎಷ್ಟು ವಿಚಿತ್ರ ವಾಗಿವೆಯೆಂದರೆ ಇಂತಹವು ನಿಜ ಜೀವನದಲ್ಲಿ ನಡೆಯಲು ಸಾಧ್ಯವೇ ಎಂದೆನಿಸು ತ್ತದೆ. 'ಚೈತ್ರದ ಕೋಗಿಲೆ' ಕವನ ಸಂಕಲನದ ಹೆಸರು, ತಾನು ಕವನ ಬರೆಯಲಾಗದೆ ಸೋತು ಮುರಳಿಯನ್ನು ಪ್ರೇಮಿಸಿ ಅದರಲ್ಲೂ ವಿಫಲಳಾಗಿ, ನಂತರ ತನ್ನ ಮನಸ್ಸಿಗೆ ಒಗ್ಗದವನನ್ನು ಕೈಹಿಡಿದ ಉಷಾಳ ಕರುಣಾಜನಕ ಕಥೆಯಲ್ಲಿದೆ. ಚೈತ್ರದ ಕೋಗಿಲೆ ಪುಸ್ತಕವನ್ನು ಹಿಡಿದೇ ಮೃತಳಾಗುವ ಉಷಾಳ ಪಾತ್ರ ಬೇಡದ ಬದುಕಿಗೆ ಸ್ಪಂದಿಸ ಲಾಗದ ಹೆಣ್ಣಿನ ಮನೋಭಾವನೆಯನ್ನು ಎತ್ತಿ ತೋರಿಸುತ್ತದೆ. ಈ ಕಾದಂಬರಿಯ ಬಗೆಗೆ ಮುನ್ನುಡಿಯಲ್ಲಿ ಸ್ವತಃ ಲೇಖಕಿಯೇ ಹೇಳಿಕೊಂಡಿರುವ ಮಾತುಗಳು ಇಲ್ಲಿ ಗಮನಿಸತಕ್ಕವಾಗಿವೆ.

"...'ಚೈತ್ರದ ಕೋಗಿಲೆ' ನನ್ನ (ಸಾಯಿಸುತೆ) ಇಪ್ಪತ್ತೈದನೆಯ ಕಾದಂಬರಿ. ಒಂದೆರಡು ಮಾತುಗಳನ್ನು ಹೇಳಬೇಕೆನಿಸಿದೆ. ಸ್ವತಃ ಅನುಭವಿಸಿರುವ, ಕಾಣುವ ಅಥವಾ ಕೇಳುವ ಸಂಗತಿಗಳನ್ನು ಗಾಢವಾಗಿ ಯೋಚಿಸುವುದು ನನ್ನ ಮನೋಧರ್ಮ, ಈ ತಲ್ಲೀನತೆ ಆರಂಭದಲ್ಲಿ ತೀವ್ರವಾಗಿ ತಲೆಯಲ್ಲಿ ಕುದಿದು, ಶಾಂತವಾಗಿ ಅದೇ ಕಾದಂಬರಿಯ ಕೇಂದ್ರಬಿಂದುವಾಗಿಬಿಡಬಹುದು. ಕೆಲವೊಮ್ಮೆ ಮರೆಯಾಗಿ ಬಿಡು ವುದೂ ಉಂಟು. ಇಲ್ಲಿ ಅಲ್ಲಿ ಸ್ವಲ್ಪ ಬದಲಾವಣೆಗೊಂಡು ಮತ್ತೆ ತಲೆಯಲ್ಲಿ ಕುದಿಯು ವುದುಂಟು. ಆ ಕಲ್ಪನೆಗಳು ಬೇಗ ಕರಗಲಾರವು. ಅದನ್ನು ಬರಹದಲ್ಲಿ ಇಳಿಸಿದಾಗಲೇ ಸಮಾಧಾನ. ಅದು ನಿಜಜೀವನವನ್ನು ಹೋಲುವುದು ಮಾತ್ರವಲ್ಲ ನಿಜಜೀವನ ಕ್ಕಿಂತಲೂ ಸತ್ಯವಾಗಿ ಕಾಣಿಸುತ್ತದೆ. ಅದು ಬರಹಗಾರರ ಕಲ್ಪನಾಶಕ್ತಿ ಮತ್ತು ಲೇಖನಿಯನ್ನು ಅವಲಂಬಿಸಿರುತ್ತದೆ. ನನ್ನ ಕಾದಂಬರಿಗಳಲ್ಲಿ ಅದು ಎಷ್ಟರ ಮಟ್ಟಿಗೆ ನಿಜವಾಗಿದೆಯೆಂದು ಸಹೃದಯ ಓದುಗರು ಹೇಳಬೇಕು..." ನಿಜ ಓದುಗರು ಮಾತ್ರ

ಯಾವ ಕೃತಿ, ಹಲವು ಕಾಲ ನಿಲ್ಲಬಲ್ಲಂತಹುದೆಂದು ತೀರ್ಮಾನಿಸುತ್ತಾರೆ. ಜನ ಪ್ರಿಯತೆಯ ಕಾರಣಕ್ಕಾಗಿ, ಉತ್ತಮ ಮಟ್ಟದ ಮೌಲ್ಯವುಳ್ಳ ಕಾದಂಬರಿಗಳನ್ನು ಇನ್ನು ಮುಂದಾದರೂ ಸಾಯಿಸುತೆಯವರು ನೀಡಲೆಂದು ಹಾರೈಸುವುದು ಲೇಸು, ಮುದ್ದಾದ ಮುಖಪುಟ, ಸುಂದರ ಮುದ್ರಣ, ಓದಿಸಿಕೊಂಡು ಹೋಗುವ ಗುಣ, ಈ ಮೂರೇ ಈ ಕಾದಂಬರಿಗೆ ರಕ್ಷಾಕವಚವಾಗಿದೆಯೆಂದು ಹೇಳಬೇಕು. ಹೆಂಗಳೆಯರ ಮನಸ್ಸನ್ನು ಈ ಕಾದಂಬರಿ ಅಪಹರಿಸಿದರೆ ಅದರಲ್ಲಿ ಆಶ್ಚರ್ಯಪಡುವಂತಹುದೇನೂ ಇಲ್ಲ.

ಜನಪ್ರಿಯ ಕಾದಂಬರಿಗಾರ್ತಿಯೆಂದು ಹೆಸರು ಪಡೆದ ಹೆಚ್. ಜಿ. ರಾಧಾ ದೇವಿಯವರ 'ಸೊಬಗಿನ ಸೆರೆಮನೆ' ಕಾದಂಬರಿಯಲ್ಲಿ ಇಬ್ಬರು ಗೃಹಿಣಿಯರ ಮನೋ ಭಾವನೆಗಳನ್ನು ಸೆರೆಹಿಡಿಯಲಾಗಿದೆ. ರಮ್ಯ, ಸುಂದರ ಶ್ರೀಮಂತ ಗೃಹಿಣಿ, ತನ್ನ ಗೆಳತಿ ಪ್ರೇಮಳಿಗೆ ಅಪಾರವಾಗಿ ಸಹಾಯ ಮಾಡುವಂತಹ ಉದಾರ ಗುಣ ಅವಳದು. ಮಲತಾಯಿಯ ಕೈಕೆಳಗೆ ಬೆಳೆದು ನಂತರ ಸ್ವತಂತ್ರವಾಗಿ ಕೆಲಸಕ್ಕೆ ಸೇರಿ, ಸುಧಾಕರನೆಂಬ ಯುವಕನನ್ನು ಮದುವೆಯಾದವಳು ಪ್ರೇಮ. ಅವಳಿಗೂ ರಮ್ಯಳ ಜೊತೆ ಬಹಳ ಸ್ನೇಹವಿದ್ದಿತು. ಆದರೆ ಸುಧಾಕರ ರಮ್ಯಳನ್ನು ಪ್ರಶಂಶಿಸಿದಾಗ, ರಮ್ಯಳ ಅಡಿಗೆಗಳನ್ನು ಹೊಗಳಿದಾಗ ಪ್ರೇಮಳಿಗೆ ಆತಂಕ. ಮನಸ್ಸಿನ ಒಳಗೇ ಕುದಿಯುವ ಅಸೂಯೆಯ ಲಾವಾರಸ. ಅದು ಸಮಯ ಸಿಕ್ಕಾಗಲೆಲ್ಲಾ ಸ್ಫೋಟ ಗೊಂಡಿತು. ಸುಧಾಕರ ಪತ್ನಿಯ ಮನಸ್ಸಿನ ಆತಂಕವನ್ನು ದೂರಮಾಡಲು ಪ್ರಯತ್ನಿಸಿ ಅವಳನ್ನಲ್ಲದೆ ತಾನು ಬೇರೆ ಯಾರನ್ನೂ ಪ್ರೀತಿಸುವವನಲ್ಲ ಎಂದ. ಪ್ರೇಮಳ ಮಗು ವನ್ನು ಆಪ್ಯಾಯಮಾನತೆಯಿಂದ ನೋಡಿಕೊಳ್ಳುತ್ತಿದ್ದ ರಮ್ಯಳ ಹಿಂದಿನ ಕಥೆಯನ್ನು ಕೇಳಬಯಸಿದಳು ಪ್ರೇಮ. ರಮ್ಯಳ ಗಂಡ ವಿಜಯೇಂದ್ರ, ರಮ್ಯಳಿಗೂ ಮೊದಲೇ ಇನ್ನೊಂದು ಲಗ್ನವಾಗಿ ಬೇರೊಂದು ಮನೆಯಲ್ಲಿ ತನ್ನ ಮೊದಲ ಪತ್ನಿ, ಅವಳ ಮಕ್ಕಳೊಡನಿರುವನೆಂದಾಗ ದುಃಖಿತಳಾದ ರಮ್ಯಳನ್ನು ಆರ್ತದೃಷ್ಟಿಯಿಂದ ನೋಡಿ ದಳು ಪ್ರೇಮ. ಎಲ್ಲಾ ಭೋಗ ಭಾಗ್ಯಗಳಿದ್ದೂ ಶ್ರೀಮಂತೆಯಾದ ರಮ್ಯ ಅಸುಖಿಯೆಂದೂ ಮಧ್ಯಮವರ್ಗದವಳಾದರೂ ತಾನು ಸುಖಿಯೆಂದೂ ಪ್ರೇಮ ಭಾವಿಸಿಕೊಳ್ಳುತ್ತಾಳೆ. ತಿರುಪತಿಯ ಶ್ರೀನಿವಾಸ ದೇವರಲ್ಲಿ ಲೇಖಕಿ ಇಟ್ಟಿರುವ ಅಪಾರ ಭಕ್ತಿ ಕಾದಂಬರಿ ಯುದ್ದಕ್ಕೂ ಗೋಚರಿಸಿದೆ. ಸಾಮಾನ್ಯವಾಗಿ ಮಹಿಳೆಯರ ದಿನಚರಿ ಅಡಿಗೆಗಳ ವೈಖರಿ, ಅವರ ಅಲಂಕಾರ ಸಾಮಗ್ರಿ ಇವುಗಳ ವಿವರಣೆಯಲ್ಲಿಯೇ ಕಾದಂಬರಿಯ ಬಹಳಷ್ಟು ಪುಟಗಳು ವ್ಯರ್ಥವಾಗಿವೆ. ಕೊನೆಗೆ ರಮ್ಯಳ ಪಾತ್ರ ಅಪೂರ್ಣವಾಗೇ ಉಳಿದಿದೆ. ಈ ಕಾದಂಬರಿಯ ಗುಣವೆಂದರೆ ಸರಾಗವಾಗಿ ಓದಿಸಿಕೊಂಡು ಹೋಗು ವುದೇ ಆಗಿದೆ.

ಹೆಚ್. ಜಿ. ರಾಧಾದೇವಿಯವರ 'ಮನಸ್ಸಿನ ಕಣ್ಣು' ಅವರ ಇತರ ಕಾದಂಬರಿ ಗಳಿಗಿನ್ನ ಭಿನ್ನವಾದುದಾಗಿದೆ. ಈ ಕಾದಂಬರಿಯಲ್ಲಿ ವೈಜ್ಞಾನಿಕ ಸಂಶೋಧನೆಗಳ ಮುಂದುವರಿದ ರೂಪದ ಚಿತ್ರಣವಿದೆ. ಪೋಲಿಸ್ ಸಬ್‌ಇನ್ಸ್‌ಪೆಕ್ಟರನಾದ ಆನಂದನ ಮೇಲೆ ಪ್ರೊ॥ ರಾಮನ್‌ರವರು ತಮ್ಮ ಹಲವು ದಿನಗಳ ಸತತ ಪರಿಶ್ರಮದಿಂದ ಕಂಡುಹಿಡಿದ ಔಷಧದ ಪ್ರಯೋಗವನ್ನು ಮಾಡುತ್ತಾರೆ. ಈ ಔಷಧ ಪ್ರಯೋಗದಿಂದ ಹೆಚ್ಚಿನ ಬಲವನ್ನು ಪಡೆದುದು ಮಾತ್ರವಲ್ಲ ಆನಂದ್-ದೂರದ ಊರುಗಳಲ್ಲಿ ನಡೆಯುತ್ತಿರಬಹುದಾದ ಘಟನೆಗಳನ್ನು 'ಮನಸ್ಸಿನ ಕಣ್ಣಿನ' ಮೂಲಕ ನಿಚ್ಚಳವಾಗಿ ಕಾಣುತ್ತಾನೆ. ದೇಶಕ್ಕೆ, ಸಮಾಜಕ್ಕೆ ಅವನಿಂದ ಸಹಾಯವಾಗಲಿ ಎಂಬ ಮೂಲೋ ದ್ದೇಶದಿಂದಲೇ ರಾಮನ್‌ರವರು ಆನಂದ್‌ನ ಮೇಲೆ ಔಷಧ ಪ್ರಯೋಗಿಸಿದ್ದು. ತನಗೆ ವಿಶಿಷ್ಟ ಶಕ್ತಿ ಬಂದಿದೆಯೇ ಇಲ್ಲವೇ ಎಂಬುದನ್ನು ಆನಂದ ಹಲವು ರೀತಿಯಲ್ಲಿ, ಪರೀಕ್ಷಿಸುತ್ತಾನೆ. ತನ್ನ ಪತ್ನಿ ಸೀತಾ ಮಕ್ಕಳನ್ನು ಸರಿಯಾಗಿ ನೋಡಿಕೊಳ್ಳದಿರುವುದು ಆಫೀಸಿನ ರಂಗಯ್ಯ ಆಫೀಸಿನ ವೇಳೆಯಲ್ಲಿ ಕಾದಂಬರಿ ಓದುವುದು ಇವೇ ಮುಂತಾ ದವು ಇಂತಹ ಘಟನೆಗಳು.

ಸೋಹನ್‌ರಾಜನ ಪತ್ನಿಯನ್ನು ಅವನ ಮಗ ಪ್ರಸಿಜಿತ್‌ನು ಕೊಲೆ ಮಾಡಿದ್ದು, ಶರಣಮ್ಮನ ಆಸ್ತಿಯನ್ನು ಪಡೆಯಲು ಸ್ವತಃ ಅವಳ ಗಂಡನಾದ ಶಿವಬಸ್ಯಾನೇ ತಮ್ಮ ಮಕ್ಕಳನ್ನು ಬಚ್ಚಿಟ್ಟು ಅವಳನ್ನು ಹೆದರಿಸುವುದು—ಇವೆಲ್ಲವನ್ನೂ ಆನಂದ್ ತನ್ನ ಮನಸ್ಸಿನ ಕಣ್ಣಿನ ಮೂಲಕ ಪತ್ತೆ ಹಚ್ಚುತ್ತಾನೆ. ಶಾಂತವಾಗಿ ಮಲಗಿ ಯಾರ ಬಗ್ಗೆ ಯಾದರೂ ಯೋಚಿಸಿದರೆ ಅವರು ಆಗ ಮಾಡುತ್ತಿದ್ದ ವಿವರಗಳೆಲ್ಲವೂ ಅವನಿಗೆ ಅರಿವಾಗುತ್ತದೆ. ಹೊಸ ಪ್ರಯೋಗಶೀಲತೆಯ ದೃಷ್ಟಿಯಿಂದ ಇತರ ಸಾಮಾಜಿಕ ಕಾದಂಬರಿಗಳಿಗಿಂತಲೂ ಇದು ಹೆಚ್ಚು ಮನಸೆಳೆಯುತ್ತದೆ.

'ಪ್ರಜಾಮತ' ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಹರಿದು ಬಂದ ಈಚನೂರು ಶಾಂತರವರ 'ವಿಭ್ರಾಂತ' ಕಾದಂಬರಿಯಲ್ಲಿ, ಕಾದಂಬರಿಯ ನಾಯಕನಾದ ವಿವೇಕ, ಹೇಗೆ ತುಳಿತಕ್ಕೆ ಒಳಗಾಗುತ್ತಾನೆ ಎಂಬ ವಿಷಯವನ್ನು ವಿವರಿಸಲಾಗಿದೆ. ಈ ಕಾಲದಲ್ಲಿ ಸತ್ಯ, ಪ್ರಾಮಾಣಿಕತೆ, ನ್ಯಾಯ, ನೀತಿ ಎಂದು ನಡೆದುಕೊಂಡಾಗ ಸಿಗುವ ಪ್ರತಿಫಲ ವೇನು? ಇದರ ಬಗೆಗೆ ಈ ಕಾದಂಬರಿ ಕ್ಷ-ಕಿರಣ ಬೀರುತ್ತದೆ. ವಿಭ್ರಾಂತನಾಗೇ ಉಳಿದುಬಿಡುವ ವಿವೇಕ ಕೊನೆಗೆ ಈ ಪ್ರಪಂಚದಲ್ಲಿ ಸ್ವಾರ್ಥಕ್ಕಿಂತಲೂ ಮಿಗಿಲಾದು ದೇನೂ ಇಲ್ಲ ಎಂಬ ತೀರ್ಮಾನಕ್ಕೆ ಬರುತ್ತಾನೆ, ಬೇರೆಯವರಿರಲಿ ಒಡಹುಟ್ಟಿದ ಅವನ ಅಣ್ಣನಾದ ನಾಗರಾಜನೇ ಎಷ್ಟು ಸ್ವಾರ್ಥಪರನೆಂದು ಅರಿಯುತ್ತಾನೆ. ಶಾಂತ ಸ್ವಭಾವದ ವಿವೇಕನ ಅತ್ತಿಗೆ ಲಲಿತ ತನ್ನ ತಂಗಿ ಮೀರಾಳನ್ನೇ ಗಂಡ ನಾಗರಾಜ ಪ್ರೀತಿಸಿ ಮದುವೆಯಾಗುವನೆಂದು ಅರಿತು ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ವಿವೇಕನ ತಾಯಿ ದುರ್ಬಲ ಮನಸ್ಸಿನ ಸ್ತ್ರೀ ಪಾತ್ರವಾಗಿ ಚಿತ್ರಿತವಾಗಿದ್ದಾಳೆ. ಅವಳ ಮನೋ

ದೌರ್ಬಲ್ಯ ಕಾದಂಬರಿಯಲ್ಲಿ ವ್ಯಕ್ತವಾಗಿರುವುದು ಒಂದು ಮೆಚ್ಚತಕ್ಕ ಅಂಶವಾಗಿದೆ. ಅವಳು ಹೇಳುವ ಮಾತುಗಳು ಎಲ್ಲರಿಗೂ ಅನ್ವಯಿಸುವಂತಹುದೇ ಆಗಿದೆ ಎನ್ನ ಬಹುದು. "ಗಂಡನಿಂದ ಸುಖ ಸಿಗಲಿಲ್ಲ ಕೊನೆಗೆ ಮಕ್ಕಳಿಂದ ಗೌರವ, ಆದರ ಸಿಗುವು ದೆಂಬುದು ದೂರದ ಮಾತಾಯಿತೆಂದು ನೊಂದು ನುಡಿಯುತ್ತಾಳೆ. ಕ್ಲೀಂಟಾ ಫರ್ನಾಂಡಿಸ್, ಮಾಣಿಕ್‌ಲಾಲ್, ಚಿನ್ನಸ್ವಾಮಿ, ವಿನೋದ, ಸೇಟ್, ಇವರ ಪಾತ್ರಗಳು ವಿವೇಕನ ಮಾನಸಿಕ ಪರಿಳಿತಗಳನ್ನು ಸ್ಫುಟಗೊಳಿಸುವಂತೆ ಚಿತ್ರಿತವಾಗಿವೆ. ವಿನೋದ ನಂತೂ ತನ್ನ ಸ್ನೇಹಿತನಿಗೇ ದ್ರೋಹ ಬಗೆಯುವುದು ಅದೆಷ್ಟರಮಟ್ಟಿಗೆಂದರೆ ವಿವೇಕನಿಲ್ಲದ ವೇಳೆಯಲ್ಲಿ ಅವನಿಗೆ ಆಗದವನೊಬ್ಬನೊಡನೆ ಬಂದು ಅವನ ಬಟ್ಟೆ-ಬರೆಗಳೆಲ್ಲವನ್ನೂ ಶೋಧಿಸುವುದು ಇದನ್ನು ಮರದ ಮರೆಯಿಂದ ಕಂಡ ವಿವೇಕ ತನ್ನ ಸ್ನೇಹಿತನಲ್ಲಿಟ್ಟಿದ್ದ ನಂಬಿಕೆಯಲ್ಲವನ್ನೂ ಕಳೆದುಕೊಳ್ಳುತ್ತಾನೆ. ಸುಳ್ಳು ಅಪಾದನೆ ಗೊಳಗಾದ ಕರ್ತವ್ಯ ದಕ್ಷನಾದ ವಿವೇಕ ಎಲ್ಲಾ ಕಡೆಯಿಂದಲೂ ಸೋಲನುಭವಿಸಿ ವಿಭ್ರಾಂತನಾಗಿ ನಿಲ್ಲುತ್ತಾನೆ. ಈಚನೂರು ಶಾಂತಾರವರ ಚಮತ್ಕಾರ ನಿರೂಪಣೆ ಯುಳ್ಳ ಈ ಕಾದಂಬರಿ ಇಂದಿನ ಸಮಾಜದಲ್ಲಿ ಪ್ರಾಮಾಣಿಕವಾಗಿ ನಡೆದುಕೊಳ್ಳ ಬಯಸುವ ವ್ಯಕ್ತಿಯೊಬ್ಬನ ಜ್ವಲಂತ ಪರಿಸ್ಥಿತಿಯನ್ನು ನೀಡುವಂತಹುದಾಗಿದೆ. ಈ ಕಾದಂಬರಿಯಲ್ಲಿನ ಸಂಭಾಷಣೆಗಳೂ ಅಷ್ಟೆ ಚೊಕ್ಕವಾಗಿ ಮೂಡಿ ಬಂದಿದೆ.

ಶ್ರೀಮತಿ ವಿಜಯನಾಗರಾಜ್‌ರವರ 'ಸ್ವಾಭಿಮಾನಿ' ಅವರ ಪ್ರಥಮ ಕಾದಂಬರಿ ಯಾಗಿದೆ. ವಿಧವೆ ರಂಗಮ್ಮನಿಗೆ ಒಬ್ಬನೇ ಮಗ ರಾಮಯ್ಯ. ರಾಮಯ್ಯ ನೊಡನೆ ಕುಣಿಗಲಿನಲ್ಲಿ ಬಾಳಲಾಗದೆ ಸ್ವಾಭಿಮಾನಿಯಾದ ರಂಗಮ್ಮ ಬೆಂಗಳೂರಿ ನಲ್ಲಿರುವ ಮಗಳ ಮನೆಗೆ ಬರುತ್ತಾಳೆ. ರಾಮಯ್ಯ ತನ್ನ ಬಳಿಯ ಜಮೀನುಗಳೆಲ್ಲ ವನ್ನೂ ನೋಡಿಕೊಳ್ಳುತ್ತಿದ್ದ ಮಾದನ ಹೆಂಡತಿ ಕೆಂಪಿಯಲ್ಲಿ ಅನುರಕ್ತನಾಗಿ ಅವಳಿಗಾಗಿ ಮನೆಯೊಂದನ್ನು ಕಟ್ಟಿಸಿಕೊಡುತ್ತಾನೆ. ಸುದ್ದಿ ತಿಳಿದ ರಂಗಮ್ಮ ತನ್ನ ಹಳ್ಳಿಗೆ ಹಿಂತಿರುಗಿ ತನ್ನ ಮನೆಯಲ್ಲಿ ಸ್ವಾಭಿಮಾನದಿಂದ ಒಂಟಿಯಾಗಿ ಬಾಳುತ್ತಾಳೆ. ಮಗ ತಾಯಿಯ ವಿರಸ ಅಂತಿಮಘಟ್ಟ ಮುಟ್ಟುವುದು ರಂಗಮ್ಮನನ್ನು ರಾಮಯ್ಯ ಮಾತ ನಾಡಿಸದಿರುವುದು ಹಾಗೂ ತನ್ನ ಸ್ವಂತ ತಾಯಿಯಾದ ರಂಗಮ್ಮನಿಗೇ ತಿನ್ನಲು ಭತ್ತವನ್ನು ಕೊಡದೆ ಇರುವ ಸಂದರ್ಭಗಳಲ್ಲಿ ಎನ್ನಬಹುದು. ಸ್ವಾಭಿಮಾನಿ ಹೆಣ್ಣಿನ ಕಥೆ ಯುಳ್ಳ ಈ ಕಾದಂಬರಿಯಲ್ಲಿ ಹಲವೆಡೆ ಅಸಂಭವವೆನಿಸುವ ಘಟನೆಗಳೂ ಸೇರಿಕೊಂಡಿವೆ. ರಂಗಮ್ಮ ತನ್ನ ಶ್ರೀರಂಗಪಟ್ಟಣದ ಗೆಳತಿಯಾದ ಸಾತಮ್ಮನ ಮನೆಯಲ್ಲಿ ತಿಂಗಳ ಗಟ್ಟಲೆ ಇರುವುದು, ರಂಗಮ್ಮ ತಾನೇ ಏಕಾಂಗಿಯಾಗಿ ಮಗನಿಗೆ ಹೇಳದೆ ಹಳ್ಳಿಯಲ್ಲಿ ಹೋಗಿ ನೆಲಸಿ ತನ್ನ ಸ್ವಾಭಿಮಾನವನ್ನು ಮೆರೆಯುವುದು, ತನ್ನ ಸರ್ವಸ್ವವನ್ನೂ ಕೆಂಪಿ ಗಾಗಿ ತ್ಯಾಗಮಾಡಲು ರಾಮಯ್ಯ ಸಿದ್ಧನಾಗುವುದು, ಕೆಂಪಿಯ ಗಂಡ ಮಾವ ಹೆಂಡತಿ ಮಾಡಿದ್ದೆಲ್ಲವನ್ನೂ ನೋಡಿಕೊಂಡು ಸುಮ್ಮನಿರುವುದು-ಹೀಗೆ ಇಂತಹ ಪ್ರಸಂಗಗಳು ಕಾದಂಬರಿಯಲ್ಲಿ ನುಸುಳಿ ಬಂದಿವೆ. ಇಂತಹ ಪ್ರಸಂಗಗಳಿಂದ ಕಾದಂಬರಿಯ ಶಿಲ್ಪಕ್ಕೆ

ಧಕ್ಕೆಯುಂಟಾಗುವಂತಿದೆ. ಮಗ ರಾಮಯ್ಯನ ವಿರುದ್ಧವೇ ತಾಯಿಯಾದ ರಂಗಮ್ಮ ಕೋರ್ಟಿನಲ್ಲಿ ಕೇಸನ್ನು ಹಾಕಿ, ಅಲ್ಲಿ ಕೇಸನ್ನು ಗೆದ್ದು, ಎಲ್ಲಾ ಹಣವನ್ನೂ ಅಳಿಯನ ವಶಕ್ಕೆ ಕೊಟ್ಟು ನಂತರ ಅವರ ಮನೆಯಲ್ಲಿಯೂ ಸ್ವತಂತ್ರವಿಲ್ಲದೆ ಬೇಸರಿಸುತ್ತಾಳೆ. ಮಗಳು ರಾಧಾಳೂ ಅಷ್ಟೆ. ತನ್ನ ತಾಯಿಯ ದುಡ್ಡಿನಲ್ಲಿ ಸರ ಮೊದಲಾದ ಒಡವೆಗಳನ್ನೂ, ತನ್ನ ವಾಸಕ್ಕಾಗಿ ಸೈಟನ್ನೂ ಕೊಂಡುಕೊಳ್ಳುತ್ತಾಳೆ. ಎಲ್ಲರಲ್ಲಿಯೂ ಸ್ವಾರ್ಥ ಎದ್ದು ಗೋಚರಿಸುವುದು. ಬಂದ ದಾರಿಗೆ ಸುಂಕವಿಲ್ಲದೆವೆಂಬಂತೆ ಮತ್ತೆ ಹಳ್ಳಿಗೇ ಬಂದು ಸ್ವಾಭಿಮಾನದಿಂದ ಸಾಯುತ್ತಾಳೆ ರಂಗಮ್ಮ. ಇದು ವಿಜಯ ನಾಗರಾಜರ ಪ್ರಥಮ ಕಾದಂಬರಿಯಾದುದರಿಂದ ಇದರಲ್ಲಿ ಇನ್ನೂ ಸ್ಪಷ್ಟವಾಗಿ ಅವರ ಅನುಭವಗಳ ವಸ್ತು ಸರಿಯಾಗಿ ನಿರೂಪಿತಗೊಂಡಿಲ್ಲವೇನೋ. ಹಾಗೆಯೇ ಇದರಲ್ಲಿ ಹೊಸದೇನನ್ನೂ ಕಾಣುವ ಪ್ರಯತ್ನ ಮಾಡುವುದು ಸರಿಯಾಗಲಾರದು. ಮುಂದೆ ಅವರ ಭಾಷೆ, ಶೈಲಿ, ಅನುಭವಗಳ ನಿರೂಪಣೆ, ವರ್ಣನಾ ವೈಖರಿಗಳು ಕುದುರಬಲ್ಲದೆಂದು ಹೇಳ ಹೇಳಬಹುದು.

ಹೆಣ್ಣು ಹೆಣ್ಣೆಂದು ಹೀಯಾಳಿಸುವವರಿಗೆ, ಶ್ರೀಮತಿ ಪದ್ಮಾಗುರುರಾಜರವರ 'ಅವಳ ಕನಸು' ಕಾದಂಬರಿಯ ನಾಯಕಿ ಚಂಪಾ ಸವಾಲಿನಂತಿದ್ದಾಳೆ. ಮನುಷ್ಯನಿಗೆ ಸ್ವಾರ್ಥವೇ ಮುಖ್ಯವಲ್ಲ. ಪರೋಪಕಾರ ಮಾಡುವ ಹೃದಯವಂತಿಕೆಯೂ ಅಗತ್ಯ ಎಂಬುದು ಈ ಕಾದಂಬರಿಯ ಮೂಲ ಆಶಯ. ರಾಮನಾಥಯ್ಯ - ಸರೋಜಮ್ಮನ ಮಕ್ಕಳಲ್ಲಿ ಅತ್ಯಂತ ಸ್ವಾರ್ಥಿಯಾದವನು ರಮೇಶ. ಕಷ್ಟಪಟ್ಟು ಓದಿಸಿದ ತಂದೆ ತಾಯಿಗಳನ್ನು ತ್ಯಜಿಸಿ, ಯಾವಾಗಲೂ ನೆರವಾಗುತ್ತಿದ್ದ ಪ್ರೀತಿಯ ಅಕ್ಕ ಚಂಪಾಳನ್ನು ಬಿಟ್ಟು ತನ್ನ ಉನ್ನತ ವ್ಯಾಸಂಗಕ್ಕಾಗಿ ಅಮೆರಿಕಾಕ್ಕೆ ಹೋದವ ಅಲ್ಲೇ ನೆಲೆಸುತ್ತಾನೆ. ಅಲಂಕಾರ, ತನ್ನ ವಸ್ತ್ರಗಳೆಂದು ಸದಾಕಾಲವೂ ತನ್ನದನ್ನೇ ನೋಡಿಕೊಳ್ಳುವ ಮತ್ತೊಬ್ಬ ಸ್ವಾರ್ಥಿ ಹೆಣ್ಣು ಚಂಪಾಳ ತಂಗಿ ಮಾಲತಿ. ಕುಟುಂಬ ಸುಖಕ್ಕಿಂತ ಅವಳಿಗೆ ಅವಳ ಸುಖ ಮುಖ್ಯ. ಪರೀಕ್ಷೆಯಲ್ಲಿ ಅನುತ್ತೀರ್ಣಳಾಗಿ ಯಾವುದೋ ಕೆಲಸಕ್ಕೆ ಸೇರಿ, ತಾನೇ ಯಾರಿಗೂ ತಿಳಿಸದಂತೆ ಯೌವ್ವನದ ಕಾವಿನಲ್ಲಿ ಬಿದ್ದು ವೆಂಕಟಾದ್ರಿಯನ್ನು ಮೆಚ್ಚಿ ಅವನೊಡನೆ ವಿಹರಿಸುತ್ತಾಳೆ. ಪರಿಸ್ಥಿತಿ ಕಷ್ಟವಾದಾಗ ಅಕ್ಕ ಮಾಲತಿಯೊಡನೆ ಸಮಾಲೋಚಿಸಿ ಮನೆಯವರನ್ನೊಪ್ಪಿಸಿ ವಿಧಿಯಿಲ್ಲದೆ ಅವನನ್ನೇ ವಿವಾಹವಾಗಿ ಮಕ್ಕಳನ್ನು ಪಡೆಯುತ್ತಾಳೆ.

ಚಂಪಾಳ ತಾಯಿ ಸರೋಜಮ್ಮನೂ ಬಾಲ್ಯದಲ್ಲೇ ಕಷ್ಟಗಳಿಗೆ ಸಿಕ್ಕವಳು, ಮಲತಾಯಿಯ ಆರೈಕೆಯಲ್ಲಿ ಹೇಗೋ ಒಂದು ರೀತಿಯಲ್ಲಿ ಬೆಳೆದು ರಾಮನಾಥಯ್ಯನನ್ನು ವಿವಾಹವಾಗಿ ಮೊದಲ ಹೆರಿಗೆ ಮತ್ತು ಬಾಣಂತನಕ್ಕೆ ತೌರಿಗೆ ಬರುತ್ತಾಳೆ. ಆಗ ಅವಳಿಗೆ ಸಿಕ್ಕ ಸ್ವಾಗತ ಜನ್ಮದಲ್ಲೇ ಮರೆಯಕೂಡದು ಹಾಗಿರುತ್ತದೆ. ಅವಳ ಮಲತಾಯಿಯಾದ ಶಾಂತಾಬಾಯಿ "ಆ ಮುಖಕ್ಕೆ ಆಸ್ಪತ್ರೆ ಬೇರೆ ಕೇಡು. ಹಿಂದಿನ ಬೀದಿಲಿದಾಳಲ್ಲ ಆ ಮುದಿ ಸೂಲಗಿತ್ತಿ. ಒಂದು ಐದು ರೂಪಾಯಿ, ಒಂದು ಹಳೇ ಸೀರೇಲೆ ಕಾಟ ಕಳೆದು ಹೋಗುತ್ತೆ" ಎನ್ನುತ್ತಾಳೆ. ಶಾಂತಾಬಾಯಿಯಂತಹ ಕ್ರೌರ್ಯದ

ಹೆಣ್ಣಿನ ಪಾತ್ರವನ್ನು ಕುಶಲತೆಯಿಂದ ಪದ್ಮಾಗುರುರಾಜರವರು ಚಿತ್ರಿಸಿದ್ದಾರೆ. ಹಾಗೆಯೇ ರಾಮನಾಥಯ್ಯ, ಇಂದೂ, ನಳಿನಿಯರ ಪಾತ್ರಗಳು ಕಾದಂಬರಿಯಲ್ಲಿ ಬಂದಿವೆ.

ಇವರೆಲ್ಲರಿಗಿಂತಲೂ ಭಿನ್ನಳಾದವಳು ಕಾದಂಬರಿಯ ನಾಯಕಿಯಾದ ಚಂಪಾ. ಮೊದಲಿನಿಂದಲೂ ಮನೆಯ ಕಷ್ಟ ಸುಖಗಳಲ್ಲಿ ಭಾಗಿಯಾಗಿ ಎಲ್ಲರ ಹಿರಿಯಕ್ಕನಾಗಿ ಬಾಳಿದವಳು. ಓದಿನಲ್ಲಿ ಮುಂದಾಗಿ ಕೊನೆಗೊಮ್ಮೆ ಕಾಲೇಜಿನ ಅಧ್ಯಾಪಕಿಯಾಗುವಳು. ಅವಳು ಯೌವನ ಕಾಲದಲ್ಲಿ ತನ್ನನ್ನು ಬಯಸಿದ ಸುರೇಂದ್ರನೆಂಬ ಯುವಕನಿಗೆ ಬುದ್ಧಿ ಹೇಳುತ್ತಾಳೆ. ಪಿಕ್ನಿಕ್‌ಗೆ, ಕರೆದರೂ ಬರದೇ ಇದ್ದ ಚಂಪಾಳ ಸಪ್ಪೆ ವ್ಯಕ್ತಿತ್ವದಿಂದ ರೋಸಿಹೋಗಿ 'ಎಲ್ಲೋ ಕುಡುಮಿ ಕಣೆ ಗುಗ್ಗು ಪುಸ್ತಕ ಒಂದಿದ್ದರೆ ಆಯಿತು' ಎಂದು ಚಂಪಾಳ ಗೆಳತಿಯರು ಅಸೂಯೆಯಿಂದ ಹೇಳಿರುವುದು ಉಂಟು. ಕೊನೆಗೆ ತನ್ನ ಕಾಲೇಜಿನ ಪ್ರೊಫೆಸರ್ ವಿಧುರನಾದ ಶ್ರೀಧರನೆಂಬ ಮಧ್ಯವಯಸ್ಕನನ್ನು ಲಗ್ನವಾಗ ಬಯಸುತ್ತಾಳೆ ಚಂಪಾ. ಅಷ್ಟರಲ್ಲೇ ಅವಳ ತಂದೆಯ ಮರಣದಿಂದ ದಿಕ್ಕುಗಾಣ ದಂತಾದ ತಾಯಿಯ ಸಂಸಾರಕ್ಕೆ ಮತ್ತೆ ಪೋಷಕಳೂ, ರಕ್ಷಕಳೂ ಅಗಿ ನಿಲ್ಲಲು ತನ್ನ ಸ್ವಾರ್ಥವನ್ನು ಬಲಿಗೊಡುತ್ತಾಳೆ. ಅವಳ ತಂದೆ ಮಗನು ಇಂಡಿಯಾಕ್ಕೆ ಬರುವುದಿಲ್ಲ ವೆಂಬ ಸುದ್ದಿಯಿದ್ದ ಕಾಗದವನ್ನು ನೋಡಿಯೇ ಹೃದಯಾಘಾತದಿಂದ ಸತ್ತುದು. ಈಗ ಚಂಪಾ. ಶ್ರೀಧರನನ್ನೂ ತ್ಯಜಿಸುತ್ತಾಳೆ. ಹೀಗೆ ಇಡೀ ಕಾದಂಬರಿ ಹೆಸರಿಗೆ ತಕ್ಕಂತೆಯೇ ಅವಳ ಕನಸಿನಲ್ಲಿಯೇ ಮುಕ್ತಾಯವಾಗುತ್ತದೆ. ಮಧ್ಯಮ ವರ್ಗದ ಬಡ ಹೆಣ್ಣುಮಗಳ ಕಥಾವಸ್ತುವುಳ್ಳ ಈ ಕಾದಂಬರಿ ಮನಸ್ಸನ್ನು ಸೆಳೆದುಕೊಳ್ಳುತ್ತದೆ. ಈ ಕೃತಿ ಮುದ್ರಣ ದೋಷಗಳಿಂದ ಕಿಕ್ಕಿರಿದಿರುವುದು, ಓದುಗರಿಗೆ ಕಿರಿಕಿರಿಯನ್ನುಂಟು ಮಾಡುವ ಸಂಗತಿಯಾಗಿದೆ.

ಪಳಗಿದ ಲೇಖಕಿಯಾದ, ವಾಣಿಯವರ ಎರಡು ಕಿರು ಕಾದಂಬರಿಗಳು ಈ ಹಿಂದೆ 'ರಾಗಸಂಗಮ' ಮಾಸಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅವೆರಡನ್ನೂ ಸೇರಿಸಿ 'ಸುಲಗ್ನಾ ಸಾವಧಾನ' ಎಂಬ ಹೆಸರಿನಲ್ಲಿ ಈಗ ಒಂದೇ ಪುಸ್ತಕವನ್ನು ಮಾಡಲಾಗಿದೆ. ಬಾಳೆಯ ನೆರಳು, ಎರಡು ಕನಸು, ಶುಭಮಂಗಳ, ಬಲೆ, ಹೊಸಬೆಳಕು ಮುಂತಾದ ಉತ್ತಮ ಕಾದಂಬರಿಗಳನ್ನು ನೀಡಿರುವ ವಾಣಿಯವರ ಕಾದಂಬರಿಯೇ ಇದು ಎನ್ನಿಸುತ್ತದೆ. ಏಕೆಂದರೆ ಇದರ ಕಥಾವಸ್ತು ಮಾಮೂಲಿಯಾದದ್ದೇ. ಮದುವೆಯಾಗದ ಹೆಣ್ಣೊಬ್ಬ ಳನ್ನು ಕುರಿತ ಕರುಣಾಜನಕ ಸನ್ನಿವೇಶಗಳು ಇದರಲ್ಲಿವೆ. ಆದರೂ ಸಾವಧಾನವಾಗಿ ಕಾದಂಬರಿಯ ನಾಯಕಿಯಾದ ಸುಮಾಳಿಗೆ ಲಗ್ನವಾಗುತ್ತದೆ. ಆದುದರಿಂದಲೇ ಕಾದಂಬರಿಗೆ 'ಸುಲಗ್ನಾ ಸಾವಧಾನ' ಎಂಬ ಹೆಸರು. ಇಷ್ಟಿದ್ದರೂ ಕಾದಂಬರಿಯನ್ನು ನಿರೂಪಿಸಿರುವ ವಿಧಾನದಿಂದ ಕಾದಂಬರಿ ಓದಿಸಿಕೊಂಡು ಹೋಗುತ್ತದೆ.

ವಾಣಿಯವರ ಮತ್ತೊಂದು ಕಿರುಕಾದಂಬರಿ ಕೊಡುಗೆಯಲ್ಲಿ ಕನಕಳ ವ್ಯಕ್ತಿತ್ವ ಸ್ಫುಟವಾಗಿ ಮೂಡಿದೆ. ಕೊಡುಗೆ ಸಾಮಾಜಿಕ ಕಾದಂಬರಿಯ ಆಯಾಮ ಗಳೆಲ್ಲವನ್ನೂ ಹೊಂದಿದ್ದರೂ ಸಹ ಓದಿದಾಗ ಒಂದು ರೀತಿಯ ಪತ್ತೇದಾರಿ

ಕಾದಂಬರಿಯು ಅನುಭವವನ್ನು ಕೊಡುತ್ತದೆ. ಆರಂಭದಿಂದ ಅಂತ್ಯದವರೆಗೆ ಕುತೂಹಲದಿಂದ ಓದಿಸಿಕೊಂಡು ಹೋಗುವುದೇ ಈ ಕಾದಂಬರಿಯ ಪ್ರಮುಖ ಗುಣವಾಗಿದೆ. ರಂಗಾನೂರಿನ ಲಕ್ಷ್ಮೀನರಸಿಂಹಸ್ವಾಮಿಯ ಜಾತ್ರೆಯ ವಿವರಗಳೊಂದಿಗೆ ಕಾದಂಬರಿ ಆರಂಭವಾಗುತ್ತದೆ. ಅರ್ಚಕರಾದ ಕೇಶವಭಟ್ಟರು ಪ್ರತಿನಿತ್ಯವೂ ನೇಮ-ನಿಷ್ಠೆಗಳಿಂದ ದೇವರಪೂಜೆ ಮಾಡುತ್ತಿರುತ್ತಾರೆ. ಒಮ್ಮೆ ಅವರು ಮುಂಜಾನೆ ಸ್ನಾನ ಮಾಡಿ ಬಂದಾಗ ದೇವಾಲಯದಲ್ಲಿ ದೇವರ ಮೇಲಿದ್ದ ಆಭರಣಗಳೆಲ್ಲವೂ ಕಳುವಾಗಿರುತ್ತವೆ. ತನಿಖೆ ನಡೆಯುತ್ತದೆ. ಕೇಶವಭಟ್ಟರ ಮೇಲೆ ಯಾರೂ ಅನುಮಾನ ಪಡುವುದಿಲ್ಲ. ಆದರೆ ಜನರ ನಂಬಿಕೆಗೆ ತಾನು ಪಾತ್ರನಲ್ಲ ಎಂದು ನಂಬಿದ ಕೇಶವಭಟ್ಟರು ಮತ್ತೆ ಅರ್ಚಕತನವನ್ನು ಒಪ್ಪಿಕೊಳ್ಳುವುದಿಲ್ಲ. ಕೆಲವೇ ದಿನಗಳಲ್ಲಿ ಕೇಶವಭಟ್ಟರು ಪಾರ್ಶ್ವವಾಯುವಿಗೆ ತುತ್ತಾಗಿ ಹಾಸಿಗೆಯ ಮೇಲೆ ಮಲಗಿಕೊಳ್ಳುತ್ತಾರೆ. ಆಗ ಅವರಿಗೆ ಆಗದವರು ಆಡಿಕೊಂಡಿದ್ದೂ ಉಂಟು, 'ದೇವರ ಸ್ವತ್ತನ್ನು ಅರಗಿಸಿಕೊಳ್ಳುವುದು ಅಷ್ಟು ಸುಲಭವೇ? ಎಂದು, ಈ ಮಧ್ಯೆ ಒಂದು ದಿನ ಯಾರೋ ಒಂದು ಆಭರಣದ ಗಂಟನ್ನು ದೇವಾಲಯದ ಪ್ರಕಾರದಲ್ಲಿ ಎಸೆದು ಹೋಗಿರುತ್ತಾರೆ. ಯಾರೆಂದು ಗೊತ್ತೇ ಆಗುವುದಿಲ್ಲ.

ಕೇಶವಭಟ್ಟರು ತಮ್ಮ ಒಬ್ಬಳೇ ಮಗಳು ಅಲಮೇಲುವನ್ನು ತಿರುಚಿಯ ಬಳಿ ಒಂದು ಹಳ್ಳಿಯಲ್ಲಿದ್ದ ವರನಿಗೆ ಲಗ್ನ ಮಾಡಿಕೊಟ್ಟಿದ್ದರು. ತಾಯಿಯಿಂದ ವಿಷಯ ತಿಳಿದ ಅಲಮೇಲು ರಂಗಾನೂರಿಗೆ ಬಂದು ಅಲ್ಲಿನ ಮನೆಯನ್ನು ಮಾರಿ ತಂದೆ-ತಾಯಿಗಳೊಡನೆ ಹೊರಟು ಹೋಗುತ್ತಾಳೆ, ತನ್ನ ಗಂಡನ ಮನೆಗೆ. ಇದು ಕಾದಂಬರಿಯಲ್ಲಿನ ಒಂದು ಘಟ್ಟ. ಮತ್ತೆ ಕಾದಂಬರಿ ಆರಂಭವಾಗುವುದು ಶೇಷಾದ್ರಿಯ ಕಥೆಯೊಂದಿಗೇ.

ಶೇಷಾದ್ರಿ ಕನಕಳೆಂಬ ಹುಡುಗಿಯನ್ನು ಬಯಸಿ ಲಗ್ನವಾಗುವುದು, ಅವನಿಗೆ ವರ್ಗವಾಗಿ ಅವನು ರಂಗಾನೂರಿಗೇ ಬರುವುದು, ಕಾದಂಬರಿಯನ್ನು ಓದುತ್ತಿದ್ದಾಗ ಓದುಗರಿಗೆ ಈ ಘಟನೆಗಳಿಗೂ ಕೇಶವಭಟ್ಟರ ಕಥೆಗೂ ಸಂಬಂಧವೇ ಇಲ್ಲವೇನೋ ಅನ್ನಿಸುತ್ತದೆ. ಆದರೆ ಇವೆರಡಕ್ಕೂ ಸಂಬಂಧವಿದ್ದೇ ಇದೆ. ಮರೆವು ಓದುಗರದೆ ವಿನಃ ಲೇಖಕಿಯದಲ್ಲ. ಕೇಶವಭಟ್ಟರ ಮೊಮ್ಮಗನೂ, ಅಲಮೇಲುವಿನ ಮಗನೇ ಈ ಶೇಷಾದ್ರಿ. ಕುಶಲ ಈಜುಗಾರ, ಚಿತ್ರಕಾರ ಹಾಗೂ ದಕ್ಷ ಅಧಿಕಾರಿ. ಅವನಿಗೆ ತಾನು ಬಾಡಿಗೆಗಿರುವ ಮನೆ ತನ್ನ ತಾತನದೇ ಎಂದು ಗೊತ್ತಾಗುತ್ತದೆ. ಆ ದೇಗುಲದಂತಹ ಮನೆಯ ಹಿಂದುಗಡೆ ಚಿತ್ತಾರವುಳ್ಳ ಎರಡು ಕಂಭಗಳು, ಅವುಗಳಿಗೆ ತಾಕಿದಂತೆ ಒಂದು ಮೋಟುಗೋಡೆ. ಅಲ್ಲಿ ದೊರೆತ ಹಿತ್ತಾಳೆ ತಂಬಿಗೆಯ ಆಭರಣಗಳನ್ನು ಕಂಡು ಮಾನಸಿಕ ಕ್ಷೋಬೆಗೆ ಗುರಿಯಾಗುತ್ತಾನೆ ಶೇಷಾದ್ರಿ. ಬೇರೆ ಊರಿಗೆ ವರ್ಗ ಮಾಡಿಸಿಕೊಂಡು ಅಲ್ಲಿ ತನ್ನ ಮನಸ್ಸಿನಲ್ಲಿರುವುದನ್ನೆಲ್ಲಾ ಹೆಂಡತಿಗೆ ಹೇಳುತ್ತಾನೆ. ಕೊನೆಗೆ ಗಂಡ ಹೆಂಡತಿ ಇಬ್ಬರೂ ಸೇರಿ ಆ ಆಭರಣಗಳನ್ನು ಮಾರಿ ಅದರ ಹಣವನ್ನು

ಅನಾಥಾಶ್ರಮಕ್ಕೆ ಕೊಡುವ ನಿರ್ಧಾರ ಮಾಡುತ್ತಾರೆ. ಇಲ್ಲಿ ಕನಕಳ ಪಾತ್ರವೂ ಮುಖ್ಯವಾದುದು. ಅನಾಯಾಸವಾಗಿ ಸಿಕ್ಕ ಆಭರಣಗಳಿಗೆ ಆಸೆ ಪಡದೆ ಅದನ್ನು ತ್ಯಾಗ ಮಾಡುವ ಅವಳ ಉದಾತ್ತ ರೀತಿ ಆದರ್ಶಪ್ರಾಯವಾದುದು.

ಶ್ರೀಮತಿ ವಾಣಿಯವರು ಆರಿಸಿಕೊಂಡಿರುವ ಕಥಾವಸ್ತು, ಅವರು ವರ್ಣನೆಗಳನ್ನು ಮಾಡಿರುವ ರೀತಿ ಅವರ ಮೋಹಕವಾದ ಭಾಷಾಶೈಲಿ ಎಲ್ಲವೂ ಅಚ್ಚುಕಟ್ಟಾಗಿ 'ಕೊಡುಗೆ' ಕಾದಂಬರಿಯಲ್ಲಿ ಅಡಕವಾಗಿ ಹೋಗಿದೆ.

ಹದಿನೆಂಟಕ್ಕೂ ಹೆಚ್ಚಿನ ಕಾದಂಬರಿಗಳನ್ನು ಬರೆದಿರುವ ಶ್ರೀಮತಿ ಪುಷ್ಪಾ ಎನ್. ರಾವ್‌ರವರ 'ಜಲಪಂಜರ' ಕಾದಂಬರಿ ಉದ್ಯೋಗಸ್ಥ ಮಹಿಳೆಯ ಕಷ್ಟಗಳೇನು ಎಂಬುದನ್ನು ತಿಳಿಸುತ್ತದೆ. 'ಜಲಪಂಜರ' ಈ ಲೇಖಕಿಯ ಉತ್ತಮ ಕಾದಂಬರಿಗಳಲ್ಲಿ ಒಂದಾಗಿದೆ. ಅದಕ್ಕೆ ಕಾರಣ ಲೇಖಕಿಯವರ ಸರಳಶೈಲಿಯೇ ಎನ್ನಬಹುದು. ಸರಳವಾಗಿ ಬರೆಯಲಾದ ಈ ಕಾದಂಬರಿ ಸ್ವಲ್ಪವೂ ಕಷ್ಟವಾಗದಂತೆ ಓದಿಸಿಕೊಂಡು ಹೋಗುತ್ತದೆ. ಸಾಮಾನ್ಯವಾದ ಕಥಾವಸ್ತುವೇ ಆದರೂ ಅದನ್ನು ಪ್ರತಿಪಾದಿಸಿರುವ ರೀತಿ ಪ್ರಶಂಸನೀಯವಾಗಿದೆ. ಕಾದಂಬರಿಯ ನಾಯಕಿಯಾದ ಶಶಿ ಹೆಚ್ಚಿನ ವ್ಯಾಸಂಗ ಮಾಡಲಾಗದೆ ಮನೆಯ ಪರಿಸ್ಥಿತಿಗಳಿಗೆ ಸಿಕ್ಕು ಕೆಲಸಕ್ಕೆ ಸೇರುತ್ತಾಳೆ. ತಿಂಗಳ ಸಂಬಳ ಬರುವ ಮೊದಲೇ ಅವಳ ಕೊನೆಯ ತಮ್ಮ ಪೋಲಿಯೋಗೆ ಗುರಿಯಾಗುತ್ತಾನೆ. ಕೈಲಿದ್ದ ಹಣ ಔಷಧಿಗಳಿಗೆ ಖರ್ಚಾಗುತ್ತದೆ. ನಂತರ ತಂದೆ ನಿವೃತ್ತರಾಗುತ್ತಾರೆ. ಮನೆಯ ಜವಾಬ್ದಾರಿ ಎಲ್ಲಾ ಅವಳದೇ. ಆಫೀಸಿಗೆ ಹೋದರೆ ಗೃಧ್ರನಂತಿರುವ ಆಫೀಸರನು ಹೆಣ್ಣು ಹೆಣ್ಣೆಂದು ಯಾವಾಗಲೂ ಹಂಬಲಿಸುತ್ತಾ, ವಯಸ್ಸಾದರೂ ತನ್ನ ಚಪಲ ತೀರಿಸಿಕೊಳ್ಳಲು ಪದೇ ಪದೇ ಶಶಿಯನ್ನು ತನ್ನ ಛೇಂಬರಿಗೆ ಕರೆದು ಅವಳನ್ನು ನೋಡುತ್ತಾ ಆನಂದಿಸುತ್ತಾನೆ. ಅವನು ಹೀಗೆಯೇ ಹಿಂದೆ ಇದ್ದ ಒಬ್ಬ ಹುಡುಗಿಯನ್ನು ಕೆಡಿಸಿ ಅವಳು ಸಾಯುವಂತೆ ಮಾಡಿದ ಧೂರ್ತ. ಶೀಲಾ, ಮಾಲಾಳಂತ ಗೆಳತಿಯರಿಂದ ಶಶಿಗೆ ಅದಷ್ಟೊ ಸಮಾಧಾನ. ಮನೆಗೆಬಂದರೆ ತಂಗಿ-ತಮ್ಮಂದಿರ ಬೇಡಿಕೆಗಳಿಂದ ನೊಂದ ಶಶಿ ಸಂಸಾರದ ಹೊಣೆ ಎಂತಹುದೆಂಬುದನ್ನರಿಯುತ್ತಾಳೆ. ತಂದೆ ಸತ್ತನಂತರ, ತಮ್ಮ ಮುರಳಿಯೂ ಕೆಲಸಕ್ಕೆ ಸೇರಿದ್ದರಿಂದ ಎಷ್ಟೋ ಸಮಾಧಾನವಾಯಿತು ಶಶಿಗೆ. ಶಶಿಯ ಅದೃಷ್ಟ, ಕುಮುದ ರಾಘವೇಂದ್ರರೆಂಬ ಶ್ರೀಮಂತರ ಮಗನಾದ ರಮೇಶ ಅವಳ ಕೈ ಹಿಡಿಯುತ್ತಾನೆ. ಎಲ್ಲರೂ ಶಶಿ ಸುಖವಾಗಿರುವಳೆಂದುಕೊಂಡರು. ಶ್ರೀಮಂತ ಸುಂದರ ಪತಿಯಿರುವಾಗ, ಡಾಕ್ಟರನಾದ ಪತಿ ಸಂಪಾದಿಸುವಾಗ ತಾನೇಕೆ ಕೆಲಸಕ್ಕೆ ಹೋಗಬೇಕೆಂದುಕೊಂಡಳು ಶಶಿ. ಆದರೆ ಗಂಡನ ಸಮಸ್ಯೆಯೇ ಬೇರೆ. ಅವನು ಯಾರ ಕೈಕೆಳಗೂ ಕೆಲಸಕ್ಕಿರಬಯಸದೆ ತನ್ನದೇ ಆದ ಸ್ವಂತ ನರ್ಸಿಂಗ್‌ಹೋಂ ತೆಗೆಯುತ್ತಾನೆ. ಅದಕ್ಕಾಗಿ ಅಪಾರ ಸಾಲವಾಗುತ್ತದೆ. ಅದನ್ನು ತೀರಿಸಲು ಮತ್ತೆ ಶಶಿ ಕೆಲಸಕ್ಕೆ ಹೋಗುತ್ತಾಳೆ. ರಮೇಶನ ನರ್ಸಿಂಗ್ ಹೋಂ

ಸರಿಯಾಗಿ ನಡೆಯದೆ ಅವನು ಕೊನೆಗೆ ಅದನ್ನು ಮುಚ್ಚುತ್ತಾನೆ. ಶಶಿ ಕೆಲಸಕ್ಕೆ ಹೋಗುವುದು ಷೋಕಿಗಾಗಿ ಎಂದು ತಿಳಿದ ಅತ್ತೆ ಕುಮುದ ಮನೆಯ ಕೆಲಸವನ್ನು ಅವಳಿಗೇ ವಹಿಸಿ ಕಿರುಕುಳ ನೀಡುತ್ತಾಳೆ. ಗರ್ಭಪಾತವಾದ ಮೇಲೆ ಶಶಿ ತೀರಾ ನೊಂದು ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟುಬಿಡಲೇ ಎಂದುಕೊಂಡರೂ ಗಂಡನ ಒತ್ತಾಯದಿಂದ ಹಾಗೆ ಮಾಡುವುದಿಲ್ಲ. ತಮ್ಮ ಆನಂದ ಸತ್ತಾಗಲೂ ಬರದ ರಮೇಶನ ಕ್ರೌರ್ಯದಿಂದ ಬೇಸತ್ತು ರಾಜೀನಾಮೆಯನ್ನು ಕೊಡುತ್ತಾಳೆ. ಶಶಿ.

ಕಾದಂಬರಿಯ ಅಂತ್ಯ ಅತ್ಯಂತ ಕರುಣಾಪೂರ್ಣವೂ, ಹೃದಯಂಗಮವೂ ಆದುದಾಗಿದೆ.

ರಮೇಶ ಹೇಳುತ್ತಾನೆ. "...ನಂಗೆ ಕೆಲಸ ಸಿಕ್ಕಿದ್ರೂ ನನ್ನೊಬ್ನ ಸಂಪಾದನೆ ಈ ಸಂಸಾರದ ಗಾಡಿ ಎಳೆದು, ಮಾಡಿರೋ ಸಾಲಾನ ತೀರಿಸಕ್ಕಾಗತ್ಯೆ ಹೇಳು ಶಶಿ. ಯಾಕ್ಹೀಗೆ ಹೊಟ್ಟೆ ಉರಿಸ್ತಿದೀಯಾ?"

"ಹಾಗಾದ್ರೆ ನಾನು ಕೆಲಸಕ್ಕೆ ಹೋಗುವುದು ಅವಶ್ಯಕ ತಾನೆ!"

"ಈಗ ಹೇಳಿ ಉಪಯೋಗ ಏನು ಶಶಿ. ಮನೆಯ ಪರಿಸ್ಥಿತಿ ನಿನಗೆ ತಿಳಿದಿರಲಿಲ್ಲವೇ? ನನ್ನ ಸಂಪಾದನೆ ಶುರುವಾಗಿ ಪರಿಸ್ಥಿತಿ ಸುಧಾರಿಸಿದ ಮೇಲೆ ನಿನ್ನನ್ಯಾರು ಕೆಲಸಕ್ಕೆ ಕಳಿಸುತ್ತಾರೆ."

ಹಾಯ್ ದುರ್ವಿಧಿ. ಗಂಡನ ದೈನ್ಯಮುಖ ನೋಡಲಾರದೆ 'ನಾನು ಇವತ್ತು ಹೋಗಿ ಕ್ಷಮಾಪಣೆ ಕೇಳಿ ರಾಜೀನಾಮೆ ಪತ್ರ ವಾಪಸ್ಸು ತಗೋತೀನಿ ಎನುತ್ತಾಳೆ' ಶಶಿ.

ಶಶಿಯ ಆಸೆ ಚೂರಾಯಿತು. ಕಾದಂಬರಿಯ ಕೊನೆಯ ವಾಕ್ಯಗಳು ಇವು. "...ಈ ಸುಖದಲ್ಲೂ ಅವಳಿಗೆ ಜ್ಞಾಪಕಕ್ಕೆ ಬಂದದ್ದು ತಾನು ಹಿಂದೆ ಕನಸು ಕಂಡಿದ್ದ. ಜಲಪಂಜರ. ಸಾಗರದಲ್ಲಿಳಿಬಿಟ್ಟ ಬಲೆಯೊಂದರಲ್ಲಿ ಮೀನು ಸಿಕ್ಕಿ ಒದ್ದಾಡುತ್ತಿತ್ತು. ಜಲವಿದೆ. ನಿಜ. ಆದರೆ ಸ್ವಾತಂತ್ರ್ಯವಿಲ್ಲ. ತನ್ನ ಪಾಡು ಅದೇ ಗತಿ ಎಂದುಕೊಂಡಾಗ ನಗು ಬಂತು. ಉದ್ಯೋಗಸ್ಥ ಮಹಿಳೆಯ ಬಿಡಿಸಲಾರದ ಸಮಸ್ಯೆ ಹೀಗೆ ಕಾದಂಬರಿಯಲ್ಲಿ ಹರಡಿಕೊಂಡಿದೆ. ವಿಧವೆ ಸುಭದ್ರಮ್ಮ, ರೋಹಿಣಿ, ಮುರಳಿ, ವಿಶಾಲಾಕ್ಷಿ, ಕುಮುದ, ಕೋಮಲಾಬಾಯಿ ಮೊದಲಾದ ಪಾತ್ರಗಳಿಂದ ಕಾದಂಬರಿ ಕೂಡಿದ್ದು ರಸವತ್ತಾದ ಅನುಭವವನ್ನು ನೀಡುತ್ತದೆ. ಇಂತಹ ಕಾದಂಬರಿಯನ್ನು ನೀಡಿ ಲೇಖಕಿಯವರು ಅಭಿನಂದನೆಗೆ ಪಾತ್ರರಾಗಿದ್ದಾರೆ. ಮುಖಚಿತ್ರ ಕಾದಂಬರಿಗೆ ತಕ್ಕಂತಿದೆ.

ಆದರೆ ಪುಷ್ಪಾ ಎನ್. ರಾವ್‌ರ 'ಗಗನ ಸುಖ' ಕಾದಂಬರಿ 'ಜಲಪಂಜರ' ಕಾದಂಬರಿಯಷ್ಟು ಚೆನ್ನಾಗಿಲ್ಲ. ಇಲ್ಲಿ ಕಥಾವಸ್ತು ಉತ್ತಮವಾಗಿದ್ದರೂ ಅದನ್ನು ನಿರೂಪಿಸುವ ಪ್ರಯತ್ನದಲ್ಲಿ ಲೇಖಕಿಯವರು ಸಾಕಷ್ಟು ಸಫಲರಾಗಿಲ್ಲ.

'ಗಗನಸುಖ' ಕಾದಂಬರಿಯಲ್ಲಿ ಸೂಳೆ 'ರಂಗಮ್ಮನ ಕಥೆ ಹರಡಿಕೊಂಡಿದೆ. ರಂಗಮ್ಮ ಹುಟ್ಟು ವೇಶ್ಯಾವೃತ್ತಿಯಲ್ಲಿ ತೊಡಗಿದವಳಲ್ಲ. ಅವಳ ರೂಪ ಅವಳನ್ನು ಹಾಗಾಗುವಂತೆ ಮಾಡಿತು. ಅವಳ ಗಂಡ ಕೃಷ್ಣಪ್ಪನನ್ನು ದೂರ ಕಳುಹಿಸಿ ಅವಳ ಮೇಲೆ ಮೊದಲಿನಿಂದಲೂ ಕಣ್ಣಿಟ್ಟಿದ್ದ ಊರಿನ ಶ್ರೀಮಂತ ರಂಗಮ್ಮನನ್ನು ಭೋಗಿಸುತ್ತಾನೆ. ರಂಗಮ್ಮನ ಅಂಗಾಂಗಗಳ ಸೌಂದರ್ಯವೆಲ್ಲವನ್ನೂ ಶ್ರೀಮಂತ ಕೊಳ್ಳೆ ಹೊಡೆಯುತ್ತಾನೆ. ಅಂಗಡಿ ವ್ಯಾಪಾರ ಮಾಡಲಾಗದ, ಆಸ್ಪತ್ರೆಯಲ್ಲಿನ ಗಂಡನನ್ನು ಉಪಚರಿಸಿ ನೋಡಿಕೊಳ್ಳಲಾಗದ, ಹಣದ ಅಗತ್ಯ ಹೆಚ್ಚಾಗಿದ್ದ ರಂಗಮ್ಮ ಮೆಲ್ಲನೆ ಜಾರುತ್ತಾಳೆ. ಸಾಹುಕಾರನ ಬಯಕೆಗೆ ಓಗೊಡುತ್ತಾಳೆ. ತನ್ನ ಆಸೆ ಪೂರೈಸಿದ ಮೇಲೆ ಸಾಹುಕಾರ ಗರ್ಭಿಣಿಯಾದ ಅವಳನ್ನು ದೂರವಿಡುತ್ತಾನೆ. ಇತ್ತ ಗಂಡ ಮಡಿಯುತ್ತಾನೆ. ರಂಗಮ್ಮ ಈಗ ದಿಕ್ಕಿಲ್ಲದವಳು. ತನಗಾಗಿಯಲ್ಲದಿದ್ದರೂ ತನ್ನ ಹೊಟ್ಟೆಯ ಪಾಡಿಗಾಗಿ ಕರುಳಿನ ಕುಡಿಗಾಗಿ ಅವಳು ಕಾಮುಕರ ಕಣ್ಣುಗಳಿಗೆ ಬಲಿಯಾಗಬೇಕಾಯಿತು. ಐಶ್ವರ್ಯ ರಂಗಮ್ಮನನ್ನು ದೊಡ್ಡ ಶ್ರೀಮಂತಳನ್ನಾಗಿಸಿತು. ಅವಳ ಮಗ ಮುಕುಂದ ವಿದ್ಯಾವಂತನಾದ. ತಾನು ಬಯಸಿದ ಹುಡುಗಿಯನ್ನು ಲಗ್ನವಾದ. ಮುಕುಂದನ ಪತ್ನಿ ಅತ್ತೆಯನ್ನು ತಿರಸ್ಕಾರದಿಂದ ಕಂಡಳು. ಮಗನಿಂದ ಸುಖ ಬಯಸಿದ ರಂಗಮ್ಮನಿಗೆ ದೊರೆತುದುದು ದುಃಖವೇ. ಮಗ ಎಲ್ಲ ಅಧಿಕಾರವನ್ನೂ ತಾಯಿಯಿಂದ ಕಸಿದುಕೊಂಡು ಅವಳನ್ನೇ ದೂರ ಮಾಡಿದ. ಕಪ್ಪುಹಣ ಸಂಗ್ರಹ ಮಾಡಿದ್ದಕ್ಕಾಗಿ ಸರಕಾರದ ದೃಷ್ಟಿಬಿದ್ದ ಒಂದಲ್ಲ ಒಂದು ರೀತಿಯಲ್ಲಿ ದುಃಖಗಳನ್ನು ಸವಾಲಾಗಿ ಸ್ವೀಕರಿಸಿದ, ರಂಗಮ್ಮನಿಗೆ ಮತಿಭ್ರಮಣೆಯಾಯಿತು. ಹುಚ್ಚಿಯಾದ ಅವಳನ್ನು ಯಾರೂ ಗಮನಿಸುವವರೇ ಇಲ್ಲ. ಹುಚ್ಚಿ ರಂಗಮ್ಮನನ್ನು ಕಂಡ ತನ್ನ ಗೆಳೆಯ ರಾಜೇಂದ್ರನೂರಿಗೆ ಬಂದಿದ್ದ ಶೇಖರ ಕೇಳಿದಾಗ ಈ ಕಥೆಯೆಲ್ಲವನ್ನೂ ರಾಜೇಂದ್ರ ಹೇಳುತ್ತಾನೆ. ರಾಜೇಂದ್ರನ ತಂಗಿ ಭಾಮಾಳನ್ನು ಕಂಡು ಮೋಹಗೊಂಡ ಶೇಖರ ಭಾಮಾಳ ತಂದೆ ಹರಿಪ್ರಸಾದರನ್ನೊಪ್ಪಿಸಿ ಅವಳನ್ನೇ ಲಗ್ನವಾಗುತ್ತಾನೆ. ಭಾಮಾಳ ಅಣ್ಣ ರಾಜೇಂದ್ರ ಹಾಗೂ ತಾಯಿ ಲಕ್ಷ್ಮಿಗೆ ಇದರಿಂದ ಬಹಳವೇ ಸಂತೋಷವಾಗುತ್ತದೆ.

ಮಲೆನಾಡಿನ ಪ್ರಕೃತಿ ಸೌಂದರ್ಯ, ಅಲ್ಲಿ ಶೇಖರನಿಗಾಗಿ ಅವನ ಗೆಳೆಯನ ಮನೆಯವರು ಮಾಡುವ ಅತಿಥಿ ಸತ್ಕಾರ, ವಿವಿಧ ತರಹದ ಅಡಿಗೆಗಳು ಇವೆಲ್ಲದರ ವಿವರಣೆಯನ್ನು ಲೇಖಕಿಯವರು, ಈ ಕಾದಂಬರಿಯಲ್ಲಿ ಸೊಗಸಾಗಿ ಮಾಡಿಕೊಟ್ಟಿದ್ದಾರೆ.

ತಾನು ಕಂಡ ಕನಸೆಲ್ಲವೂ ರಂಗಮ್ಮನ ಪಾಲಿಗೆ ಗಗನಸುಖವಾಗುತ್ತವೆ. ಆದರಿಂದಲೇ ಈ ಕಾದಂಬರಿಗೆ 'ಗಗನಸುಖ'ವೆಂದು ಹೆಸರು. ಕಾದಂಬರಿಯಲ್ಲಿ ಮುದ್ರಣ ದೋಷ ಗಳಿಲ್ಲದಿದ್ದರೂ ಕೆಲವೊಂದು ನೀರಸ ಹಾಗೂ ಬೇಸರ ತರಿಸುವಂತಹ ಪ್ರಸಂಗಗಳಿ ಗೇನೂ ಕೊರತೆಯಿಲ್ಲ.

'ಪದ್ಮರಾಗ' ಕಾದಂಬರಿಯಲ್ಲಿ ಕೆ. ಆರ್. ಪದ್ಮಜೆಯವರು ಕಾಮದ ಸಮಸ್ಯೆ ಯನ್ನು ತೆಗೆದುಕೊಂಡು ಅದನ್ನು ನವಿರಾಗಿ ನಿರೂಪಿಸಿದ್ದಾರೆ. ಒಂದೇ ನಾಣ್ಯದ ಎರಡು ಮುಖಗಳಂತಿರುವ ಗಂಡು-ಹೆಣ್ಣುಗಳ ವ್ಯಕ್ತಿತ್ವದ ವಿಶ್ಲೇಷಣೆಗೆ ತಮ್ಮ ಗಮನ ಹರಿಸಿದ್ದಾರೆ. ರಘು ಕಾದಂಬರಿಯ ನಾಯಕ. ಒಬ್ಬ ಅಧ್ಯಾಪಕನಾಗಿ ಯಾವ ರೀತಿ ತನ್ನ ಉನ್ನತ ಆದರ್ಶಗಳನ್ನು ನನಸಾಗಿಸಿಕೊಳ್ಳಲು ಬಯಸಿದ ಎಂಬುದೂ ಇಲ್ಲಿ ಮುಖ್ಯವಾಗಿದೆ. ರಘುವಿನ ಹಿಂದಿನ ಕಥೆ ಬಹಳ ವ್ಯಥೆಯುಳ್ಳಂತಹುದು. ಕಾಮಾಕ್ಷಕ್ಕ ಅವನನ್ನು ತಮ್ಮನೆಂದು ಆದರಿಸಿ ರಾತ್ರಿಯ ವೇಳೆ ಅವನ ಪುರುಷತ್ವದ ಪರಮ ಸುಖವನ್ನನುಭವಿಸುವ ಮಟ್ಟಿಗೆ ಕಾಮೇಚ್ಛೆಯಿಂದ ಕೂಡುತ್ತಾಳೆ. ರಘು ಆಗ ಹರೆಯದ ಯುವಕ. ತುಂಬು ಸೂಸುವ ಯೌವ್ವನ. ಮುಖಕ್ಕೆ ಮೀಸೆ ಬೇರೆ ಮೆರಗು. ದೃಢವಾದ ಮೈಕಟ್ಟು. ಯಾವೊಂದು ಹೆಣ್ಣು ಬಯಸಬಹುದಾದ ಮದನ ಸುಂದರ ಅವನು. ಅವನ ತೋಳು, ತೊಡೆ, ಹರವಾದ ಎದೆ, ಗಳನ್ನು ಕಂಡೇ ಎಷ್ಟೋ ಹೆಂಗಸರು ಹುಚ್ಚಿಯಾದುದುಂಟು. ಕಾಮಾಕ್ಷಿ ಮಕ್ಕಳ ತಾಯಿ. ರಘುವಿನ ಎರಡರಷ್ಟು ವಯಸ್ಸು. ಆದರೆ ಕಾಮವಿದೆಯಲ್ಲ. ರಾಜನಂತಹ ಈ ಹುಡುಗನಿಂದ ಸಿಗುವ ಸುಖ ತನ್ನ ಪೇಲವ ಗಂಡನಿಂದ ದೊರಕೀತೇ ? ಕಾಮಾಕ್ಷಿಯ ಕಥೆಯನ್ನು ರಘು ಮುಂದೆ ಪೂರ್ಣಿ ಮಾಳಿಗೆ ತಿಳಿಸುತ್ತಾನೆ.

ಕಾಮಿಯಾದಾಗ ಸ್ತ್ರೀ ಅಥವಾ ಪುರುಷ ಎಂತಹ ಮಟ್ಟಕ್ಕಿಳಿಯುತ್ತಾರೆಂಬು ದಕ್ಕೆ ಕಾಮಾಕ್ಷಿಯೇ ನಿದರ್ಶನ. ಎಲ್ಲಾ ಕಡೆ ಹೆಣ್ಣಿನ ಮೇಲೆ ಗಂಡು ಅತ್ಯಾಚಾರ ಮಾಡಿದರೆ ಈ ಕಾದಂಬರಿಯಲ್ಲಿ ಅದು ಭಿನ್ನ. ಇಲ್ಲಿ ಗೃಹಿಣಿಯಾದ ಹೆಂಗಸು ಹೃಷ್ಟ ಪುಷ್ಟ ಯುವಕನ ಮೇಲೆ ಅತ್ಯಾಚಾರ ನಡೆಸುತ್ತಾಳೆ. ಮಾನ ಹೆಣ್ಣಿಗೇ ಅಲ್ಲ ಗಂಡಿಗೂ ಇದೆ. ಇದರ ಪ್ರತಿಬಿಂಬವೇ ರಘುವಿನ ಪಾತ್ರವಾಗಿದೆ. ಜೋಡಿ ಬೇಡೋ ಕಾಲ ಬಂದಾಗ ಹೆಣ್ಣು-ಗಂಡಿನಲ್ಲಿ ಆಸೆ ಚಿಗುರುವುದು ಸಹಜ. ಆದರೆ ಇಲ್ಲಿ ಇಜ್ಜೋಡಿನ ಕಾಮ ಕಥೆಯಿದೆ.

ಈ ಕಾದಂಬರಿಯ ಕಥಾವಸ್ತು ಸಾಧಾರಣವಾದುದು. ಕೆಲವೊಮ್ಮೆ ಪೇಲವ ನಿರೂಪಣೆಯೂ ಬಂದಿದೆ. ಕಾದಂಬರಿಯಲ್ಲಿ ಹದಿಹರೆಯದವರನ್ನು ಉದ್ರೇಕಿಸುವ ಕೆಲವು ಪ್ರಸಂಗಗಳೂ ವರ್ಣನೆಗಳೂ ಉಂಟು. ಅವನ್ನು ಹೇಳುವುದಕ್ಕಿಂತ ಪುಸ್ತಕ ದಲ್ಲಿರುವಂತೆ ಕೊಡಬಹುದು.

'ಗಗನದ ಕಡೆ ಮುಖಮಾಡಿ ಗರ್ವದಿಂದ ತಲೆ ಎತ್ತಿ ನಿಂತಿರುವ ಎರಡು ಶಿಖರಗಳಂತಿರುವ ವಕ್ಷೋಜಗಳು. ನಗ್ನವಾದ ಹೊಟ್ಟೆಯ ಭಾಗ. ತೊಡೆಯವರೆಗೂ ಸರಿದು ಗುಪ್ಪೆಯಾಗಿ ಪೇಪರಿನಂತಿರುವ ಸೀರೆ. ಅದರ ಮುಂದುಗಡೆಯಲ್ಲಿ ಕಾಣುವ ಹೊಳೆಯುವ ಅರ್ಧ ತೊಡೆ. ಕಾಲುಗಳಲ್ಲಿನ ಮೀನಖಂಡಗಳು." ಹೀಗೆ ವರ್ಣನೆ ಸಾಗುತ್ತದೆ. ಪದ್ಮಜೆಯವರು ಅದೇಕೆ ತಮ್ಮ ಕಾದಂಬರಿಗಳಲ್ಲಿ ಈ ರೀತಿಯ ಲೈಂಗಿಕ ಸನ್ನಿವೇಶಗಳನ್ನು ತುರುಕುತ್ತಾರೋ ತಿಳಿಯದು. ಆದರೆ ಪದ್ಮರಾಗದಂತಹ ರತ್ನಪ್ರಾಯರಾದ ರಘು-ಪೂರ್ಣಿಮರಂತಹ ಪವಿತ್ರ ಪ್ರೇಮವುಳ್ಳ ನಾಯಕ-ನಾಯಿಕೆಯರ ಬಾಳ ಕಥೆಯೂ ಇದರಲ್ಲಿದೆ ಎಂಬುದನ್ನು ಮರೆಯಲಾಗುವುದಿಲ್ಲ.

ಜೈನಯಕ್ಷಿ ಜ್ವಾಲಾಮಾಲಿನಿಯನ್ನು ಕುರಿತಂತೆ ಧಾರಿಣಿಯವರು 'ಶಕ್ತಿಶ್ರೀ' ಕಾದಂಬರಿಯನ್ನು ಬರೆದಿದ್ದಾರೆ. ಸಾಕಷ್ಟು ಶ್ರಮವಹಿಸಿ ಜ್ವಾಲಾಮಾಲಿನಿಯ ಬಗೆಗೆ ವಿಷಯ ಸಂಗ್ರಹಣೆ ಮಾಡಿ, ಕಲ್ಪನೆಯೊಡನೆ ಗದ್ಯರೂಪದಲ್ಲಿ ನಿರೂಪಿಸಿರುವ ಈ ಪೌರಾಣಿಕ ಕಾದಂಬರಿ ತನ್ನ ವರ್ಣನಾ ಪ್ರಸಂಗಗಳಿಂದ ಮನಸೆಳೆಯುತ್ತದೆ.

ಉದಾಹರಣೆಗೆ ಈ ವರ್ಣನೆಯನ್ನು ನೋಡಿ.

"...ಕಿರಣ ಸ್ಪರ್ಶದಿಂದ ಪುಳಕಿತಳಾದ ಸರೋವರ ಲಕ್ಷ್ಮಿಯ ಮೈ ನವಿರಿನಂತೆ ಒಂದೊಂದು ದಳಗಳನ್ನು ಅರಳಿಸುತ್ತಾ, ಕೇಸರ ಪೀಠದ ಮೇಲೆ ಬಂದು ಕುಳಿತ ದುಂಬಿಗಳಿಗೆ ಸುಧಾರಸಪಾನ ಮಾಡಿಸಿ ಬೆಳಗನ್ನು ಚೇತೋಹಾರಿಯಾಗಿ ಝುಂಕೃತಿ ನಾದಕ್ಕೆ ತಲೆಯೊಲೆಯುತ್ತಾ ಬೆಳಗನ್ನು ಚೇತೋಹಾರಿಯಾಗಿ ಮಾಡಿದ ಬೆಳ್ದಾವರೆಗಳು ಕಾಂಚನಮಾಲೆಯ ಬರವಿಗಾಗಿ ಕಾಯುತ್ತಿದ್ದವು..." ಬಹು ವರ್ಣರಂಜಿತ ಮಣಿಮಾಣಿಕ್ಯರಚಿತ ಕಲಶವೊಂದು ಆ ತಿಳಿನೀರಿನಲ್ಲಿ ಅವಳಿಗೆ ಗೋಚರಿಸಿತು..." ಇಷ್ಟೇ ಅಲ್ಲ ಬಂಗಾರದ ಪಾವಟಿಗೆ. ನವರತ್ನಮಯವಾದ ದಿವ್ಯಭವನ, ಕಸ್ತೂರಿಯ ಸಾರಣೆ, ಮುತ್ತಿನ ರಂಗವಲ್ಲಿ, ಮರಕತಮಣಿಯ ನೆಲಗಟ್ಟು, ವೈಢೂರ್ಯದ ಬಿತ್ತಿ, ದಂತದ ಬಾಗಿಲು, ನವರತ್ನದ ಸಿಂಹಾಸನ ಇವೆಲ್ಲದರ ವಿಚಾರವೂ ಇದೆ. ಅಕ್ಷಯ ಸುಖನಾಥ, ದಶಾಂಗಧೂಪ, ಆಯುಷ್ಯ, ಜ್ಞಾನಾವರಣೀಯ ಮುಂತಾದ ಅನೇಕ ಜೈನ ಪಾರಿಭಾಷಿಕ ಶಬ್ದಗಳು ಕಾದಂಬರಿಯಲ್ಲಿ ನುಸುಳಿವೆ. ಸಮವಸರಣದ ವರ್ಣನೆಯಲ್ಲಿ ಲೇಖಕಿ ತಮ್ಮ ಪ್ರತಿಭಾ ಕೌಶಲವನ್ನು ಮೆರೆದಿದ್ದಾರೆ.

ಚಂದ್ರಪ್ರಭ ತೀರ್ಥಂಕರರಿಗೆ ಯಕ್ಷಿದೇವಿಯಾಗಿ ಜ್ವಾಲಾಮಾಲಿನಿ ಎಂಬ ಹೆಸರು ಪಡೆದಳು ಕಾಂಚನಮಾಲೆ. 78ನೇ ಪುಟದಲ್ಲಿ "ಮುಡಿಯಾ ಮಲ್ಲಿಗೆ ಪಾಲಿಸು..." ಎಂಬ ಪದ್ಯವೊಂದು ಬಂದಿದೆ. ಕುಂತಿ, ಕರ್ಣ, ಶಾಂತಿಮತಿ, ಸಮಂತಭದ್ರ, ಪುಂಡರೀಕ ಮುಂತಾದ ಅನೇಕ ಪಾತ್ರಗಳನ್ನೊಳಗೊಂಡಿರುವ ಈ ಕಾದಂಬರಿ ಪ್ರಾಚೀನ ಜೈನ ಕವಿಗಳು ರಚಿಸಿದ ಜೈನಪುರಾಣಗಳನ್ನು ಓದಿದಂತೆಯೇ ಓದಿದಾಗ

ಭಾಸವಾಗುತ್ತದೆ. ಇಂದಿನ ಮಹಿಳೆಯರಿಗೆ, ಈ ಕಥಾವಸ್ತು ಹಾಗೂ ಇದರ ಧೋರಣೆ ಗಳು ಎಷ್ಟರ ಮಟ್ಟಿಗೆ ಪ್ರಸ್ತುತವಾಗುತ್ತವೆ ಎಂಬ ಪ್ರಶ್ನೆ ನಿರುತ್ತರವಾಗಿಯೆ ಉಳಿಯುತ್ತದೆ.

—ಕೆ. ರಮಾನಂದ

೦ ೦ ೦ ೦

ಅನುವಾದಿತ

ಇತರ ಭಾಷೆಗಳಿಂದ ಕನ್ನಡಕ್ಕೆ ಅನುವಾದಗೊಂಡು ಈ ವರ್ಷ ಬಂದ ಕಾದಂಬರಿಗಳು ಗುಣ ಮತ್ತು ಮೌಲ್ಯದ ದೃಷ್ಟಿಯಿಂದ ಅಂತಹ ವಿಶೇಷ ಪ್ರಗತಿ ಯನ್ನೇನೂ ಸಾಧಿಸಿಲ್ಲವೆನ್ನಬಹುದು. ಕಳೆದ ವರ್ಷಕ್ಕೆ ಹೋಲಿಸಿದರೆ ಇವುಗಳ ಸಂಖ್ಯೆಯೂ ಕಡಿಮೆಯೇ. ಆದರೆ ಈ ವರ್ಷ ಬಂದಿರುವ 'ನ್ಯಾಯಾಧೀಶ', 'ಕಮರಿದ ಚಿಗುರು', 'ದೀಕ್ಷೆ' ಮತ್ತು 'ಡಾನ್ ಕ್ವಿಕ್ಸೋಟ್'—ಈ ಕೃತಿಗಳು ತಮ್ಮ ವಿಶಿಷ್ಟ ಗುಣ ದಿಂದ, ಸತ್ವದಿಂದ, ಹಾಗೂ ಭಾಷಾ ಪ್ರೌಢಿಮೆಯಿಂದ ಗಮನ ಸೆಳೆಯುತ್ತವೆ. ಇವನ್ನು ಬಿಟ್ಟರೆ ಉಳಿದವು ತೀರಾ ಸಾಧಾರಣ ಮಟ್ಟದ ಕೃತಿಗಳು.

'ನ್ಯಾಯಾಧೀಶ' ತಾರಾಶಂಕರ ಬ್ಯಾನರ್ಜಿ ಅವರ 'ಬಿಚಾರಕ್' ಎಂಬ ಬಂಗಾಳಿ ಕಾದಂಬರಿಯ ಕನ್ನಡಾನುವಾದ. ಇದನ್ನು ಕನ್ನಡಿಸಿದವರು ಎಚ್. ಎ. ರಾಮಕೃಷ್ಣ. ನಿಷ್ಣಾತ ನ್ಯಾಯಾಧೀಶರೆಂದು ಹೆಸರಾಗಿದ್ದ ಜ್ಞಾನೇಂದ್ರನಾಥರು ಅಪರಾಧಿಗಳ ವಿಚಾರಣೆ ನಡೆಸುವ ವೈಖರಿ ವಿಶಿಷ್ಟವಾದುದು. ಅವರು ನ್ಯಾಯಾನ್ಯಾಯಗಳ ನಿಷ್ಠುರ ಪ್ರತಿಪಾದಕರಾಗಿದ್ದರು. ಅಪರಾಧವನ್ನು ಕೂಲಂಕಷವಾಗಿ ಪರಾಮರ್ಶಿಸಿ ವಾದ-ಪ್ರತಿ ವಾದವನ್ನು ಸೂಕ್ಷ್ಮವಾಗಿ ಅವಲೋಕಿಸಿ, ನಂತರ ತಮ್ಮ ಘನವಾದ ತೀರ್ಪನ್ನಿತ್ತು ನಿಜವಾದ ಅಪರಾಧಿಗೆ ಶಿಕ್ಷೆ ವಿಧಿಸುವುದರಲ್ಲಿ ಅವರು ನಿಷ್ಣಾತರು. ಅವರ ವೈಶಿಷ್ಟ್ಯ ಪೂರ್ಣ ವಿಚಾರಮಥನ, ಘನವಾದ ನಿಲುವು, ನಿಷ್ಪಕ್ಷಪಾತ ನಿರ್ಣಯ-ಇವುಗಳಿಂದಾಗಿ ಅವರ ಬಗ್ಗೆ ಜನರಲ್ಲಿ ಗೌರವಾದರಾಭಿಮಾನಗಳನ್ನುಂಟು ಮಾಡಿದ್ದವು.

ಒಮ್ಮೆ ಒಂದು ಸೆಷನ್ಸ್ ಮೊಕದ್ದಮೆಯ ವಿಚಾರಣೆಯ ಬಗೆಗೆ ಕ್ಷ-ಕಿರಣ ಬೀರಿ ತೀರ್ಪನ್ನು ಕೊಡುವ ಘಳಿಗೆಯಲ್ಲಿ ಸೂಕ್ಷ್ಮ ಸಂವೇದನಾಶೀಲರಾದ ಜ್ಞಾನೇಂದ್ರ ನಾಥರಿಗೆ ತಮ್ಮ ಜೀವನದಲ್ಲಿ ನಡೆದ ಭಯಂಕರ ಘಟನೆಯೊಂದು ನೆನಪಿಗೆ ಬಂದು ಅವರ ಮನಶ್ಶಾಂತಿಯನ್ನು ಕೆಡಿಸುತ್ತದೆ. ತಪ್ಪಿತಸ್ಥರಿಗೆ ಶಿಕ್ಷೆ ಕೊಡುವ ನ್ಯಾಯಾಧೀಶರೇ

ಅಪರಾಧೀ ಪ್ರಜ್ಞೆಯಿಂದ ನರಳುತ್ತಿರುವಾಗ ಅಂತಹವರಿಗೆ ಶಿಕ್ಷೆ ಕೊಡುವ ನ್ಯಾಯಾಲಯ ಯಾವುದು? ಎಂಬ ಮಾನಸಿಕ ಹೊಯ್ದಾಟಕ್ಕೆ ಸಿಕ್ಕಿ ತೊಳಲಾಡುವ ಜ್ಞಾನೇಂದ್ರರ ವ್ಯಕ್ತಿತ್ವದ ಚಿತ್ರಣ ಓದುಗರ ಮನಮುಟ್ಟುತ್ತದೆ. ಮತ್ತು ಕಾದಂಬರಿಯಲ್ಲಿ ಸೂಕ್ಷ್ಮವಾಗಿ ಚಿತ್ರಿತವಾಗಿರುವ ಈ ಅಂಶ ತೀವ್ರ ಪರಿಣಾಮಕಾರಿಯಾಗಿದೆ.

ಜ್ಞಾನೇಂದ್ರರ ಮೊದಲ ಹೆಂಡತಿ ಸುಮತಿ, ತನ್ನ ದಾಯಾದಿ ಸುರಮಾ ಮತ್ತು ಜ್ಞಾನೇಂದ್ರರ ಸಲಿಗೆಯ ಒಡನಾಟವನ್ನು ಸಂಶಯದಿಂದ, ಮತ್ಸರದಿಂದ ಕಾಣುತ್ತಾಳೆ. ಪತಿಯ ನಡತೆಯ ಬಗ್ಗೆ ಸಂಶಯತಾಳಿ, ಕ್ರಮೇಣ ದ್ವೇಷಾಸೂಯೆ, ಸೇಡಿನ ಅಗ್ನಿ ಜ್ವಾಲೆಯಲ್ಲಿ ಬೆಂದು, ಕಡೆಗೆ ಅವಿವೇಕಿಯಾಗಿ ತಾನೇ ನಿರ್ಮಿಸಿದ ಅಗ್ನಿಗೆ ಆಹುತಿಯಾಗುತ್ತಾಳೆ. ಹೆಂಡತಿಯನ್ನು ಅಪಾಯದಿಂದ ರಕ್ಷಿಸಲಾರದೆ (ಅವರೂ ಅದೇ ದುರಂತದ ಸುಳಿಯಲ್ಲಿ ಸಿಲುಕಿ ಅಸಹಾಯಕ ಸ್ಥಿತಿಯಲ್ಲಿರುತ್ತಾರೆ) ದುರಂತದ ಸುಳಿಯಿಂದ ಹೇಗೋ ಪಾರಾಗಿ ಸುರಕ್ಷಿತ ಸ್ಥಳಕ್ಕೆ ಬಂದ ನ್ಯಾಯಾಧೀಶರ ಜೀವ ಉಳಿಯುತ್ತದೆ. ಸುಮತಿ ಸಾಯುತ್ತಾಳೆ. ಈಗಿನ ಮೊಕದ್ದಮೆಯಲ್ಲೂ ಇದೇ ಪರಿಸ್ಥಿತಿ. ಅಣ್ಣ ನಾಗೆನ್ ಈಜು ಬರದ ತಮ್ಮ ಖಾಗೆನ್‌ನನ್ನು ರಕ್ಷಿಸಲು ಸಾಧ್ಯವಾಗದ ಪರಿಸ್ಥಿತಿಯಲ್ಲಿ ಸಿಲುಕುತ್ತಾನೆ. ಅವನಿಗೂ ಸಹ ಜ್ಞಾನೇಂದ್ರರಿಗೆ ಒದಗಿದ ಸ್ಥಿತಿಯೇ ಒದಗುತ್ತದೆ. ನೀರಿನಲ್ಲಿ ಮುಳುಗಿ ತಮ್ಮ ಸಾಯುತ್ತಾನೆ. ಅಪಾಯದಿಂದ ಪಾರಾಗಿ ಬದುಕುಳಿದ ಅಣ್ಣ ನಾಗೆನ್ ಈಗ ಕೊಲೆಗಾರನೆಂದು ಅಪರಾಧೀಸ್ಥಾನದಲ್ಲಿ ನಿಂತಿದ್ದಾನೆ. ಅವನನ್ನು ನಿಜವಾಗಿಯೂ ಅಪರಾಧಿಯೆಂದು ಪರಿಗಣಿಸಿ ಅವನಿಗೆ ನ್ಯಾಯಾಧೀಶರು ಶಿಕ್ಷೆ ವಿಧಿಸಿದರೆ ತಾವೂ ಅದೇ ಶಿಕ್ಷೆಗೆ ಅರ್ಹರು. ತಾವೂ ಅಪರಾಧೀ ಸ್ಥಾನದಲ್ಲಿ ನಿಲ್ಲಬೇಕು? ಆದರೆ ನ್ಯಾಯಾಧೀಶರಿಗೆ ಶಿಕ್ಷೆ ವಿಧಿಸುವ ನ್ಯಾಯಾಲಯ ಯಾವುದು?—ಈ ಬಗೆಯ ಮಾನಸಿಕ ಹೊಯ್ದಾಟಕ್ಕೆ ಸಿಕ್ಕ ಸೂಕ್ಷ್ಮ ಪ್ರಜ್ಞೆಯ ವ್ಯಕ್ತಿಯೊಬ್ಬನ ಚಿತ್ರಣ ಸುಂದರವಾಗಿ ಬಂದಿದೆ. ನ್ಯಾಯಾಧೀಶರು ಪಡುವ ಪಶ್ಚಾತ್ತಾಪವೇ ಅವರಿಗೆ ನಿಜವಾದ ಶಿಕ್ಷೆ!

ಜ್ಞಾನೇಂದ್ರರ ಎರಡನೆಯ ಹೆಂಡತಿ ಸುರಮಾ ಪತಿಯ ಮಾನಸಿಕ ಹೊಯ್ದಾಟವನ್ನು ಅರ್ಥ ಮಾಡಿಕೊಳ್ಳಬಲ್ಲ ಚಾಣಾಕ್ಷೆ, ಅವರ ಹಿತಚಿಂತಕಳು ಹಾಗೂ ಕಲಾರಸಿಕಳು. ನಿಜವಾದ ಅರ್ಥದಲ್ಲಿ ಅವಳು ಅವರ ಬಾಳ ಸಂಗಾತಿ. ಸುಮತಿ-ಸುರಮಾ ಇವರಿಬ್ಬರ ಗುಣ ಸ್ವಭಾವಗಳಲ್ಲಿ ಅಜಗಜಾಂತರ. ವಿರುದ್ಧ ದಿಕ್ಕಿನಲ್ಲಿ ಸಾಗುವ ಈ ಸ್ತ್ರೀ ಪಾತ್ರಗಳು ನ್ಯಾಯಾಧೀಶರ ಬಾಳಿನಲ್ಲಿ ಒಂದು ಬಿರುಗಾಳಿಯನ್ನೆಬ್ಬಿಸಿದರೆ, ಮತ್ತೊಂದು ತಂಗಾಳಿಯನ್ನು ಬೀಸುತ್ತದೆ. ಅವರ ಕದಡಿದ ಮನಸ್ಸಿಗೆ ಶಾಂತಿ ಸಮಾಧಾನಗಳನ್ನು ನೀಡಲು ಸುರಮಾ ಸರ್ವ ಪ್ರಯತ್ನ ಮಾಡುತ್ತಾಳೆ. ನಿರರ್ಗಳವಾಗಿ ಓದಿಸಿಕೊಳ್ಳುವ ಅನುವಾದದ ಸಹಜ ಭಾಷೆ, ಅಲ್ಲಲ್ಲಿ ಬಳಸಿರುವ ಫ್ಲ್ಯಾಷ್‌ಬ್ಯಾಕ್ ತಂತ್ರದ ಬಳಕೆ,

ಬಹುಕಾಲ ನೆನಪಿನಲ್ಲುಳಿಯಬಲ್ಲ ಪಾತ್ರ ಚಿತ್ರಣ, ಸಂವೇದನಾಶೀಲ ವ್ಯಕ್ತಿಯೊಬ್ಬನ ಮಾನಸಿಕ ಸಂವೇದನೆಯ ಚಿತ್ರಣ–ಇವುಗಳಿಂದ ಕೂಡಿರುವ ಈ ಕೃತಿ ಕನ್ನಡಕ್ಕೆ ಒಂದು ಉತ್ತಮ ಕೊಡುಗೆ.

ಸುಶೀಲಾ ಕೊಪ್ಪರ್ ಅವರು ಮರಾಠಿಯಿಂದ ಅನುವಾದಿಸಿರುವ ಖಾಂಡೇಕರರ 'ಕಮರಿದ ಚಿಗುರು' ಒಂದು ಬೌದ್ಧಿಕ ಕಾದಂಬರಿ. ಪ್ರೇಮ, ಪ್ರೀತಿ ವಿಶ್ವಾಸಗಳಿಲ್ಲದೆ ಬರಿಯ ಕಾಮದ ಪಾತ್ರವೇ ಹೆಚ್ಚಾಗಿರುವ ದಾಂಪತ್ಯ ಜೀವನ ಬರಡು. ಪ್ರೇಮ-ಕಾಮಗಳ ಸ್ವರೂಪ ಎಂತಹುದಿರಬೇಕು, ಅವು ವ್ಯಕ್ತಿಗಳ ಬಾಳಿನಲ್ಲಿ ಎಂತಹ ಪಾತ್ರ ವಹಿಸಬೇಕು ಎಂಬುದನ್ನು ಈ ಕಾದಂಬರಿ ವೈಜ್ಞಾನಿಕವಾಗಿ ವಿಶ್ಲೇಷಿಸಿದೆ.

ಪಿರೆಂಡೇಲೊ ಅವರ "Six characters in search of an author" ನಾಟಕದ ತಂತ್ರವನ್ನು ಲೇಖಕರು ಈ ಕಾದಂಬರಿಯಲ್ಲಿ ಬಳಸಿರುವುದಾಗಿ ತಿಳಿಸಿದ್ದಾರೆ. ನಾಟಕದಲ್ಲಿ ನಾಟಕಕಾರ ನಿರ್ಮಿಸಿದ ಪಾತ್ರಗಳು ಅವನಿಗೆ ಪ್ರತ್ಯಕ್ಷವಾಗಿ ಭೇಟಿಯಾಗಿ ತಮ್ಮ ನಿಜವಾದ ಕಥೆಯನ್ನು ಹೇಳಿಕೊಳ್ಳುವಂತೆ ಇಲ್ಲಿಯೂ ಲೇಖಕ ರಚಿಸಿದ 'ಪಾರಿಜಾತದ ಹೂವುಗಳು' ಎಂಬ ಕಥೆಯ ಪಾತ್ರಗಳು ಲೇಖಕನನ್ನು ಭೇಟಿ ಯಾಗಿ ತಮ್ಮ ನಿಜಸ್ಥಿತಿಯನ್ನು ತಿಳಿಸುತ್ತವೆ. ಕಲ್ಪನೆಯ ಮತ್ತು ವಾಸ್ತವ ಬದುಕಿನ ನಡುವೆ ಇರುವ ಅಂತರವನ್ನು ಈ ಕೃತಿ ಚೆನ್ನಾಗಿ ತೋರಿಸುತ್ತದೆ. ಇಲ್ಲಿನ ನಿರೂಪಣಾ ತಂತ್ರದ ನಾವೀನ್ಯ ಕುತೂಹಲಕಾರಿಯಾಗಿದೆ.

'ಕಮರಿದ ಚಿಗುರು' ಕಾದಂಬರಿಯ ಕುಸುಮ ಎಂಬ ದುರ್ದೈವಿ ಪಾತ್ರ ತನ್ನ ಬಾಲ್ಯ ಸ್ನೇಹಿತನಿಗೆ ತನ್ನ ವೈವಾಹಿಕ ಜೀವನದ ವಿಷಮತೆಯನ್ನು ಈ ಮಾತುಗಳಲ್ಲಿ ತಿಳಿಸುತ್ತಾಳೆ. "ನಾನು ಪಾರಿಜಾತದ ಹೂವಾಗುವುದಿಲ್ಲವಪ್ಪಾ ! ಈ ಹೂವೇನು-ಬರೀ ದೇವರಿಗೆ ಮಾತ್ರ ಪ್ರಯೋಜನ. ಎಂದೂ ಬಾಡದೇ ಇರುವಂಥ-ಮುಡಿಯಲಿಕ್ಕೆ ಬರುವಂತ ಹೂವಾಗುತ್ತೇನೆ ನಾನು" ಎಂದು ತನ್ನನ್ನು 'ಪಾರಿಜಾತದ ಹೂವೆಂದು' ಛೇಡಿಸುತ್ತಿದ್ದ ತನ್ನ ಬಾಲ್ಯ ಸ್ನೇಹಿತನಿಗೆ ಹೇಳುತ್ತಿದ್ದಳು (ಪು. 48) "ಕಾವ್ಯದಲ್ಲಿನ ಅನುಭವಗಳು ಯಾವಾಗಲೂ ವ್ಯಾವಹಾರಿಕ ಜೀವನದಲ್ಲಿ ಬರುತ್ತವೆ ಎಂದು ತಿಳಿಯ ಬೇಕಾಗಿಲ್ಲ" ಎಂದು ಅವಳ ಬಾಲ್ಯದ ದಿನಗಳಲ್ಲಿ ಹೇಳುತ್ತಿದ್ದಳು. ಆದರೆ ಮದುವೆಯ ನಂತರ ಎಷ್ಟೋ ವರ್ಷಗಳಾದ ಮೇಲೆ ಅವಳ ಮನೆಗೆ ಬಂದ ಅವಳ ಬಾಲ್ಯ ಸ್ನೇಹಿತನಿಗೆ ತನ್ನ ವೈವಾಹಿಕ ಜೀವನದ ಬಗ್ಗೆ ತಿಳಿಸುವ ಈ ಮಾತು "ಎಂದೂ ಬಾಡದ ಗುಲಾಬ ಶಾವಲಿ ಹೂವಾಗಬೇಕೆಂದುಕೊಂಡಿದ್ದೆ ನಾನು ! ಆದರೆ ದೈವ ನನ್ನ ಹಣೆಯ ಮೇಲೆ 'ಪಾರಿಜಾತ' ಎಂದು ಬರೆದುಬಿಟ್ಟಿತ್ತು. ನನ್ನ ಭವಿಷ್ಯ ನಿನಗರಿಯದೇ ನಿನ್ನ ಬಾಯಿಂದ ಹಾಗೆ ನುಡಿಸುತ್ತಿತ್ತು" ಅವಳ ದುರ್ದೈವದ ಬಾಳಿಗೆ ಕನ್ನಡಿ ಹಿಡಿದಂತಿದೆ. ಗಂಡನ ಕಾಮುಕತನ, ಪಶುತನಕ್ಕೆ ಪಾರಿಜಾತದಂತೆ ಸುಕೋಮಲ ವಾಗಿದ್ದ ಯುವತಿಯ ಬಾಳು ಕಮರಿತು.

ಹೀಗೆ ಬೇರೆ ಬೇರೆ ಅನುಭವಗಳನ್ನು ಪಡೆದ ನಿಜ ಜೀವನದ ವ್ಯಕ್ತಿಗಳು ಬರಹ ಗಾರನನ್ನು ಭೇಟಿಯಾಗಿ ತಮ್ಮ ವಾಸ್ತವ ಸಮಸ್ಯೆಯನ್ನು ಅವನ ಮುಂದಿಟ್ಟಾಗ ಅವನಿಗೆ ನಿಜಸ್ಥಿತಿಯ ಅರಿವಾಗುತ್ತದೆ. ಕವಿಗಳು ಚಿತ್ರಿಸುವ ಪ್ರೇಮ ಅರ್ಧಸತ್ಯ ವಾದುದು ಎಂಬ ಅರಿವು ಲೇಖನಗಾಗುತ್ತದೆ. "ಮದುವೆಗೆ ಮೊದಲು ಪತಿ-ಪತ್ನಿಯ ರಿಬ್ಬರೂ ಕವಿಗಳಾಗಿರುತ್ತಾರೆ. ಮದುವೆಯ ನಂತರ ಅವರಿಬ್ಬರೂ ಒಬ್ಬೊಬ್ಬರ ಟೀಕಾಕಾರರಾಗುತ್ತಾರೆ. ಸ್ತ್ರೀಯನ್ನು ಗೋಳು ಹೊಯ್ಯುವ ಪುರುಷರಂತೆಯೇ ಗಂಡಂದಿರನ್ನು ಹುರಿದು ತಿನ್ನುವ ಹೆಂಡಂದಿರೂ ಜಗತ್ತಿನಲ್ಲಿ ಜನ್ಮವೆತ್ತಿದ್ದಾರೆ. ನಿಮ್ಮಂಥ ಲೇಖಕರಿಗೆ ಮಾತ್ರ ಅವರು ಕಾಣಿಸುವುದೇ ಇಲ್ಲ !" ಎಂಬ ಡಾ. ಸಾನೆ ಯವರ ಈ ಮಾತುಗಳಿಗೆ ಸಮರ್ಥನೆಯಾಗಿ ಇಲ್ಲಿಯ ಹಲವು ಪಾತ್ರಗಳು ಕಾಣಿಸಿ ಕೊಳ್ಳುತ್ತವೆ. ಪುಸ್ತಕಕ್ಕಿಂತ, ಕಲ್ಪನೆಗಿಂತ ಮನುಷ್ಯರ ಅಭ್ಯಾಸ ಮಾಡಿ ಸತ್ಯವನ್ನು ಶೋಧಿಸುವ ಅವರ ಅನುಭವವನ್ನು ಒರೆಗೆ ಹಚ್ಚಿ ನೋಡುವ ಡಾ. ಸಾನೆಯವರ ಪ್ರಭಾವದಿಂದಾಗಿ ಖಾಂಡೇಕರರು ಈ ಕೃತಿಯ ರಚನೆಗೆ ಕೈ ಹಾಕಿರುವುದಾಗಿ ಹೇಳಿ ದ್ದಾರೆ. ಸ್ತ್ರೀ ಪುರುಷರ ಪ್ರೇಮ-ಕಾಮಗಳ ಸಂಬಂಧದ ಬಗ್ಗೆ ಬರೆದಿರುವ ಡಾ. ಸಾನೆ ಯವರ ಸುದೀರ್ಘ ಪತ್ರ ಈ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದೆ. ಆದರೆ ಈ ಕೃತಿ ಯನ್ನು ಓದಿದ ನಂತರ ಕಾದಂಬರಿಯ ಕಲಾತ್ಮಕತೆಗಿಂತ ಹೆಚ್ಚಾಗಿ ಇದೊಂದು ಗಂಭೀರ ವಿಷಯ ಹಾಗೂ ಸಮಸ್ಯೆಗಳ ಬಗ್ಗೆ ವಿಚಾರ ಮಂಥನ ನಡೆಸಿರುವ ಒಂದು ಪ್ರೌಢವಾದ ವೈಚಾರಿಕ ಬರೆಹವಾಗಿದೆ ಎಂದು ಅನಿಸುತ್ತದೆ. ಇಲ್ಲಿ ಬರುವ ಬಹುತೇಕ ಪಾತ್ರಗಳ Case History ನಮಗೆ ಸಿಗುತ್ತದೆ.

ಒಟ್ಟಿನಲ್ಲಿ ಸ್ತ್ರೀ-ಪುರುಷರ ನಡುವಿನ ಸಂಬಂಧವನ್ನು ಸಾಮಾಜಿಕ, ನೈಸರ್ಗಿಕ, ಮನೋವೈಜ್ಞಾನಿಕ ನೆಲೆಯಲ್ಲಿ ಬಿಚ್ಚು ಮನಸ್ಸಿನಿಂದ ವಿಶ್ಲೇಷಿಸಿರುವ ಈ ಕೃತಿ ಕನ್ನಡಕ್ಕೆ ಬಂದಿರುವುದು ಹರ್ಷದ ಸಂಗತಿ. ಸುಶೀಲಾ ಕೊಪ್ಪರ್ ಅವರ ಅನುವಾದ ಹೃದ್ಯವಾಗಿದೆ.

ನರೇಂದ್ರ ಕೋಹಲಿ ಅವರ ಹಿಂದಿ ಕಾದಂಬರಿ 'ದೀಕ್ಷೆ'ಯನ್ನು ತಿಪ್ಪೇಸ್ವಾಮಿ ಮತ್ತು ಎಂ. ವಿ. ನಾಗರಾಜರಾವ್ ಅವರು ತುಂಬ ಸಮರ್ಥವಾಗಿ ಕನ್ನಡಿಸಿದ್ದಾರೆ. ರಾಮಾಯಣದ ವಸ್ತು, ಪಾತ್ರಗಳನ್ನು, ವಿಶಿಷ್ಟ ದೃಷ್ಟಿಕೋನಗಳಿಂದ ಪರಿಶೀಲಿಸಿ ಕೋಹಲಿಯವರು ರಾಮಾಯಣ ಕಥೆಯನ್ನಾಧರಿಸಿ ನಾಲ್ಕು ಸ್ವತಂತ್ರ ಕಾದಂಬರಿ ಗಳನ್ನು ಹಿಂದಿಯಲ್ಲಿ ರಚಿಸಿದ್ದಾರೆ. ಇವುಗಳಲ್ಲಿ ಮೊದಲನೆಯದು 'ದೀಕ್ಷೆ'. ಉಳಿದ ಮೂರು ಕನ್ನಡಕ್ಕೆ ಬರಲಿವೆ.

ಅನ್ಯಾಯದ ವಿರುದ್ಧ ಹೋರಾಡಲು ಆರ್ಯರನ್ನು ಹುರಿದುಂಬಿಸಿ ಅವರ ನೇತೃತ್ವ ವಹಿಸಲು ರಾಮನನ್ನು ಮಾನಸಿಕವಾಗಿ, ದೈಹಿಕವಾಗಿ ಸಿದ್ಧಗೊಳಿಸಿದ ಯಶಸ್ಸು ವಿಶ್ವಾಮಿತ್ರರದು. ಮಾನವತಾವಾದಿ ರಾಮ ಅನ್ಯಾಯ ಅತ್ಯಾಚಾರಗಳ

ವಿರುದ್ಧ ಅಂದು ಹೂಡಿದ ಸಮರ ಇಂದೂ ನಿರಂತರವಾಗಿ ಒಂದಲ್ಲ ಒಂದು ರೀತಿಯಲ್ಲಿ ಪುನರಾವರ್ತನೆಯಾಗುತ್ತಿದೆ. ವ್ಯವಸ್ಥೆಯ ಕ್ರೂರ ಕಪಿ ಮುಷ್ಟಿಗೆ ಸಿಕ್ಕಿ ನರಳಿದ, ಅತ್ಯಾಚಾರಕ್ಕೊಳಗಾಗಿ ತಮ್ಮ ಅಸ್ತಿತ್ವವನ್ನು ಕಳೆದುಕೊಂಡ ನಿಷ್ಪಾಪ ಜೀವಿಗಳನ್ನು ಮೇಲೆತ್ತಿ ಅವರಲ್ಲಿ ಆತ್ಮವಿಶ್ವಾಸ ತುಂಬಿ ರಾಕ್ಷಸ ಶಕ್ತಿಯ ವಿರುದ್ಧ ಹೋರಾಡಲು ಅವರನ್ನು ಸಿದ್ಧಗೊಳಿಸಿದ ರಾಮ ಒಬ್ಬ ಸಮರ್ಥ ನಾಯಕನಂತೆ ಇಲ್ಲಿ ಚಿತ್ರಿತ ನಾಗಿದ್ದಾನೆ.

ಯಾವ ಅಪರಾಧವನ್ನೂ ಮಾಡದ ಅಹಲ್ಯೆ ಸಮಾಜದಿಂದ ಬಹಿಷ್ಕರಿಸಲ್ಪಟ್ಟು ಏಕಾಂಗಿಯಾಗಿ ಜೀವಿಸಬೇಕಾಗುತ್ತದೆ. ಅವಳ ಕತೆ ಕೇಳಿದ ರಾಮ ಅಹಲ್ಯೆಯನ್ನು ಸಂಧಿಸಿ ಅವಳ ಪಾದಗಳಿಗೆ ನಮಸ್ಕರಿಸುತ್ತಾನೆ. ಇದರಿಂದ ಅವಳ ಅನಾಥ ಪ್ರಜ್ಞೆ ಕಳೆದು, ಅವಳ ನಿರಪರಾಧಿಯೆಂದು ಜಗತ್ತಿಗೆ ಸಾಬೀತಾಗಿ ಅವಳು ಹೊಸ ಬದುಕು ಪಡೆಯುತ್ತಾಳೆ. ಅಹಲ್ಯೆ-ಗೌತಮರ ಈ ಪ್ರಸಂಗ ದೀರ್ಘವಾಗಿದ್ದು ನಿರೂಪಣೆ ಕುತೂಹಲಕಾರಿಯಾಗಿದೆ. ಅಜ್ಞಾತ ಕುಲದವಳಾದ ಸೀತೆಯನ್ನು ತನ್ನ ಶೌರ್ಯ ದಿಂದ ಗೆದ್ದು ಅವಳನ್ನು ವಿವಾಹವಾದನು. ಶಿವಧನುಸ್ಸಿನ ಪರೀಕ್ಷೆಯ ಪ್ರಸಂಗದ ವರ್ಣನೆ ರೋಚಕವಾಗಿದೆ. ಹೀನ ಕುಲಜಳಾದ ವನಜ ಎಂಬ ಯುವತಿಗೆ ರಾಮ ಹೊಸ ಬದುಕನ್ನು ತೋರಿಸಿಕೊಟ್ಟನು. ಹೀಗೆ ಸಮಾಜದ ಕಣ್ಣಿನಲ್ಲಿ ಕೆಳಮಟ್ಟದ ದಲ್ಲಿದ್ದ ವ್ಯಕ್ತಿಗಳನ್ನು ಮಾನವೀಯ ದೃಷ್ಟಿಯಿಂದ ಕಂಡು ಅವರ ಬದುಕನ್ನು ಅರ್ಥ ಪೂರ್ಣವಾಗಿ ಮಾಡಿದ ರಾಮ ಉದಾತ್ತ ವ್ಯಕ್ತಿಯಾಗಿದ್ದಾನೆ. ಲಕ್ಷ್ಮಣ ರಾಮನನ್ನು ನೆರಳಿನಂತೆ ಅನುಸರಿಸುತ್ತಾನೆ.

ರಾಮಾಯಣದ ಘಟನೆಗಳು ಪ್ರಸ್ತುತ ಸಮಾಜದ ಘಟನೆಗಳಿಗೆ ಹೊಂದಾಣಿಕೆ ಯಾಗುವುದರಲ್ಲಿ ಯಾವ ಆಕಸ್ಮಿಕವೂ ಇಲ್ಲ. ಏಕೆಂದರೆ ಮನುಷ್ಯನ ರಾಕ್ಷಸೀ ಪ್ರವೃತ್ತಿ, ಅನ್ಯಾಯ, ಅತ್ಯಾಚಾರಗಳಿಗೆ ಕಾಲ ದೇಶಗಳ ಎಲ್ಲೆಯಿಲ್ಲ. ಆದರೆ, ಸಮರ್ಥ ನಾಯಕನ ಮುಂದಾಳತ್ವವಿದ್ದರೆ ಜನ ಸಾಮಾನ್ಯರೂ ಶಕ್ತಿಶಾಲಿಗಳಾಗಿ, ಆತ್ಮವಿಶ್ವಾಸದಿಂದ ಅನ್ಯಾಯದ ವಿರುದ್ಧ ಹೋರಾಡಲು ಮುಂದೆ ಬರುತ್ತಾರೆ ಎಂಬುದನ್ನು ಇತಿಹಾಸ ನಮಗೆ ತಿಳಿಸುತ್ತದೆ. ರಾಮ ಅನ್ಯಾಯದ ವಿರುದ್ಧ ನಿರಂತರ ಹೋರಾಡಲು 'ದೀಕ್ಷೆ' ತೆಗೆದುಕೊಳ್ಳುವ ಮನಸ್ಸು ಮಾಡಿದ್ದು ವಿಶ್ವಾಮಿತ್ರರ ಪ್ರಭಾವದಿಂದ. ಹೀಗೆ ರಾಮಾಯಣದ ಕಥೆಗೆ ಹೊಸ ಆಯಾಮವನ್ನು ಕೊಟ್ಟು ಪ್ರಸ್ತುತ ಪರಿಸ್ಥಿತಿಗೆ ಹೊಂದುವಂತೆ ಅಲ್ಲಿನ ಘಟನೆಗಳನ್ನು ಜೋಡಿಸಿರುವ ರೀತಿ ಮೆಚ್ಚುವಂತಹುದು. ನಿರೂಪಣಾಶೈಲಿ, ಅನುವಾದದ ಭಾಷೆ ಹೃದ್ಯವಾಗಿದೆ. ಇಂತಹ ಒಂದು ವಿಶಿಷ್ಟ ಕಾದಂಬರಿಯನ್ನು ಕನ್ನಡಿಗರಿಗೆ ಒದಗಿಸಿರುವ ಅನುವಾದಕರು ಅಭಿನಂದನಾರ್ಹರು ಈ ಮಾಲೆಯ ಉಳಿದ ಕೃತಿಗಳು ಕನ್ನಡಕ್ಕೆ ಬೇಗ ಬರಲೆಂದು ಆಶಿಸೋಣ.

ಸ್ಪ್ಯಾನಿಷ್ ಭಾಷೆಯ ಸುಪ್ರಸಿದ್ಧ ವಿಡಂಬನ ಕೃತಿಯೆಂದು ಹೆಸರಾದ ಸರ್ವಾಂಟಿಸನ 'ಡಾನ್‌ಕ್ವಿಕ್ಸೋಟ್' ಕಾದಂಬರಿಯ ಸಂಗ್ರಹಾನುವಾದವನ್ನು ಎ. ರಾಮು

ರಾವ್ ಅವರು ಸಮರ್ಥವಾಗಿ ಮಾಡಿದ್ದಾರೆ. ಈ ಕಾದಂಬರಿಯನ್ನು ಸಮಗ್ರವಾಗಿ ಅರ್ಥೈಸಿಕೊಳ್ಳಲು ಬೇಕಾಗುವ ಅವಶ್ಯ ಸಾಧನ-ಸಾಮಗ್ರಿಗಳನ್ನು ಲೇಖಕರು ಅಚ್ಚುಕಟ್ಟಾಗಿ ಒದಗಿಸಿರುವುದರಿಂದ ಇದೊಂದು ಮೌಲಿಕ ಕೃತಿಯಾಗಿದೆ. ಮೂಲ ಲೇಖಕರ ವ್ಯಕ್ತಿಚಿತ್ರ, ಜೀವನ, ಕೃತಿಯ ರಚನೆಯ ಹಿಂದಿರುವ ಪ್ರೇರಣೆ, ಪ್ರಭಾವ, ಕೃತಿಯ ವಿಮರ್ಶೆ-ಇವುಗಳನ್ನೊಳಗೊಂಡಿದೆ ಈ ಪುಸ್ತಕ. ಈ ವಿಡಂಬನ ಕೃತಿಯನ್ನು ಆಮೂಲಾಗ್ರವಾಗಿ ತಿಳಿಯ ಬಯಸುವ ಕುತೂಹಲಮತಿಗೆ ಇದು ಅತ್ಯಂತ ಉಪಯುಕ್ತವಾದ ಕಿರುಹೊತ್ತಿಗೆ ಎನ್ನುವುದರಲ್ಲಿ ಯಾವ ಅನುಮಾನವೂ ಇಲ್ಲ. ಹೀಗಾಗಿ ಇದರ ಮೂರ್ತಿ ಚಿಕ್ಕದಾದರೂ ಇದು ಬೀರುವ ಪರಿಣಾಮ ಗಾಢವಾದುದು.

ಡಾನ್‌ಕ್ವಿಕ್ಸೋಟ್ ಮತ್ತು ಅವನ ಅನುಚರ ಹೊರನೋಟಕ್ಕೆ ಹಾಸ್ಯ ಉಕ್ಕಿಸುವ, ಓದುಗರನ್ನು ನಗಿಸುವ ಕಾಲ್ಪನಿಕವ್ಯಕ್ತಿಗಳೆನಿಸುತ್ತಾರೆ. ಆದರೆ ಅವರು ಬದುಕಿನಲ್ಲಿ ಎದುರಿಸುವ ಕಷ್ಟ-ಕಾರ್ಪಣ್ಯ, ಅನುಭವಿಸುವ ನೋವು ಅವರ ಕಣ್ತೆರೆಸುತ್ತವೆ. ಜಗತ್ತನ್ನು ವಾಸ್ತವಿಕ ದೃಷ್ಟಿಯಿಂದ ವಿವೇಚನಾ ದೃಷ್ಟಿಯಿಂದ ನೋಡುವ ಚಾತುರ್ಯವನ್ನುಅವು ಕಲಿಸುತ್ತವೆ. ಒಬ್ಬನು ವೀರೋಚಿತ ಕಾರ್ಯಗಳನ್ನು ಮಾಡಿ ಜಗದ್ವಿಖ್ಯಾತನಾಗಬಯಸುವ ಆಶಾವಾದಿ ಮತ್ತೊಬ್ಬ ಅಧಿಕಾರ-ಐಶ್ವರ್ಯಗಳನ್ನು ಪಡೆಯಲು ತವಕಿಸುವ ಮಹತ್ವಾಕಾಂಕ್ಷಿ-ಇದಕ್ಕಾಗಿ ಅವರು ಹಲವಾರು ಮಾರ್ಗಗಳನ್ನು ಅನುಸರಿಸುತ್ತಾರೆ. ದೈಹಿಕ ಯಾತನೆ, ಅವಮಾನ, ಕಷ್ಟನಷ್ಟಗಳಿಗೆ ಗುರಿಯಾದ ಅವರು ವಿಚಿತ್ರ ಅನುಭವಗಳನ್ನು ಪಡೆಯುತ್ತಾರೆ. ಆದರೆ ನಿರ್ಲಕ್ಷ್ಯ ಪ್ರಪಂಚ ಅವರನ್ನು ಅರ್ಥಮಾಡಿಕೊಳ್ಳುವುದಿಲ್ಲ. ಅವರು ನಗೆಪಾಟಲಿಗೆ ಗುರಿಯಾಗುತ್ತಾರೆ. ಹೀಗೆ ಮೇಲುನೋಟಕ್ಕೆ ಓದುಗರನ್ನು ನಗಿಸುವ ಪಾತ್ರಗಳಾಗಿ ಇವರು ಚಿತ್ರಿತವಾಗಿದ್ದರೂ, ಒಳನೋಟಕ್ಕೆ ಮಾನವೀಯ ಮಿಡಿತಗಳಿಗೆ ಓಗೊಡುವ ಸರ್ವಕಾಲಿಕ ಸತ್ಯದ ಸಂಕೇತಗಳಾಗಿ ನಿಲ್ಲುತ್ತಾರೆ.

ಹೀಗೆ ಸರ್ವಾಂಟಿಸನು ಈ ಕೃತಿಯಲ್ಲಿ ಸಾರ್ವಕಾಲಿಕ ಮಾನವೀಯ ಮೌಲ್ಯಗಳನ್ನು ಎತ್ತಿ ಹಿಡಿದಿದ್ದಾನೆ. ಮತ್ತು ತನ್ನ ಕಾಲದ ವೀರ ಪುರುಷರ ಸಾಹಸ ಜೀವನ ಧೋರಣೆಗಳು, ಸ್ಪೇನ್ ದೇಶದ ಸಂಸ್ಕೃತಿ, ಜನಜೀವನ, ನಂಬಿಕೆಗಳು-ಇವೇ ಮೊದಲಾದ ಸಂಗತಿಗಳ ಮೇಲೆ ಬೆಳಕು ಚೆಲ್ಲಿದ್ದಾನೆ. ಕನ್ನಡದ ಈ ಸಂಗ್ರಹಾನುವಾದದ ಭಾಷೆ ಶೈಲಿ ಸಹಜವಾಗಿ ಮೂಡಿ ಬಂದಿದೆ. ಎಲ್ಲೂ ತಡೆಯಿಲ್ಲದಂತೆ ಈ ಪುಸ್ತಕ ಖುಷಿಯಿಂದ ಓದಿಸಿಕೊಳ್ಳುತ್ತದೆ. ಅನ್ಯ ಭಾಷೆಯ ಇಂತಹ ವಿಶಿಷ್ಟ ಕೃತಿಯೊಂದನ್ನು ಕನ್ನಡಕ್ಕೆ ಒದಗಿಸಿಕೊಟ್ಟ ಲೇಖಕರು ಮತ್ತು ಪ್ರಕಾಶಕರು ಅಭಿನಂದನಾರ್ಹರು.

ವಂಶಿ ಅವರು ತೆಲುಗಿನಿಂದ ಅನುವಾದಿಸಿರುವ ಶಮಂತ ಅವರ 'ಸುಹಾಸಿನಿ' ಎಂಬ ಕಾದಂಬರಿ ಪ್ರೇಮದ ವೈಯಕ್ತಿಕ ಮತ್ತು ಸಾಮಾಜಿಕ ಮುಖಗಳನ್ನು ಶೋಧಿಸುವ

ಪ್ರಯತ್ನ ಮಾಡುತ್ತದೆ. ಈ ಕಾದಂಬರಿಯ ಮುಖ್ಯ ಪಾತ್ರವಾದ ಸುಹಾಸಿನಿ ಪ್ರೇಮದ ಸ್ವಚ್ಛಂದತೆಯನ್ನು ಬಯಸುವವಳು. "ನೀತಿಗೂ ಪ್ರೇಮಕ್ಕೂ ಏನೇನೂ ಸಂಬಂಧವಿಲ್ಲ, ನೀತಿ ಎಂಬುದು ಸಮಾಜವೇರ್ಪಡಿಸಿಕೊಂಡಿರುವ ನಿಯಮ. ಪ್ರತಿ ನಿಯಮವೂ ಅಲ್ಪವೊ ಸ್ವಲ್ಪವೊ ಒಂದು ಬಂಧ" ಎಂಬ ಧೋರಣೆಯುಳ್ಳವಳು. ಇದಕ್ಕೆ ವಿರುದ್ಧವಾದ ಧೋರಣೆಯುಳ್ಳವನು ದಿವಾಕರ. ಪ್ರೇಮ ಪವಿತ್ರವಾದುದು. ಒಂದು ಸಾಮಾಜಿಕ ಚೌಕಟ್ಟಿನಲ್ಲಿ ಪ್ರೇಮ ಅರ್ಥಪೂರ್ಣವಾಗಬಲ್ಲದು ಎಂದು ನಂಬಿದವನು ಮಾತ್ರವಲ್ಲ ಅದರಂತೆ ನಡೆಯಲು ಪ್ರಯತ್ನ ಪಟ್ಟನು. ಸುಹಾಸಿನಿ ಮದುವೆಯನ್ನು ಒಂದು ಬಂಧನವೆಂದು ತಿಳಿಸಿದರೆ ಅವಳನ್ನು ಮನಃಪೂರ್ವಕವಾಗಿ ಪ್ರೀತಿಸುವ ದಿವಾಕರ ಮದುವೆಯನ್ನುವುದು ಬಂಧನವಲ್ಲ ಅದೊಂದು ಪ್ರೀತಿಯ ಚೌಕಟ್ಟು ಎಂದು ತಿಳಿದವನು. ಹೀಗೆ ಈ ಎರಡು ವಿರುದ್ಧ ಧೋರಣೆಗಳ ನಡುವಿನಲ್ಲಿ ಪ್ರೀತಿಯ ಅರ್ಥ ಶೋಧನೆಗೆಂದು ಹೊರಡುವ ಕಾದಂಬರಿಯ ಮೊದಲ ಘಟ್ಟಗಳು ಓದುಗರ ಆಸಕ್ತಿಯನ್ನು ಕೆರಳಿಸಿದರೂ, ಅನಂತರದ ಪುಟಗಳು ವಿಚಿತ್ರ ಘಟನೆಗಳಿಂದ ಹಾಗೂ ಮಾಮೂಲಿ ಪ್ರೇಮ ಪ್ರಕರಣದಿಂದ ತುಂಬಿ ಓದುಗರ ಆಸಕ್ತಿಯನ್ನು ಕಳೆದುಕೊಳ್ಳುತ್ತವೆ. ಅಂತೆಯೇ ಸುಹಾಸಿನಿಯ ಧೋರಣೆ ಹುಸಿ ಹುಸಿಯಾದುದು ಎಂದು ಓದುಗರಿಗೆ ಬಲುಬೇಗ ಮನದಟ್ಟಾಗುತ್ತದೆ.

"ಭಯ ! ಭಯ ! ಭಯ ! ಬದುಕು ಪೂರ್ತಿ ಭಯ. ಇದು ಕಂಡರೆ ಭಯ ! ಅದು ನೋಡಿದರೆ ಭಯ ! ಬದುಕಿರಲೂ ಭಯ ! ಸಾಯಲೂ ಭಯ !" ಎಂದು ತನ್ನನ್ನು ಪ್ರೀತಿಸಿದ ದಿವಾಕರನನ್ನು ಛೇಡಿಸಿ ಅವನ ಪ್ರೀತಿಯನ್ನು ನಿರಾಕರಿಸುತ್ತಾಳೆ. ಆದರೆ ಯೌವನ, ಹಣದ ಮದದಿಂದ ವೈಭವೋಪೇತವಾದ ಜೀವನವನ್ನು ನಡೆಸುತ್ತಾ ತಳುಕು ಬಳುಕಿನ ಆಧುನಿಕ ಯುವತಿಯರನ್ನು ಆಕರ್ಷಿಸುತ್ತಿದ್ದ 'ಫ್ಲರ್ಟ್' ದಿಲೀಪನನ್ನು ಒಲಿಯುತ್ತಾಳೆ. ತನ್ನ ಪ್ರೇಮ ಸಿದ್ಧಾಂತವನ್ನು ನಂಬಿ ಬದುಕಿನಲ್ಲಿ ಹೆಜ್ಜೆಯಿಟ್ಟಾಗ ಆ ಸಿದ್ಧಾಂತ ಏರುಪೇರಾಗುತ್ತದೆ. ತಾನು ದಿವಾಕರನ ಸ್ನೇಹ ಪ್ರೀತಿಯನ್ನು ನಿರಾಕರಿಸಿದಂತೆ ದಿಲೀಪ ಸುಹಾಸಿನಿಯ ಪ್ರೀತಿಯನ್ನು ಧಿಕ್ಕರಿಸಿದಾಗ ದುಃಖಿಸುವುದು ಬಹಳ ವಿಚಿತ್ರವೆನಿಸುತ್ತದೆ. ಏಕೆಂದರೆ ಅವಳು ಹಿಂದೆ ತಳೆದಿದ್ದ ಬದುಕಿನ ಬಗೆಗಿನ ಧೋರಣೆಗೆ ಅವಳ ಈ ವರ್ತನೆ ಸಮರ್ಥನೆಯಾಗುವುದಿಲ್ಲ. ಮುಂದಿನ ಘಟನೆಗಳು ಸಿನಿಮೀಯಾ ಘಟನೆಗಳಂತೆ ಜರುಗಿ ಕಥೆ ದಿಕ್ಕು ತಪ್ಪಿಸುತ್ತದೆ. ದಿಲೀಪ ಸುಹಾಸಿಗೆ ವಿಷವುಣಿಸುವುದು ; ಸುಹಾಸಿನಿ-ದಿಲೀಪರ ನಡುವಿನ ಗುಂಡಿನ ಹೊಡೆದಾಟ; ದಿಲೀಪನ ಆಕಸ್ಮಿಕ ಸಾವು; ಶೀಲ ಕಳೆದುಕೊಂಡ ಸುಹಾಸಿನಿ ದಿವಾಕರನನ್ನು ಮದುವೆಯಾಗಲು ನಿರಾಕರಿಸಿ ಆರ್ಮಿನರ್ಸ್ ಶಿಕ್ಷಣ ಪಡೆದು ದೇಶಸೇವೆಗಾಗಿ ತನ್ನ ಬಾಳನ್ನು ಮೀಸಲಾಗಿಡಲು ನಿರ್ಧರಿಸುವುದು-ಇಂತಹ ಹಲವು ಹತ್ತು ವಿಚಿತ್ರ ಘಟನೆಗಳನ್ನು ತುರುಕಿ ಲೇಖಕಿ ಈ ಕೃತಿಯನ್ನು ಮಾಮೂಲು ಪ್ರೇಮ ಕಾದಂಬರಿಯಾಗಿ ಮಾಡಿದ್ದಾರೆ.

ವಾಸಿರೆಡ್ಡಿ ಸೀತಾದೇವಿ ಅವರ 'ಪ್ರತೀಕಾರ' ಎಂಬ ಕಾದಂಬರಿಯನ್ನು ತೆಲುಗಿನಿಂದ ಮಿಸ್. ಸಂಪತ್ ಅವರು ಕನ್ನಡಿಸಿದ್ದಾರೆ. ದ್ವೇಷ-ಅಸೂಯೆಯಿಂದ ವ್ಯಕ್ತಿಗಳ ವ್ಯಕ್ತಿತ್ವ ಯಾವ ರೀತಿ ಮೊಟಕುಗೊಳ್ಳುತ್ತದೆ ಎಂಬುದನ್ನು ಈ ಕೃತಿ ಹೇಳಲು ಪ್ರಯತ್ನ ಪಟ್ಟಿದೆ. ತಾನು ಪ್ರೇಮಿಸಿದ ಹೆಣ್ಣು ರಾಧೆ ಕಾರಣಾಂತರದಿಂದ ತನ್ನ ಕೈಗೆ ದಕ್ಕದೆ ಅವಳು ಬೇರೊಬ್ಬನನ್ನು ಮದುವೆಯಾದ ಕಾರಣಕ್ಕಾಗಿ ಜಗನ್ನಾಥ ಅವಳನ್ನು ಮತ್ತು ಅವಳ ಗಂಡನನ್ನು ದ್ವೇಷಿಸಲು ತೊಡಗುತ್ತಾನೆ. ಯಾವುದೋ ಆಕಸ್ಮಿಕದಲ್ಲಿ ಕೊಲೆಗಡುಕರ ಕೈಗೆ ಸಿಕ್ಕ ರಾಧೆಯ ಗಂಡ ಸಾಯುವ ಸ್ಥಿತಿಯಲ್ಲಿದ್ದಾಗ ಎದುರಿನಲ್ಲೇ ಇದ್ದ ಜಗನ್ನಾಥ ಅವನನ್ನು ರಕ್ಷಿಸದೆ ಅವನ ಸಾವಿಗೆ ಮೂಕ ಸಾಕ್ಷಿಯಾಗಿ ನಿಲ್ಲುತ್ತಾನೆ. ಹೀಗೆ ಜಗನ್ನಾಥ-ರಾಧೆಯ ನಡುವಿನ ಸೇಡಿನ ಕಿಡಿ ಬೆಳೆಯುತ್ತಾ ಹೋಗುತ್ತದೆ. ಜಗನ್ನಾಥನ ಮಗ ರವಿ ಮತ್ತು ರಾಧೆಯ ಮಗಳು ಇಂದಿರಾ ಪರಸ್ಪರ ಪ್ರೇಮಿಸುತ್ತಾರೆ. ನಿರಪರಾಧಿ ರವಿಯ ಮೇಲೆ ಯಾವುದೋ ಕೊಲೆಯ ಅಪವಾದ ಬಂದಾಗ ಲಾಯರ್ ಇಂದಿರ ಅವನನ್ನು ಉಳಿಸುತ್ತಾಳೆ. ಕಡೆಗೆ ಸೇಡಿನ ಆವರಣವನ್ನು ಕಳಚಿ ಹೊರಬಂದ ರಾಧೆ ಕೋರ್ಟಿನಲ್ಲಿ ರವಿಯ ಪರವಾಗಿ ಸಾಕ್ಷಿ ನುಡಿಯುತ್ತಾಳೆ. ರವಿ ಕೊಲೆಯ ಅಪವಾದದಿಂದ ಮುಕ್ತನಾಗುತ್ತಾನೆ. ರಾಧೆ ಮಗಳ ಮಾಂಗಲ್ಯ ಭಾಗ್ಯ ಉಳಿಸುತ್ತಾಳೆ. ದ್ವೇಷ-ಅಸೂಯೆ-ಸೇಡು-ಇವುಗಳಿಂದಾಗಿ ಮಾನವೀಯತೆಯನ್ನು ಕಳೆದುಕೊಳ್ಳುವ ವ್ಯಕ್ತಿಗಳ ಚಿತ್ರಣವನ್ನು ಚಿತ್ರಿಸುವ ಉದ್ದೇಶವನ್ನು ಇಟ್ಟುಕೊಂಡಿರುವ ಈ ಕೃತಿಯಲ್ಲಿ ಬರುವ ಪಾತ್ರಗಳು ಸಹಜತೆಯನ್ನು ಕಾಯ್ದುಕೊಂಡಿಲ್ಲ. ಆಂಗ್ಲ ಪದಗಳ ಬಳಕೆ ಮತ್ತು ಅಚ್ಚಿನ ತಪ್ಪುಗಳಿಂದ ಕೂಡಿರುವ ಈ ಕೃತಿಯ ಓದು ಕಿರಿಕಿರಿ ಉಂಟುಮಾಡುತ್ತದೆ.

ಲಲಿತಾಶಾಸ್ತ್ರಿ ಅವರು ತೆಲುಗಿನಿಂದ ಅನುವಾದಿಸಿರುವ ಮೋಪಿ ದೇವಿದುರ್ಗಾಪ್ರಸಾದ್ ಅವರ 'ಡಾಕ್ಟರ್' ವೈದ್ಯಕೀಯ ವೃತ್ತಿಯಲ್ಲಿ ನಡೆಯುತ್ತಿರುವ ಅನ್ಯಾಯ, ಅಕ್ರಮಗಳನ್ನು ವಿವರಿಸುವ ಕೃತಿ. ವೈದ್ಯಕೀಯ ಶಿಕ್ಷಣಕ್ಕೆ ಸೇರಬೇಕೆಂದಿರುವ ತಮ್ಮನಿಗೆ ಅಣ್ಣನು ಮಾಡುವ ಒಂದು ವಾರದ ಉಪದೇಶ ಈ ಕತೆಯ ವಸ್ತು. ಸಮಾಜ ಸೇವೆಯ ಹೆಸರಿನಲ್ಲಿ ಬಡವರ ಸುಲಿಗೆ ಮಾಡುತ್ತಾ, ಬಡವರ ಪಾಲಿಗೆ ಪ್ರತ್ಯಕ್ಷ ಯಮನಂತಿರುವ ವೈದ್ಯರ ಜೀವನ ವೈಖರಿಯ ಚಿತ್ರಣ ಇಲ್ಲಿದೆ. ತಮ್ಮ ವೃತ್ತಿ ಗೌರವವನ್ನು ಮಣ್ಣುಪಾಲು ಮಾಡಿ, ತಮ್ಮ ಮನಬಂದಂತೆ ಸ್ವೇಚ್ಛೆಯಿಂದ ವರ್ತಿಸಿ, ಮೋಜಿನ ಜೀವನ ನಡೆಸುತ್ತಾ ಬಡ ರೋಗಿಗಳನ್ನು ನಿತ್ಯವೂ ಸಜೀವವಾಗಿ ಕೊಲ್ಲುತ್ತಿರುವ ವೈದ್ಯರು ಶ್ರೀಮಂತರಾಗಿ ಮೆರೆಯುತ್ತಿದ್ದರೆ, ಇವರ ನಡುವೆ ಸತ್ಯ ಹರಿಶ್ಚಂದ್ರನಂತೆ ಬದುಕಲು ಬಯಸಿದ ಒಬ್ಬನೇ ವೈದ್ಯ ಕೆಳದರ್ಜೆಯ ಮಧ್ಯಮ ವರ್ಗದ ಜೀವನ ನಡೆಸುವ ಸ್ಥಿತಿಗೆ ಬರುತ್ತಾನೆ. ಹೀಗೆ ಉಪದೇಶಾತ್ಮಕವಾಗಿರುವ ಈ ಕೃತಿ ಸರಳವಾಗಿದ್ದು ಅಡೆತಡೆಯಿಲ್ಲದೆ ಓದಿಸಿಕೊಂಡು ಹೋಗುತ್ತದೆ.

ಶಿವಾಲ ಜಗನ್ನಾಥರಾಯರ 'ಭಾನು' ಎಂಬ ತೆಲುಗು ಕಾದಂಬರಿಯನ್ನು ವಂಶಿಯವರು ಕನ್ನಡಿಸಿದ್ದಾರೆ. ಯೌವ್ವನ ಆವರಿಸಿದಾಗ ಯುವಕ ಯುವತಿಯರು ಎಂತಹ

ಮನಃ ಸ್ಥಿತಿಯಲ್ಲಿರುತ್ತಾರೆ ಎಂಬುದನ್ನು ಈ ಕಾದಂಬರಿ ವಿವರಿಸುತ್ತದೆ. ಕಾದಂಬರಿಯ ಹೆಸರೇ ಸೂಚಿಸಿರುವಂತೆ ಈ ಕೃತಿಯ ನಾಯಕಿ ಭಾನು. ಭಾನು ಸುಂದರಿ ಆದರೆ ಮುಗ್ಧೆ. ಅವಳನ್ನು ವಶಪಡಿಸಿಕೊಳ್ಳಲು ಹೆಣಗಾಡುವವರು ಥೇರ್ಮನ್ ಫಾಲಾಕ್ಷಯ್ಯನ ಮಗ ರಾಜು, ತನ್ನ ಶಕ್ತಿ ಸಾಹಸಗಳಿಗಾಗಿ ಪ್ರಸಿದ್ಧನಾದ ವಿಶ್ವ. ತಾಯಿಯನ್ನು ಕಳೆದುಕೊಂಡು ತಬ್ಬಲಿಯಾದ ಭಾನು ತಂದೆಯ ನಿರ್ಲಕ್ಷ್ಯ ಹಾಗೂ ಮಲತಾಯಿ ವರಲಕ್ಷ್ಮಿಯ ಕಪಿಮುಷ್ಠಿಯಲ್ಲಿ ಸಿಕ್ಕು ನರಳುತ್ತಾಳೆ. ತಾಯಿ-ತಂದೆಯರ ಪ್ರೀತಿಯಿಂದ ವಂಚಿತಳಾಗಿ ದುಷ್ಟ ಸಹವಾಸದ ಜನರ ನಡುವೆ ಬೆಳೆದ ಮುಗ್ಧೆ ಭಾನು ಸರಿಯಾವುದು ? ತಪ್ಪುಯಾವುದು ? ಎಂದು ವಿವೇಚಿಸುವ ಶಕ್ತಿಯನ್ನು ಕಳೆದುಕೊಳ್ಳುತ್ತಾಳೆ. ವಂಚಕರು, ಸ್ವಾರ್ಥಿಗಳು ಇವಳನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಾರೆ. ಭಾನು-ರಾಜ ಇವರ ಸಾವು ಹೃದಯ ವಿದ್ರಾವಕವಾಗಿದೆ. ರಾಜ ಮತ್ತು ವಿಶ್ವರ ಈರ್ಷ್ಯೆಯಿಂದಾಗಿ ಭಾನು ಬಲಿಪಶುವಾಗುತ್ತಾಳೆ. ಸೇಡಿನ ಪ್ರತಿರೂಪವಾದ ಜನ ಸಾಮಾನ್ಯರ ಬದುಕಿನಲ್ಲಿ ನಡೆಯುವ ಸಾಮಾನ್ಯ ದುರ್ಘಟನೆಗಳ ಸುತ್ತ ಹೆಣೆಯಲಾಗಿರುವ ಈ ಕಾದಂಬರಿಗೆ ಪುರಸ್ಕಾರ ದೊರಕಿರುವುದು ಮಾತ್ರ ಮಹತ್ವದ ಸಂಗತಿಯಾಗಿದೆ! ವಂಶಿಯವರ ಅನುವಾದ ಸಹ್ಯವಾಗಿದೆ. ಗ್ರಾಮೀಣ ಭಾಷೆಯ ಬಳಕೆ, ಪಾತ್ರಗಳು ನಡೆದಾಡುವ ಪರಿಸರಕ್ಕೆ ತಕ್ಕಂತಿದೆ.

ಕುಂದಾನಿ ಸತ್ಯನ್ ಅವರು ಶರತ್ ಚಂದ್ರರ ಬಂಗಾಳಿ ಕಾದಂಬರಿ 'ಬಿಂದೂರ್ ಛೆಲ್ಲಿ'ಯನ್ನು 'ಅಮೂಲ್ಯ ಬಂಧನ' ಎಂಬ ಹೆಸರಿನಿಂದ ಕನ್ನಡಿಸಿದ್ದಾರೆ. ಇದೇ ಕೃತಿಯನ್ನು ಸುಮಾರು ನಲವತ್ತರ ದಶಕದಲ್ಲಿ ಬೇರೆ ಬೇರೆ ಅನುವಾದಕರು ಅನುವಾದ ಮಾಡಿದ್ದಾರೆ*. ಇದು ಮೂರನೆಯ ಅನುವಾದ. ಮಾತೃ ಹೃದಯದ ಅಮೃತಧಾರೆಯನ್ನು ಓರಗಿತ್ತಿಯ ಮಗ ಅಮೂಲ್ಯನ ಮೇಲೆ ಸುರಿಸಿದ ಹೆಣ್ಣು ಬಿಂದು. ಅವಳ ಅತಿ ಮುದ್ದಿನಿಂದ ಸ್ವಂತ ತಾಯಿಗೇ ಮಗನ ಮೇಲೆ ಅಧಿಕಾರವಿಲ್ಲದಂತಾಗುತ್ತದೆ. ಮಗು ಅಮೂಲ್ಯನ ಬೆಳವಣಿಗೆಯಲ್ಲಿ ಬಿಂದು ಅತಿಯಾದ ಕಾಳಜಿ ವಹಿಸುವುದರಿಂದ ಅಮೂಲ್ಯನ ಸ್ವಾತಂತ್ರ್ಯದ ರೆಕ್ಕೆ ಮುರಿದಂತಾಗುತ್ತದೆ. ಕ್ರಮೇಣ ಹಣದ ಮದ ಮತ್ತು ಹುಚ್ಚು ಹಠಮಾರಿತನದಿಂದ ಕಠಿಣಳಾಗಿ, ಅಮಾನವೀಯವಾಗಿ ವರ್ತಿಸುವ ಬಿಂದು ಪರಿಸ್ಥಿತಿಯ ಸುಳಿಗೆ ಸಿಕ್ಕಿ ಅಸಹಾಯಕಳಾಗಿ ಜರ್ಝರಿತಳಾಗುತ್ತಾಳೆ. ನಂತರ ತನ್ನ ತಪ್ಪಿನ ಅರಿವಾಗಿ ಪಶ್ಚಾತ್ತಾಪ ಪಟ್ಟು ಹಿರಿಯರ ಕ್ಷಮೆ ಕೇಳುತ್ತಾಳೆ. ತನ್ನ ಅವಿವೇಕದಿಂದ ದೂರವಾದ ಅಮೂಲ್ಯನನ್ನು ಮತ್ತೆ ಪಡೆದ ಬಿಂದುವಿಗೆ ಮನಃಶ್ಶಾಂತಿ ದೊರಕುತ್ತದೆ. ಭಾವತಿರೇಕದಿಂದ ತುಂಬಿ ತುಳುಕುವ ಇಲ್ಲಿನ ಪಾತ್ರ

---

1 *ಗುರುನಾಥಜೋಶಿ ಮತ್ತು ಎಂ. ಎ. ಕುಪ್ಪಮ್ಮ — ಬಿಂದು ವಾಸಿನಿಯ ಮಗ
2 ಎಸ್. ಎ. ಬುರ್ಲಿ — ಬಿಂದುವಿನ ಮಗ

ಗಳಲ್ಲಿ ಗಟ್ಟಿತನವಿಲ್ಲ. ಯಾದವ ಮುಖರ್ಜಿ, ಅನ್ನಪೂರ್ಣೆ ಈ ಪಾತ್ರಗಳು ತಮ್ಮ ಗಂಭೀರತೆಯಿಂದ ಗಮನಸೆಳೆಯುತ್ತವೆ. ಅನುವಾದದ ಭಾಷೆ, ನಿರೂಪಣಾ ಶೈಲಿ ಇನ್ನಷ್ಟು ಸಹಜವಾಗಿರಬೇಕಿತ್ತು.

ಇದುವರೆಗೆ ವೀಕ್ಷಿಸಿದ ಅನುವಾದಿತ ಕಾದಂಬರಿಗಳಲ್ಲಿ 3–4 ಕಾದಂಬರಿಗಳನ್ನು ಬಿಟ್ಟರೆ ಉಳಿದವುಗಳಲ್ಲಿ ಅಂತಹ ವಿಶೇಷವೇನೂ ಕಾಣಿಸುವುದಿಲ್ಲ. ಸಾಧಾರಣ ಮಟ್ಟದ ಇಂತಹ ಕಾದಂಬರಿಗಳನ್ನು ಬೇರೆ ಭಾಷೆಯಿಂದ ಅನುವಾದಿಸುವ ಅಗತ್ಯ ವೇನಿತ್ತು? ಎಂದು ಕಳೆದ ವರ್ಷಗಳಲ್ಲಿ ಕೇಳಿದ ಪ್ರಶ್ನೆಯನ್ನೇ ಈ ವರ್ಷವೂ ಕೇಳಬೇಕಾಗುತ್ತದೆ.

ಎನ್. ವಿ. ವಿಮಲ

## ವಿಮರ್ಶೆ
**(ಹಳಗನ್ನಡ ಸಾಹಿತ್ಯ ವಿಮರ್ಶೆ)**

**ಬಸವರಾಜ ಕಲ್ಗುಡಿ**

1981ನೇ ವರ್ಷದಲ್ಲಿ ಕೈಗೆ ಸಿಕ್ಕ ವಿಮರ್ಶಾಗ್ರಂಥಗಳು ಒಟ್ಟು ಇಪ್ಪತ್ತೇಳು, ಇವುಗಳನ್ನು ಒಂದು ಚೌಕಟ್ಟಿಗೆ ಅಳವಡಿಸುವ ದೃಷ್ಟಿಯಿಂದ ಎರಡು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಹಳಗನ್ನಡ ಸಾಹಿತ್ಯ ವಿಮರ್ಶೆಗೆ ಸಂಬಂಧ ಪಟ್ಟಂತೆ ಒಂದು ವಿಭಾಗ. ಸಾಹಿತ್ಯ ತತ್ವ ಹಾಗೂ ಆಧುನಿಕ ಕೃತಿ ವಿಮರ್ಶೆಗೆ ಸಂಬಂಧಪಟ್ಟಂತೆ ಇನ್ನೊಂದು ವಿಭಾಗ. ಎರಡೂ ವಿಭಾಗಗಳಲ್ಲೂ ಕೇವಲ ಪರಿಚಯವನ್ನು ಮಾಡಿಕೊಡುವ ಬರವಣಿಗೆಗಳೂ ವಿಮರ್ಶೆಯ ಹೆಸರಿನಲ್ಲಿ ಸೇರಿವೆ. ಇಂಥ ಪುಸ್ತಕಗಳಿಗೆ ಸಂಬಂಧ ಪಟ್ಟಂತೆಯೂ-ಪರಿಚಯದ ಸ್ವರೂಪವನ್ನು ಕುರಿತಾದಂಥ ವಿಮರ್ಶೆಯು ಆಯಾ ಪುಸ್ತಕಗಳ ವಿಮರ್ಶೆಗೆ ಸಂಬಂಧಪಟ್ಟಂಥ ವಿವರಗಳಲ್ಲಿ ಮಾಡಲಾಗಿದೆ. ಒಂದನೇ ವಿಭಾಗದ ಹಳಗನ್ನಡ ಸಾಹಿತ್ಯ ವಿಮರ್ಶೆಗೆ ಸಂಬಂಧ ಪಟ್ಟ ಹಾಗೆ ಸೇರಿದವುಗಳೆಂದು ವಿಂಗಡಿಸಲ್ಪಟ್ಟ ಕೆಲವು ಸಂಕಲನಗಳಲ್ಲಿ ಒಂದೋ ಎರಡೋ ಲೇಖನಗಳು ಹೊಸ ಗನ್ನಡ ಸಾಹಿತ್ಯಕ್ಕೆ ಸಂಬಂಧಪಟ್ಟವುಗಳಿದ್ದರೂ, ಅವು ಪ್ರಾತಿನಿಧಿಕವಾಗಿ ಹಳಗನ್ನಡ ಸಾಹಿತ್ಯ ಕೃತಿಗಳ ಚರ್ಚೆಯನ್ನು ಮಾಡುವವಾದ್ದರಿಂದ ಅವುಗಳನ್ನು ಮೊದಲ ವಿಭಾಗಕ್ಕೆ ಸೇರಿಸಲಾಗಿದೆ. ಇಂಥ ಲೇಖನಗಳ ಬಗೆಗಿನ ಚರ್ಚೆಯನ್ನೂ ಲೇಖಕನ ವಿಮರ್ಶಾ ವಿಧಾನ, ದೃಷ್ಟಿಕೋನಗಳ ಹಿನ್ನೆಲೆಯಲ್ಲಿ ಗಮನಿಸಲಾಗಿದೆ.

### ಮೂರು ಸಮೀಕ್ಷೆಗಳು (ಟಿ. ವಿ. ವೆಂಕಟಾಚಲ ಶಾಸ್ತ್ರಿ)

ಮೂರು ವಿಭಿನ್ನ ವಿಷಯಗಳನ್ನು ಕುರಿತಂತೆ ಪರಿಚಯಾತ್ಮಕವಾದ ಮೂರು ಲೇಖನಗಳು ಈ ಸಂಕಲನದಲ್ಲಿವೆ. ಹಳಗನ್ನಡ ಭಾಷೆ, ಸಾಹಿತ್ಯ; ವಚನ ಸಾಹಿತ್ಯದ ಉಗಮ ಮತ್ತು ವಿಕಾಸ; ಹಾಗೂ ಕನ್ನಡ ವ್ಯಾಕರಣ ಸಾಹಿತ್ಯ ಇವು ಈ ಸಂಕಲನದ ಮೂರು ಲೇಖನಗಳಾಗಿವೆ. 'ಈ ಕ್ಷೇತ್ರಗಳಿಗೆ ಸಂಬಂಧಿಸಿದ ವಸ್ತು ವಿವರದ ಸಾಮಾನ್ಯ ಪರಿಚಯವನ್ನು, ಸ್ಥೂಲವಿಮರ್ಶೆಯನ್ನು ಒಂದು ಕಡೆ ಸಂಕ್ಷೇಪವಾಗಿಯಾದರೂ ಒದಗಿಸುವ ಪ್ರಯತ್ನ ಮಾಡಿದ್ದೇನೆ' ಎಂದು ಲೇಖಕರೇ ಮುನ್ನುಡಿಯಲ್ಲಿ ಹೇಳಿ ಕೊಳ್ಳುತ್ತಾರೆ. ಮೂರು ಲೇಖನಗಳೂ ಆಯಾ ವಿಷಯದ ಬಗ್ಗೆ ಈಗಾಗಲೇ ಹೇಳಲಾಗಿರುವ ಹಲವಾರು ಅಭಿಪ್ರಾಯ ಹಾಗೂ ವಿವರಣೆ ಅಥವಾ

ದಾಖಲೆಗಳನ್ನು ಒಂದು ಕಡೆಗೆ ಕ್ರೋಢೀಕರಿಸುವ ಕೆಲಸವನ್ನು ಮಾಡಿವೆ. ಈ ದೃಷ್ಟಿಯಿಂದ ಸಂಕಲನದ ಕೊನೆಯ ಲೇಖನವು ತನ್ನ ವಿಷಯ ಸ್ಪಷ್ಟತೆ ಮತ್ತು ಮಿತಿಯಿಂದ ಪರಿಚಯವನ್ನು ಸಮರ್ಪಕವಾಗಿಸಿದೆ. ಆದರೆ ಉಳಿದ ಎರಡು ಲೇಖನಗಳು ಅತ್ಯಂತ ಗೊಂದಲಮಯವೆನ್ನಿಸುತ್ತವೆ. ಇದಕ್ಕೆ ಹಲವಾರು ಕಾರಣಗಳನ್ನು ಎತ್ತಿ ತೋರಬಹುದು. ಮೊದಲನೆಯದು ಇವೆರಡೂ ಲೇಖನಗಳ ವಿಷಯ ವ್ಯಾಪ್ತಿಯು ವಿಶಾಲವಾಗಿರುವುದು. ಆದ್ದರಿಂದ ಇಂಥ ಕಡೆಗಳಲ್ಲಿ ಸಮೀಕ್ಷಕನು ವಸ್ತುವನ್ನು ನೋಡುವ ಒಂದು ದೃಷ್ಟಿಕೋನವನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಈ ಎರಡೂ ಲೇಖನಗಳಲ್ಲಿ ಅಂಥ ನೋಟವೊಂದು ರೂಪುಗೊಳ್ಳದೇ ಹೋಗಿದೆ. 'ವಚನ ಸಾಹಿತ್ಯದ ಉಗಮ ಮತ್ತು ವಿಕಾಸ' ಈ ಲೇಖನದ ತಲೆಬರಹವು ಲೇಖನಕ್ಕೆ ವಿಷಯದ ಚೌಕಟ್ಟೊಂದನ್ನು ರೂಪಿಸುವ ಹಾಗೆ ಕಂಡರೂ – ವಿಷಯದ ನಿರ್ವಹಣೆಯು ವಾದಕ್ಕೆ ಎಡೆಮಾಡಿಕೊಡುವಂಥದ್ದಾಗಿದೆ. ಉಗಮದ ಬಗ್ಗೆ ಹಲವಾರು ವಿದ್ವಾಂಸರ ಅಭಿಪ್ರಾಯಗಳನ್ನು ಲೇಖಕರು ಒಂದುಗೂಡಿಸಿದ್ದಾರೆ. ಇದು ಸರಿ. ಆದರೆ ವಿಕಾಸದ ನಿರೂಪಣೆಯಲ್ಲಿ ಲೇಖಕರು ವಚನ ಚಳುವಳಿಯ ಬೆಳವಣಿಗೆಗೆ ಕೆಲವು ಸರಳವಾದ ಲಕ್ಷಣಗಳನ್ನು ಅನ್ವಯಿಸಿ ಬಿಡುತ್ತಾರೆ. ಮತಪ್ರಸಾರಕ, ಸಾಮಾಜಿಕ, ಧಾರ್ಮಿಕವೆಂದು ಗುರುತಿಸುತ್ತಾರಾದರೂ ಇವುಗಳ ನಿರ್ವಚನವೇ ಸ್ಪಷ್ಟವಾಗುವುದಿಲ್ಲ. ಇಷ್ಟೇ ಅಲ್ಲದೇ ಕೇವಲ ವಚನವೆನ್ನುವ ರೂಪವನ್ನು (Form) ಕಾಲಾನುಕ್ರಮದಲ್ಲಿ ಯಾರ್ಯಾರು ರಚಿಸಿದ್ದಾರೆ ಎಂದು ಗುರುತಿಸುವುದರ ಔಚಿತ್ಯವಾದರೂ ಏನು? ಅಲ್ಲದೇ ವಚನದ (Form) ರೂಪವನ್ನೇ ವಿವರಿಸುವುದು ಹೇಗೆ? – ಈ ಎಲ್ಲ ಸಮಸ್ಯೆಗಳು ವಚನ ಚಳುವಳಿಯ ವಿಕಾಸವನ್ನು ರೂಪಿಸುವಾಗ ವಿಶ್ಲೇಷಿಸಿಕೊಳ್ಳಬೇಕಾದವುಗಳೇ ಆಗಿವೆ. ಇಂಥ ಸಮೀಕ್ಷೆಯು ಈ ಲೇಖನದಲ್ಲಿ ಆಗಿಲ್ಲ.

ಮೊದಲನೆಯ ಲೇಖನ 'ಹಳಗನ್ನಡ ಭಾಷೆ, ಸಾಹಿತ್ಯ'ದಲ್ಲಿ ಕನ್ನಡ ಸಾಹಿತ್ಯದ ಬೆಳವಣಿಗೆಯ ಸ್ವರೂಪವನ್ನು ರಾಜಮನೆತನಗಳ ವಿಭಾಗದ ಅಡಿಯಲ್ಲಿ ಚರ್ಚಿಸುವ ಕ್ರಮವೇ ವಿವಾದಾಸ್ಪದವಾಗಿದೆ. ಇವೆರಡರ ಸಂಬಂಧವು ಅತ್ಯಂತ ಯಾದೃಚ್ಛಿಕವಾಗಿದ್ದು ಸಾಹಿತ್ಯದ ಸ್ವರೂಪದ ವಿಶ್ಲೇಷಣೆಗೆ ಯಾವ ರೀತಿಯ ಮೌಲಿಕವಾದ ಸಹಾಯ ಈ ವಿಭಜನೆಯಿಂದ ಸಾಧ್ಯವಿಲ್ಲದಿರುವಾಗ ಈ ಸಂಬಂಧದ ಔಚಿತ್ಯವನ್ನೇ ಪ್ರಶ್ನಿಸಬೇಕಾಗುತ್ತದೆ.

ಪ್ರಾಚೀನ ಕನ್ನಡ ಸಾಹಿತ್ಯ ; ಕೆಲವು ನೋಟಗಳು : ಟಿ. ವಿ. ವೆಂಕಟಾಚಲಶಾಸ್ತ್ರೀ

ಹಳಗನ್ನಡ ಸಾಹಿತ್ಯದ ಪರಿವಲಯಕ್ಕೆ ಸೇರಿದ ಹದಿನಾರು ಲೇಖನಗಳ ಸಂಕಲನವಿದು. ಬಹುಪಾಲು ಲೇಖನಗಳು ಜೈನ ಸಾಹಿತ್ಯವನ್ನು ಕುರಿತಂಥವುಗಳಾಗಿರುವುದು ಇಲ್ಲಿ ಈ ಸಂಕಲನದ ವಿಶೇಷವಾಗಿದೆ. ಈ ಕುರಿತ ಲೇಖನಗಳಲ್ಲಿ ಕವಿ ಹಾಗೂ ಕೃತಿ ಪರಿಚಯವನ್ನು ಮಾಡುವ ಲೇಖನಗಳು ಹಲವಾರು

ಇವೆ. ಹೀಗಾಗಿ ಈ ಲೇಖನಗಳು ಈಗಾಗಲೇ ತಿಳಿದಿರುವ ವಿವರಗಳನ್ನೇ ಒಂದೆಡೆಗೆ ತರಲು ಮಾಡಿದ ಪ್ರಯತ್ನಗಳೆಂದು ಹೇಳಬಹುದು. 'ಕೆಲವು ವಚನಕಾರರು' ಅನ್ನುವ ಲೇಖನವು ಇದೇ ಪರಿಚಯದ ಧಾಟಿಯನ್ನು ಒಳಗೊಂಡಿದೆ.

ಈ ಸಂಕಲನದಲ್ಲಿ ಕುತೂಹಲ ಹುಟ್ಟಿಸುವ ಎರಡು ಲೇಖನಗಳು 'ಭಾರತೀಯ ಜೈನಸಾಹಿತ್ಯದ ತಿಳಿವಳಿಕೆಗೆ ಕನ್ನಡ ಸಾಹಿತ್ಯದ ನೆರವು' ಹಾಗೂ 'ಪ್ರಾಚೀನ ಕನ್ನಡ ಕವಿಗಳು ಮತ್ತು ನಾಟಕ'. ಮೊದಲನೆಯ ಲೇಖನವು ಉಪಾಧ್ಯೆ ಹಾಗೂ ಡಿ.ಎಲ್.ಎನ್ ಮೊದಲಾದ ವಿದ್ವಾಂಸರ ಶೋಧನೆಗಳನ್ನು ಒಳಗೊಂಡಿದೆ ಎಂದು ಲೇಖಕರು ಹೇಳುತ್ತಾರೆ. ಭಾರತೀಯ ಸಾಹಿತ್ಯವೆನ್ನುವ ಕಲ್ಪನೆಯನ್ನು ಸಂಸ್ಕೃತ ಭಾಷೆಯ ಸಾಹಿತ್ಯಕ್ಕೆ ಮಾತ್ರ ಅನ್ವಯಿಸಿ, ಇಲ್ಲಿ ನೋಡಲಾಗಿದೆ. ಹಲವು ವಿದ್ವಾಂಸರ ಚರ್ಚೆ, ಅಭಿಪ್ರಾಯಗಳನ್ನು ಒಂದೆಡೆಗೆ ತಂದು ಕ್ರಮವಾಗಿ ಇಲ್ಲಿ ವಿವರಿಸಿರುವುದು ಲೇಖನಕ್ಕೊಂದು ಸಮಗ್ರತೆಯನ್ನು ಕೊಟ್ಟಿದೆ. ಎರಡನೆಯ ಲೇಖನವು ಕನ್ನಡದಲ್ಲಿ ನಾಟಕ ಪ್ರಕಾರವು ಏಕೆ ಇರಲಿಲ್ಲ? ನಾಟಕದ ಕಲ್ಪನೆಯು ಕನ್ನಡದ ಕವಿಗಳಿಗೆ ಇತ್ತೆ? ಎನ್ನುವ ಕೆಲವು ಪ್ರಶ್ನೆಗಳನ್ನು ಬಿಡಿಸುವ ಪ್ರಯತ್ನ ಮಾಡಿದೆ. ಮೇಲ್ನೋಟಕ್ಕೆ ಗಂಭೀರ ಶೋಧನೆಯತ್ತ ಮುಖ ಮಾಡಿವೆ ಎನ್ನಿಸಬಹುದಾದ ಎರಡು ಲೇಖನಗಳು 'ಹಳಗನ್ನಡ ಸಾಹಿತ್ಯದಲ್ಲಿ ಜೀವನ ಮೌಲ್ಯಗಳು' ಹಾಗೂ 'ಜೈನಧರ್ಮ ಕನ್ನಡ ಸಾಹಿತ್ಯ'–ಒಳಹೊಕ್ಕು ನೋಡಿದರೆ ಅತ್ಯಂತ ನಿರಾಶೆಗೊಳಿಸುತ್ತವೆ. ಮೊದಲನೇ ಲೇಖನವಂತೂ ಅತ್ಯಂತ ಸಂಪ್ರದಾಯಸ್ಥ, ಹಾಗೂ ದಡ್ಡ ಆಲೋಚನೆಯಾದ 'ನಮ್ಮ ಸಾಹಿತ್ಯಜೀವನ ಮೌಲ್ಯಗಳು ಎಂದರೆ ಚತುರ್ವಿಧ ಪುರುಷಾರ್ಥಗಳು ಎಂದು ಅರ್ಥ. ಆಧುನಿಕ ತತ್ವಜ್ಞರು ಭೌತ, ಆರ್ಥಿಕ, ಸಾಮಾಜಿಕ, ಆಧ್ಯಾತ್ಮ ಮುಂತಾದ ಬೇಧಗಳಲ್ಲಿ ಮೌಲ್ಯಗಳನ್ನು ವಿಶ್ಲೇಷಿಸುವುದುಂಟು...' ಎಂದು ಮುಂತಾಗಿ ಪ್ರಾರಂಭಿಸುತ್ತಾರೆ. ಲೇಖನ ಮುಂದುವರಿದಂತೆ ನೈತಿಕ, ಧಾರ್ಮಿಕ, ಕ್ಷಾತ್ರ – ಹೀಗೆ ಹಲವಾರು ಮೌಲ್ಯಗಳು ಬಂದು ಸೇರುತ್ತವೆ. ರಾಜಶಾಹೀ ವ್ಯವಸ್ಥೆಯು ಬಲಗೊಳ್ಳಲು ಅನಿವಾರ್ಯವಾಗಿ ಬೆಳೆಸಲಾದ ಸೇವಕ ವೃತ್ತಿಗಳ ಕೆಲಸವನ್ನು ಲೇಖಕರು ಮೌಲ್ಯವೆಂಬ ಮಾತಿನಿಂದ ಅರ್ಥೈಸುತ್ತಾರೆ. ಹೀಗಾಗಿ ಮಾಸ್ತಿಯ ಆಚರಣೆಯೂ ಇವರಲ್ಲಿ ಮೌಲ್ಯವಾಗಿಯೇ ವಿವರಿಸಲ್ಪಡುತ್ತದೆ.

ಸಂಕಲನದಲ್ಲಿ ಸರಳ ಹಾಗೂ ಪ್ರಾಥಮಿಕವಾದ 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಕುಂಬಾರನ ಚಕ್ರ' 'ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ಹಕ್ಕಿಗಳ ಸಂಸಾರ ಚಿತ್ರ' ಎಂಬ ಎರಡು ಲೇಖನಗಳೂ ಇವೆ.

ಸಾಹಿತ್ಯ ತರಂಗ : ಕೆ. ವೆಂಕಟರಾಯಚಾರ್ಯ

ಇಪ್ಪತ್ತೆಂಟು ಲೇಖನಗಳನ್ನೊಳಗೊಂಡ ಸಂಕಲನವಿದು. ಬಹುಪಾಲು ಲೇಖನಗಳು ಈಗಾಗಲೇ ಪ್ರಸಿದ್ಧವಾಗಿ, ಪರಿಚಿತವಾಗಿರುವ ಹಳಗನ್ನಡ ಕವಿಗಳ ಪರಿಚಯವೋ ಅಥವಾ ಪದವಿಶ್ಲೇಷಣೆಯ ಚರ್ಚೆಯೋ ಇವುಗಳನ್ನು ಕುರಿತೇ ಇವೆ. ಕೆಲವು ಲೇಖನಗಳು ಹೊಸ ಕೃತಿಗಳು ಪರಿಚಯ ಮಾಡಿಕೊಡುತ್ತವೆ. 'ಶಂಕರ ಸಂಹಿತೆ' 'ಗಯಾಸುರ

ಚರಿತೆ ಮುಂತಾದುವುಗಳು ಈ ಸಾಲಿಗೆ ಸೇರುವಂಥವುಗಳು. ಹಲವು ಶಬ್ದಗಳ ನಿಷ್ಪತ್ತಿ ಹಾಗೂ ಅರ್ಥವಿನ್ಯಾಸವನ್ನು ಕುರಿತಂತೆ ವೆಂಕಟಾಚಾರ್ಯರು ಹಿಂದಿನ ವಿದ್ವಾಂಸರ ವಿವೇಚನೆಗಿಂತ ಭಿನ್ನವಾದ ಆಲೋಚನೆಯೊಂದನ್ನು ಮಾಡುತ್ತಾರಾದರೂ ಈ ವಿವರಣೆಗಳು ಹೆಚ್ಚು ಖಚಿತವಾಗಿ ಒಪ್ಪಿಗೆಯಾಗುವಂತೆ ರೂಪಿಸಲಾಗಿಲ್ಲ. 'ಭಗವತಿಯೆಱು' 'ಆರ್'ಗೆ ಮರುಮಾತು' ಮುಂತಾದವುಗಳನ್ನು ಉದಾಹರಿಸ ಬಹುದು. ಭಗವತಿಯೇರುವಿನ ಅರ್ಥವನ್ನು ಲೇಖಕರು ವಿವರಿಸಿದ ಹಾಗೆ ಪಂಪನ ಪದ್ಯಕ್ಕೆ ಅನ್ವಯಿಸಹೊರಟರೆ-ಅದು ಅನ್ವಯವಾಗುವುದೇ ಇಲ್ಲ. 'ಭಾನುಮತಿ ಕರ್ಣರು ನೆತ್ತವಾಡಿದರೆ'–ಎನ್ನುವ ಲೇಖನವು ಲೇಖಕರ ಶುಷ್ಕ ತರ್ಕಕ್ಕೆ ಹಿಡಿದ ಕನ್ನಡಿಯೇ ಹೊರತು ಪದ್ಯದ ಭಾವವ್ಯಂಜನವನ್ನು ಗ್ರಹಿಸುವ ಸಾಧ್ಯಾಸಾಧ್ಯತೆಗಳನ್ನು ಇದು ರೂಪುಗೊಳಿಸುವುದಿಲ್ಲ. ಅಷ್ಟೇ ಅಲ್ಲ ಹಾದಿಯನ್ನೂ ತಪ್ಪಿಸಿಬಿಡುತ್ತದೆ. ಅನಾವಶ್ಯಕವಾಗಿ ಉಲ್ಲೇಖಿಸುವುದು, ಪ್ರಾಥಮಿಕ ವಿಚಾರಗಳನ್ನು ಗಂಭೀರವೆನ್ನುವಂತೆ ಭಾವಿಸಿ ಹೇಳುವುದು ಇಲ್ಲಿನ ಕೆಲವು ಲೇಖನಗಳಲ್ಲಿ ಕಂಡುಬರುತ್ತದೆ.

ಉಪಚಯ : ಸಿ.ಪಿ.ಕೆ.

ಸಿ.ಪಿ.ಕೆ.ಯವರು ಬರೆದ ಹದಿನೈದು ಪ್ರಬಂಧಗಳು ಈ ಸಂಕಲನದಲ್ಲಿವೆ. ಹಳಗನ್ನಡ ಸಾಹಿತ್ಯ, ಹೊಸಗನ್ನಡ ಸಾಹಿತ್ಯ. ಕಾವ್ಯಮೀಮಾಂಸೆ-ಮುಂತಾಗಿ ಹಲವು ವಲಯಗಳಲ್ಲಿ ಲೇಖಕರು ಕೈಯಾಡಿಸುವುದು ಕಂಡು ಬರುತ್ತದೆ. ಮೂಲಭೂತವಾಗಿ ಈ ಎಲ್ಲ ಲೇಖನಗಳ ಧಾಟಿಯು ಪರಿಚಯಾತ್ಮಕವಾಗಿದೆ. ಆದರೆ ಈ ಪರಿಚಯಾತ್ಮಕ ಧಾಟಿಯಾದರೂ ಎಂಥದ್ದು ? ಒಂದು ಸಾಹಿತ್ಯ ಕೃತಿಯ ಅಥವಾ ಸಾಹಿತ್ಯಮಾರ್ಗದ ಅಥವಾ ಒಬ್ಬ ಕೃತಿಕಾರನ ವಿಶೇಷಗಳನ್ನು, ಅಂತಃಸತ್ವಗಳನ್ನು ಗ್ರಹಿಸುವ, ಹೊಳಯಿ ಸುವ ನೆಲೆಯು ಪರಿಚಯಾತ್ಮಕ ಧಾಟಿಯ ಬರವಣಿಗೆಯ ಲಕ್ಷಣವಾಗಿರಬೇಕಾಗುತ್ತದೆ. ಇಲ್ಲಿಯ ಲೇಖನಗಳ ಧಾಟಿಯು ಇದಾಗಿಲ್ಲ. ಇಲ್ಲಿಯ ಧಾಟಿಯು ಬಹು ಲಘು ವಾದದ್ದು. ಕವಿತೆಯ ಭಾವವನ್ನು ಗದ್ಯದಲ್ಲಿ ವಿವರಿಸುವುದು, ಅಲಂಕಾರ, ರೂಪಕಗಳ ಬಗ್ಗೆ ಮೆಚ್ಚುಗೆ ತೋರುವುದು-ಹೀಗೆ ಸುಲಭ ಮಾರ್ಗದ ಬರವಣಿಗೆ ಇಲ್ಲಿ ಪ್ರಧಾನ ಅಂಶವಾಗಿದೆ. ವಚನಕಾರರಲ್ಲಿ ನವೀನ ಲಕ್ಷಣೀಕರಣ, ಕನ್ನಡ ಕಾವ್ಯದಲ್ಲಿ ಬುದ್ಧ, ಪ್ರಹ್ಲಾದ ಪ್ರಬಂಧಗಳ ಕಾವ್ಯಗುಣ, ವಚನೋದ್ಯಾನದಲ್ಲಿ ಲೋಕಾನುಭವ, ವಚನ ನವನೀತ, ದೇಜಗೌ ಬರವಣಿಗೆ-ಹೀಗೆ ಅನೇಕ ಲೇಖನಗಳನ್ನು ಉದಾಹರಣೆ ಯನ್ನಾಗಿ ಕೊಡಬಹುದು. ಕೆಲವು ಲೇಖನಗಳಲ್ಲಿ ಸಾಂಸ್ಕೃತಿಕವಾಗಿ ಮಹತ್ವದ ಕೊಡುಗೆ ಎಂದು ಗ್ರಹಿಸಬೇಕಾದ ನೆಲೆಗಳನ್ನು ಅತ್ಯಂತ ಸರಳವಾದ ಅರ್ಥದಲ್ಲಿ ಗ್ರಹಿಸಲಾಗುತ್ತದೆ. ಎರಡು ಲೇಖನಗಳ ಉದಾಹರಣೆಯನ್ನು ಇಲ್ಲಿ ಕೊಡಬಹುದು. 'ವಚನಕಾರರಲ್ಲಿ ನವೀನ ಲಕ್ಷಣೀಕರಣ' ಎನ್ನುವ ಲೇಖನದ ಉದ್ದೇಶವನ್ನು ಲೇಖಕರು ಹೀಗೆ ಹೇಳುತ್ತಾರೆ 'ಇಹಪರಗಳ ಸಮನ್ವಯ ವಚನಕಾರರ ವಿಚಾರವಾಹಿನಿಯಲ್ಲಿ ಎದ್ದು ಕಾಣುವಂತೆ ಹಳತು-ಹೊಸತರ ಸಮನ್ವಯವೂ ಸುಗೋಚರವಾಗುತ್ತದೆ.

ಈ ಸಾಮರಸ್ಯವನ್ನು ವಚನಕಾರರು ನಾನಾವಿಧವಾಗಿ ಸಾಧಿಸಿದ್ದಾರೆ. ಅಂತಹ ಒಂದು ಪ್ರಕಾರದ ಇಣುಕು ನೋಟವಷ್ಟೇ ಇಲ್ಲಿ ಉದ್ದಿಷ್ಟವಾಗಿರತಕ್ಕದ್ದು. ವಾಸ್ತವವಾಗಿ ವಚನಕಾರರ ಬಗ್ಗೆ ಲೇಖಕರು ಹೇಳಬೇಕಾಗಿದ್ದದ್ದು - ಜನಜೀವನದ ಬದುಕಿನಲ್ಲಿ ಸಾಂಸ್ಕೃತಿಕವಾದ ಮಹತ್ವದ ಬದಲಾವಣೆಗಳನ್ನು ಅವರು ರೂಢಿಸಲು ಯತ್ನಿಸಿದರು– ಎಂದು. ಇಲ್ಲಿ ವಾಸ್ತವವಾಗಿ ಸಮನ್ವಯದ ಪ್ರಶ್ನೆಯೇ ಇಲ್ಲ. ವಚನಕಾರರು ಹೊಲೆಯ, ಮಾದಿಗವೆನ್ನುವ ನೆಲೆಗಳನ್ನು ವರ್ಣಪರಿಕಲ್ಪನೆಯ ಆಚೆಗಿಟ್ಟು, ವ್ಯಕ್ತಿಯ ನಡತೆಯಲ್ಲಿ ನೋಡುವ ವಿನ್ಯಾಸವನ್ನು ಕುರಿತು ಸಿ.ಪಿ.ಕೆ.ಯವರ ವ್ಯಾಖ್ಯಾನ ಹೀಗಿದೆ : 'ಏನೇ ಇರಲಿ ಸಮಾಜದಲ್ಲಿ ಬೇರೂರಿರುವ ಹೊಲೆಯ ಮಾದಿಗ ಮುಂತಾದ ಶಬ್ದಗಳನ್ನು ಬಹಿಷ್ಕರಿಸುವುದು ಸಾಧ್ಯವಿಲ್ಲ. ಎಂತಲೇ ಬಸವಣ್ಣನವರು ಅದಕ್ಕೆ ಹೊಸ ಅರ್ಥವನ್ನು ಹಚ್ಚಬೇಕಾಯಿತು'...ಸರಳೀಕರಣಕ್ಕೆ ಇವರ ಈ ಮಾತು ಸಮರ್ಥ ಉದಾಹರಣೆ ಯಾಗುತ್ತದೆ. 'ನೆನಪಿನ ದೋಣಿಯಲ್ಲಿ - ನವೋದಯ' ಎನ್ನುವ ಲೇಖನದಲ್ಲೂ 'ನವೋದಯ' ಎನ್ನುವ ಪರಿಕಲ್ಪನೆಯನ್ನೇ ಅತ್ಯಂತ ಸರಳವಾಗಿ ಗ್ರಹಿಸಲಾಗಿದೆ. ಇದು ಸಾಂಸ್ಕೃತಿಕ ಸನ್ನಿವೇಶವೆಂದೇನೊ ಇಲ್ಲಿ ಗ್ರಹಿಸಲಾಗಿಲ್ಲ. ಆದ್ದರಿಂದ ಲೇಖನ ಪೇಲವವಾಗಿದೆ.

ಕಾವ್ಯಗೌರವ : ಸಿ.ಪಿ.ಕೆ.

ಹದಿಮೂರು ಲೇಖನಗಳು ಈ ಸಂಕಲನದಲ್ಲಿವೆ. 'ಸಂಸ್ಕೃತ-ಕನ್ನಡ ಹಳೆಯದು-ಹೊಸದು, ಶಿಷ್ಟ-ಜಾನಪದ ಮುಂತಾದ ವೈವಿಧ್ಯವನ್ನು ಇಲ್ಲಿನ ವಿಷಯಗಳಲ್ಲಿ ಕಾಣ ಬಹುದು' ಎಂದು ಲೇಖಕರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ಈ ವೈವಿಧ್ಯ ವೇನೇ ಇದ್ದರೂ, ಬರವಣಿಗೆಯ ಧಾಟಿಯು ಮಾತ್ರ ಒಂದೇ ಆಗಿದೆ. ಅದು-ಕಾವ್ಯದ ಭಾಗವನ್ನು-ಸಾಲುಗಳನ್ನು ಉದ್ಧರಿಸಿ - ಉದ್ಧರಿಸಿದ ಭಾಗವನ್ನು ಮತ್ತೆ ಅರ್ಥ ಹೇಳುತ್ತಾ ಹೋಗುವುದು. ಈ ಬರವಣಿಗೆ ವಿಮರ್ಶೆಯಂತೂ ಅಲ್ಲವೇ ಅಲ್ಲ ; ಪರಿಚಯಾತ್ಮಕ ಸ್ವರೂಪದ್ದೂ ಅಲ್ಲ. ಒಟ್ಟಿನಲ್ಲಿ ಸಾಹಿತ್ಯದ ಅಧ್ಯಯನದ ಶಿಸ್ತಿನಲ್ಲಿ ಇವುಗಳನ್ನು ಗಂಭೀರವಾಗಿ ಪರಿಗಣಿಸಲಾಗುವುದಿಲ್ಲ ಎನ್ನುವುದು ವಿಷಾದಕರ ಸತ್ಯ. 'ನೇಮಿಚಂದ್ರನ ಕೆಲವು ವರ್ಣನೆಗಳು' ಕುವೆಂಪು ಅವರ 'ಸ್ಮಶಾನ ಕುರುಕ್ಷೇತ್ರಂ 'ಶ್ರೀನಿವಾಸರ ಭಾವಗೀತೆಗಳು' 'ಹರಿಹರನ ಪುಷ್ಪ ರಗಳೆ', 'ಆದಿಕವಿಯ ಕೆಲವು ಉಪಮಾನಗಳು'—ಹೀಗೆ ಈ ಸಂಕಲನದ ಇನ್ನೂ ಅನೇಕ ಲೇಖನಗಳನ್ನು ಸುಲಭ ಬರವಣಿಗೆಯ ( Easy writing ) ಉದಾಹರಣೆಗೆಂದು ಗುರುತಿಸಬಹುದು. ಮೊದಲನೆ ಲೇಖನದಲ್ಲಿ ಲೇಖಕರು ಕವಿರಾಜಮಾರ್ಗದಲ್ಲಿ ಕಾವ್ಯಮೀಮಾಂಸೆಯನ್ನು ಕುರಿತ ಭಾಗಗಳೆಂದು ಏನು ವಿವರಿಸುತ್ತಾರೋ ಅವುಗಳು ಯಾವುವೂ ಕಾವ್ಯ ಮೀಮಾಂಸೆಯ ವಲಯದಲ್ಲಿ ಗಂಭೀರವಾಗಿ ಪರಿಗಣಿಸುವಂಥಗಳೇನೂ ಅಲ್ಲ.

ನೇಮಿಚಂದ್ರ : ಸಂ : ವಿ. ಸೀತಾರಾಮಯ್ಯ

ನೇಮಿಚಂದ್ರನ ಕಾಲ, ಸ್ಥಳ ಮತ್ತು ಕಾವ್ಯಗಳನ್ನು ಕುರಿತಂತೆ ಪರಿಚಯವನ್ನು ಈ ಪುಸ್ತಕದಲ್ಲಿ ಮಾಡಲಾಗಿದೆ. ಕಾಲ ದೇಶ, ಸನ್ನಿವೇಶಾದಿಗಳನ್ನು ಕುರಿತು ಜಿ. ವೆಂಕಟಸುಬ್ಬಯ್ಯನವರೂ, ನೇಮಿಚಂದ್ರನ ಲೀಲಾವತಿಯ ಬಗ್ಗೆ ವೆಂಕಟರಾಯಾ

ಚಾರ್ಯರೂ, ನೇಮಿನಾಥಪುರಾಣದ ಬಗ್ಗೆ ಹಂಪ ನಾಗರಾಜಯ್ಯನವರೂ ಲೇಖನವನ್ನು ಬರೆದಿದ್ದಾರೆ. ಒಟ್ಟು ಸಮೀಕ್ಷೆಯನ್ನು ಪುಸ್ತಕದ ಸಂಪಾದಕರಾದ ವಿ. ಸೀತಾರಾಮಯ್ಯನವರು ಮಾಡಿದ್ದಾರೆ. ಲೀಲಾವತಿ ಹಾಗೂ ನೇಮಿನಾಥಪುರಾಣದ ಬಗ್ಗೆ ಲೇಖನಗಳು ಕೃತಿಯ ಕಥಾಭಾಗವನ್ನು ಗದ್ಯದಲ್ಲಿ ವಿಸ್ತಾರವಾಗಿ ಪರಿಚಯಿಸುತ್ತವೆ. ಹಾಗೆ ನೋಡಿದರೆ ಲೇಖನದ ಬಹುಪಾಲು ಭಾಗ ಇದಕ್ಕೆ ಮೀಸಲಾಗಿದೆ. ವೆಂಕಟಾರಾಚಾರ್ಯರು ಕೃತಿಯ ಪರಿಚಯದ ಜೊತೆಗೆ ಕಾವ್ಯದ ಮೇಲೆ ಪ್ರಭಾವ ಬೀರಿದೆ ಎನ್ನಲಾದ ಸುಬಂಧುವಿನ ವಾಸವದತ್ತೆಯ ಕಥಾನಕವನ್ನೂ ಪರಿಚಯಿಸಿ-ಎರಡಕ್ಕೂ ಇರುವ ಸಾಮ್ಯ-ವೈದೃಶ್ಯಗಳನ್ನು ವಿವರಿಸಿದ್ದಾರೆ. ಶೃಂಗಾರ ಕಾವ್ಯವಾಗಿ ಇದು ಸಾರ್ಥಕ ಪ್ರಯತ್ನವೆಂದು ಲೀಲಾವತಿಯನ್ನು ಲೇಖಕರು ಮೆಚ್ಚಿದ್ದಾರೆ. ಪಾತ್ರ ರಚನೆ, ಸಾಮಾಜಿಕ ದರ್ಶನ(?), ಮುಂತಾಗಿ ವಿಭಾಗಿಸಿಕೊಂಡು ಹೇಳುವ ವಿಷಯವು ಅನೇಕ ಬಾರಿ ಪುನರುಕ್ತಿಯಂತೆ ತೋರುತ್ತದೆ. ಹಂಪ ನಾಗರಾಜಯ್ಯನವರ ಲೇಖನವೂ ವೆಂಕಟರಾಯಾಚಾರ್ಯರ ಲೇಖನದ ಹಾಗೆಯೇ ಕಾವ್ಯವನ್ನು ಮೆಚ್ಚಿಕೊಂಡು, ವಿವರಿಸಿರುವ ಧಾಟಿಯದ್ದೇ ಆಗಿದೆ. ಲೇಖನದ ವಿಮರ್ಶಾ ಭಾಗದಲ್ಲಿ ಕೃತಿಯ ಮೂಲ ಆಕರಗಳು ಹಾಗೂ ಈ ಕೃತಿಯೇ ಮುಂದಿನವರ ಕಾವ್ಯದ ಮೇಲೆ ಮಾಡಿರಬಹುದಾದ ಪರಿಣಾಮಗಳ ಚರ್ಚೆ ಇದೆ.

ಈ ಎರಡೂ ಕೃತಿಗಳ ಬಗ್ಗೆ ದೀರ್ಘ ಲೇಖನಗಳಿರುವಾಗ ಕಾಲ ದೇಶ ಸನ್ನಿವೇಶಗಳನ್ನು ವಿವರಿಸುವ ಲೇಖನವೂ ಕೃತಿಗಳ ಪರಿಚಯವನ್ನು ಮಾಡಿಕೊಡಬೇಕಾಗಿದ್ದರ ಔಚಿತ್ಯವೇನೋ ತಿಳಿಯದು. ಸಂಪಾದಕರು ಇಂಥ ಭಾಗಗಳನ್ನು ಗಮನಿಸಿ ತೆಗೆದು ಹಾಕಬಹುದಾಗಿತ್ತು. ಅಲ್ಲದೆ ಬೇರೆ ಲೇಖಕರ ಲೇಖನದಲ್ಲಿ ಅಡಿಟಿಪ್ಪಣಿಯಾಗಿ ಸಂಪಾದಕರು ತಮ್ಮ ವಿಚಾರವನ್ನೋ, ಟೀಕೆಯನ್ನೋ, ಮಾಡುವುದು ಸಮಂಜಸವಾಗಿ ತೋರುವುದಿಲ್ಲ. ಸಮೀಕ್ಷೆಯ ಭಾಗದಲ್ಲಿ ಸಂಪಾದಕರೇ ಆ ಕೆಲಸವನ್ನು ಮಾಡಬಹುದಾಗಿತ್ತು.

ವಚನಪರುಷ : ಎಸ್. ವಿದ್ಯಾಶಂಕರ

ವಚನಕಾರರ ದೃಷ್ಟಿ-ಧೋರಣೆಗಳನ್ನು ವಿವರಿಸುವ ಐದು ವಿಭಿನ್ನ ಲೇಖನಗಳು ಈ ಸಂಕಲನದಲ್ಲಿವೆ. ಮೊದಲ ಲೇಖನ 'ವಚನಗಳಲ್ಲಿ ಸತಿಪತಿಭಾವ' ವಚನಕಾರರಲ್ಲಿ ಆ ಬಗ್ಗೆ ಕಂಡುಬರುವ ನಿಲುವುಗಳನ್ನು ವಿವರಿಸುತ್ತದೆ. ಲೇಖನದ ಚರ್ಚೆಯು ವಾಸ್ತವವಾಗಿ ಈ ತತ್ವವನ್ನು (ಸತಿ-ಪತಿ) ಒಂದು ಧಾರ್ಮಿಕ, ಅನುಭಾವಿಕ ತತ್ವವೆಂಬ ಮುಖ್ಯ ಗ್ರಹಿಕೆಯೊಂದಿಗೆ ರೂಪುಗೊಳ್ಳಬೇಕಿತ್ತು. ಆಗ ಈ ತತ್ವದ ಅಂತರ್ವಿರೋಧಗಳೂ, ಇದನ್ನು ನಿರಾಕರಿಸುವ ಧಾರ್ಮಿಕ ವ್ಯಕ್ತಿಗಳ ತಾತ್ವಿಕ ನಿಲುಗಳೂ ಗಂಭೀರ ಚರ್ಚೆಯೊಳಗೆ ತರಲು ಸಾಧ್ಯವಾಗುತ್ತಿತ್ತು. ಏಕೆಂದರೆ ಅನುಭಾವದ ಜಗತ್ತಿನಲ್ಲಿ ಸತಿ-ಪತಿ, ಪ್ರಕೃತಿ-ಪುರುಷ ಈ ನೆಲೆಯನ್ನು ಒಪ್ಪಿದ, ಒಪ್ಪದೇ ಹೋದ

ಎರಡು ಪಂಥಗಳು ಇವೆ. ಈ ಹಿನ್ನೆಲೆಯಲ್ಲಿ ಲೇಖನದ ಚರ್ಚೆಯು ರೂಪುಗೊಂಡಿದ್ದರೆ ಅರ್ಥಪೂರ್ಣವಾಗಿರುತ್ತಿತ್ತು. ಲೇಖನದಲ್ಲಿ ಲೌಕಿಕದ ಗಂಡ-ಹೆಂಡತಿಯ ಪ್ರೇಮ ಸಾಫಲ್ಯದ ಲಕ್ಷಣಗಳಿಗೆ ಸತಿ-ಪತಿ ಕಲ್ಪನೆಯನ್ನು ಜೋಡಿಸಲಾಗಿದೆ. ಇದು ಕೊಂಚ ದಾರಿ ತಪ್ಪಿಸುವ ವಿವರಣೆಯಾಗುತ್ತದೆ. ಅಲ್ಲದೇ ಲೇಖನದಲ್ಲಿ ಎಲ್ಲ ವಚನಕಾರರನ್ನೂ ಉದ್ಧರಿಸಬೇಕೆನ್ನುವ ಹಂಬಲ ಲೇಖನ ವಿಸ್ತಾರವಾಗುವುದಕ್ಕೆ ಮಾತ್ರ ಕಾರಣವಾಗುತ್ತದೆ ಅಷ್ಟೆ. ಎರಡನೇ ಲೇಖನದ ತಲೆಬರಹವು ವಿಷಯಕ್ಕೆ ಸಂಗತವಾಗಿರುವ ಹಾಗೆ ತೋರುವುದಿಲ್ಲ. 'ಕೆಳವರ್ಗದವರು ಹಾಗೂ ಪ್ರತಿಭಟನೆ'-ಎನ್ನುವ ಲೇಖನದಲ್ಲಿ ಲೇಖಕರು-ಕೆಳಜಾತಿಯಿಂದ ಬಂದ ವಚನಕಾರರು ವಚನ ಚಳುವಳಿಯು ರೂಪುಗೊಳ್ಳಿಸುತ್ತಿದ್ದ ಹೊಸ ಧಾರ್ಮಿಕ, ಸಾಮಾಜಿಕ ಆಶಯಗಳನ್ನು ಹೇಗೆ ಅಭಿವ್ಯಕ್ತಿಗೊಳಿಸಿದರು ಎನ್ನುವುದನ್ನು ಮುಖ್ಯವಾಗಿ ಹೇಳಿದ್ದಾರೆ. ಸಂಪ್ರದಾಯಸ್ಥ ಪುರೋಹಿತಶಾಹಿ ಹಾಗೂ ವರ್ಣಾಶ್ರಮ ನೆಲೆಗಳನ್ನು ಇವರು ಟೀಕಿಸಿದ ರೀತಿಯನ್ನೂ ಲೇಖನವು ವಿವರಿಸುತ್ತದೆ. ಆದ್ದರಿಂದ ಹೊಸ ಸಂಸ್ಕೃತಿಯು ರೂಪುಗೊಳ್ಳಿಸುತ್ತಿದ್ದ ಪ್ರತಿಕ್ರಿಯೆಗಳನ್ನಾಗಿ ಇವುಗಳನ್ನು ಗ್ರಹಿಸಬೇಕಾಗುತ್ತದೆ ವಿನಾ ಪ್ರತಿಭಟನೆಯೆಂದಾಗಿಯಲ್ಲ. ಈ ಸಂಕಲನದಲ್ಲಿ ಉರಿಲಿಂಗ ಪೆದ್ದಿಯನ್ನು ಕುರಿತ ಲೇಖನ ಹಾಗೂ 'ಲಿಂಗವಂತ ಹರಿಜನರು' ಎಂಬ ಅನುಬಂಧ ವಿಶಿಷ್ಟವಾದ ಲೇಖನಗಳಾಗಿವೆ. ಉರಿಲಿಂಗಪೆದ್ದಿಯ ಅನುಯಾಯಿಗಳನ್ನು ಕುರಿತಾದಂಥ 'ಲಿಂಗವಂತ ಹರಿಜನರು' ಎನ್ನುವ ಲೇಖನದಲ್ಲಿ ಕುತೂಹಲವಾದಂಥ ವಿಷಯಗಳನ್ನು ಗ್ರಹಿಸಲಾಗಿದೆ. 'ವಚನಕಾರರು ಮತ್ತು ಮಾಸ್ತಿ' ಲೇಖನವು ಕೂಡ ಈ ಸಂಕಲನದಲ್ಲಿ ಚರ್ಚೆಗೆ ಅವಕಾಶ ಮಾಡಿಕೊಡುವಂಥ ಲೇಖನವೇ. ವಚನಕಾರರು ಮಾಸ್ತಿ ಆಚರಣೆಯನ್ನು ವಿರೋಧಿಸಿದರು ಎಂದು ಲೇಖಕರು ಹೇಳುವ ಮಾತಿಗೆ ಸಾಕಷ್ಟು ನಿದರ್ಶನಗಳಿಲ್ಲ. ಮಾದಾರ ಧೂಳಯ್ಯನಲ್ಲಿ ಪರೋಕ್ಷವಾಗಿ ಇದರ ಸೂಚನೆ ಇದೆ ಸರಿ. ಆದರೆ ಬೇರೆಯ ವಚನಕಾರರು ಈ ಆಚರಣೆಯ ಬಗ್ಗೆ ತಮ್ಮ ನಿಲುವುಗಳನ್ನು ಪ್ರಕಟಿಸಿರುವುದು ಗೊತ್ತಾಗುವುದಿಲ್ಲ. ಇದರರ್ಥ ಅವರು ಈ ಆಚರಣೆಯನ್ನು ಒಪ್ಪಿದ್ದರು ಎನ್ನುವ ಮಾತನ್ನು ನಾನು ಹೇಳುತ್ತಿಲ್ಲ. ಆದರೆ ಈ ಸಂಗತಿಯೇ ಬೇರೆ ಕೆಲವು ಸಮಸ್ಯೆಗಳಿಗೆ ದಾರಿ ಮಾಡಿಕೊಡುತ್ತದೆ. ಮಾಸ್ತಿ ಆಚರಣೆ ಆಗ ಪ್ರಬಲವಾಗಿತ್ತೇ? ಎನ್ನುವ ಮೂಲಭೂತ ಸಮಸ್ಯೆಯೊಂದಿಗೆ ಈ ಚರ್ಚೆಯು ಪ್ರಾರಂಭವಾಗಬೇಕಾಗುತ್ತದೆ. ಇದು ಆ ಚರ್ಚೆ ಸಮಸ್ಯೆಯ ವಿವರವಾದ ಅಧ್ಯಯನಕ್ಕೆ ಸ್ಥಳವಲ್ಲವಾದ್ದರಿಂದ-ಇರುವ ಸಮಸ್ಯೆಯೊಂದನ್ನು ಮಾತ್ರ ಸೂಚಿಸಬಹುದಾಗಿದೆ.

ಕಾವ್ಯಾರಾಧನೆ : ಎಚ್. ಎಂ. ಶಂಕರನಾರಾಯಣ ರಾವ್

ಹೊಸಗನ್ನಡ ಮತ್ತು ಹಳಗನ್ನಡ ಕಾವ್ಯಗಳನ್ನು ಕುರಿತ ಹದಿಮೂರು ಲೇಖನಗಳು ಈ ಸಂಕಲನದಲ್ಲಿವೆ. ಶ್ರೀ ಅವರು ಮಾಡಿದವರ್ಡ್ಸ್‌ವರ್ತ್ ಕವಿಯ Rain Bow ಕವನದ ಅನುವಾದವನ್ನು ಕುರಿತು ಬರೆದ ಲೇಖನ 'ಮಳೆಬಿಲ್ಲು', ಕಡೆಂಗೊಡ್ಲು ಶಂಕರಭಟ್ಟರ 'ಹೊನ್ನಿಯ ಮದುವೆ' ಕವನವನ್ನು ಕುರಿತ ಲೇಖನ; ಪು.ತಿ.ನ. ಅವರ ಎರಡು ಕವನಗಳನ್ನು ಕುರಿತ ಎರಡು ಲೇಖನಗಳು ಹೊಸ ಕಾವ್ಯವನ್ನು

ಕುರಿತ ಹಾಗೆ ಇವರು ಬರೆದ ಲೇಖನಗಳಾಗಿವೆ. ಈ ಲೇಖನಗಳ ಜೊತೆಗೆ 'ಸತ್ಯವತಿ' 'ಭಗವದ್ಗೀತೆ' – ಇವುಗಳನ್ನು ಒಟ್ಟಾಗಿಯೇ ಇಟ್ಟು ವಿಮರ್ಶಕನು ಗಮನಿಸಬಹುದಾದ ಸಂಗತಿಯೊಂದಿದೆ. ಈ ಎಲ್ಲ ಲೇಖನಗಳಲ್ಲಿಯೂ ಬದುಕಿನಲ್ಲಿ ನೈತಿಕ ಮೌಲ್ಯಗಳಿಗೆ ಲೇಖಕರು ಕೊಡುವ ಪ್ರಾಶಸ್ತ್ಯವು ಎದ್ದು ಕಾಣುತ್ತದೆ. ಜೀವನದಲ್ಲಿ ಸೊಬಗು ಶಾಂತತೆ, ಉದಾತ್ತತೆ ಹಾಗೂ ಅನುಕಂಪೆ ಪ್ರೀತಿಗಳು ಮೈದೋರಬೇಕೆನ್ನುವ ಲೇಖಕರ ಆಶಯವೇ ಇವರು ವಿವರಣೆಗೆಂದು ಆಯ್ಕೆ ಮಾಡಿಕೊಂಡ ಸಾಹಿತ್ಯ ಕೃತಿಯ ಹಿನ್ನೆಲೆಯೂ ಆಗಿರುತ್ತದೆ. ಹೀಗಾಗಿ ಈ ಲೇಖನಗಳ ಧಾಟಿಯು ಅಂಥ ಜೀವನ ಮೌಲ್ಯಗಳನ್ನು ಸಾಹಿತ್ಯ ಕೃತಿಯಲ್ಲಿ ಹುಡುಕುವುದೇ ಆಗಿದೆ.

ಈ ಸಂಗ್ರಹದ ದೀರ್ಘ ಲೇಖನಗಳು ಎಂದು ಕರೆಯಬಹುದಾದಂಥವು – ಕನ್ನಡ ಸಾಹಿತ್ಯದಲ್ಲಿ ನಾಗವರ್ಮರು' 'ಯಶೋಧರ ಚರಿತೆ' ಹಾಗೂ ಕುಮಾರವ್ಯಾಸ ಒಂದು ಸಮೀಕ್ಷೆ' ಇವುಗಳು ಕೃತಿಪರಿಚಯ, ಕವಿಪರಿಚಯ, ಕಾವ್ಯದ ವೈಶಿಷ್ಟ್ಯತೆ ಕಾವ್ಯದ ಮೇಲೆ ಆಗಿರಬಹುದಾದ ಅನ್ಯಪ್ರಭಾವಗಳು – ಈ ಹಿನ್ನೆಲೆಯಲ್ಲಿ ಕವಿ - ಕೃತಿ ಪರಿಚಯವನ್ನು ಈ ಮೂರು ಲೇಖನಗಳಲ್ಲೂ ಮಾಡಲಾಗಿದೆ. 'ಯಶೋಧರ ಚರಿತೆ' ಲೇಖನವಂತೂ ಆ ಕಾವ್ಯಕ್ಕೆ ಬರೆದ ಪೀಠಿಕೆ ಮತ್ತು ಅನುಬಂಧವಾಗಿದ್ದು – ಕನ್ನಡ ಸಾಹಿತ್ಯದ ಓದುಗರಿಗೆ ಹೆಚ್ಚು ಪ್ರಸಿದ್ಧವೂ, ಪ್ರಿಯವೂ ಆಗಿರುವುದನ್ನು ಇಲ್ಲಿ ಗುರುತಿಸಬಹುದು.

ಪರಿಶೋಧನ : ಎನ್. ಎಸ್. ತಾರಾನಾಥ

ಹತ್ತು ಲೇಖನಗಳು ಈ ಸಂಕಲನದಲ್ಲಿ ಸೇರಿವೆ. 'ಷಟ್ಖಂಡಾಗಮ ಮತ್ತು ಕನ್ನಡ ಸಾಹಿತ್ಯ' 'ಅನಂತ ಕವಿಯ ಬೆಳ್ಗುಳದ ವಿಸ್ತಾರ' 'ಪೂಜ್ಯ ಪಾದಚರಿತೆ ಒಂದು ಪರಿಚಯ' ಮುಂತಾದ ಈ ಲೇಖನಗಳು ಲೇಖಕರು ಹಸ್ತಪ್ರತಿಗಳನ್ನು ಗಮನಿಸಿ ಸಿದ್ಧಪಡಿಸಿದ ಶ್ರಮವನ್ನು ಸ್ಪಷ್ಟವಾಗಿ ತೋರಿಸುತ್ತವೆ. ವಾಸ್ತವವಾಗಿ ಕಾವ್ಯದ ಸತ್ವವು ಅಷ್ಟಾಗಿ ಇಲ್ಲದ ಧಾರ್ಮಿಕ ವಿವೇಚನೆ, ಶ್ರದ್ಧೆ ತುಂಬಿರುವ ಇಂಥ ಸಮಸ್ಯೆಗಳ. ಕೃತಿಗಳ ಒಳಹೋಗುವುದು ಒಂದು ಪರಿಶ್ರಮದ ಕೆಲಸವೇ ಸರಿ. ಇಂಥ ಕಡೆಗೆ ತಾಳ್ಮೆಯೊಂದೇ ಬಹು ಮುಖ್ಯವಾದ ಗುಣವಾಗಿರಬೇಕಾಗುತ್ತದೆ. ಲೇಖಕರು ತಾಳ್ಮೆ ಮತ್ತು ಪರಿಶ್ರಮದಿಂದ ಹಸ್ತಪ್ರತಿಗಳನ್ನು ನೋಡಿರುವುದು ಇಲ್ಲಿ ಕಂಡುಬರುತ್ತದೆ. 'ಬೊಪ್ಪಣ್ಣನ ಗೊಮ್ಮಟ ಸ್ತುತಿ' 'ರುದ್ರಭಟ್ಟನ ಇತಿವೃತ್ತ ವಿಚಾರ' ಪರಿಚಯಾತ್ಮಕವಾಗಿದ್ದು ಈಗಾಗಲೇ ಹೇಳಿರುವುದನ್ನು ಮತ್ತೊಮ್ಮೆ ಹೇಳಿದಂತೆ ಅನ್ನಿಸುತ್ತದೆ. 'ನೊಳಂಬ ಶಾಸನಗಳ ಸಾಹಿತ್ಯಕ ಮೌಲ್ಯ' ಎನ್ನುವ ಲೇಖನವು ನೊಳಂಬ ಶಾಸನಗಳಲ್ಲಿ ಸಾಹಿತ್ಯಕ ಮೌಲ್ಯವಿಲ್ಲವೆನ್ನುವುದನ್ನು ಹೇಳಲೆಂದು ಬರೆದದ್ದಾಗಿದೆ. ಲೇಖನದ ಪ್ರಾರಂಭದಲ್ಲಿ 'ಶಾಸನಗಳ ಉದ್ದೇಶ ಸಾಹಿತ್ಯಕ ಮೌಲ್ಯವನ್ನು ಎತ್ತಿ ಹಿಡಿಯುವುದಲ್ಲ' ಎಂದು ಲೇಖಕರು ಹೇಳುತ್ತ ನೊಳಂಬ ಶಾಸನಗಳಲ್ಲಿ

ಸಾಹಿತ್ಯಕ ಮೌಲ್ಯವನ್ನು ಏಕೆ ಹುಡುಕ ಹೊರಟರೋ ತಿಳಿಯುವುದಿಲ್ಲ. 'ಪಂಚಪದಿ' 'ಕುವೆಂಪು ಪ್ರಗಾಥಗಳು' – ಈ ಎರಡೂ ಲೇಖನಗಳೂ ಛಂದಶ್ಶಾಸ್ತ್ರದ ಹಿನ್ನೆಲೆಯಲ್ಲಿ ಬರೆದಂಥ ಲೇಖನಗಳಾಗಿವೆ.

ಪೂರ್ವಸೂರಿಗಳೊಡನೆ : ಎ. ಎನ್. ಮೂರ್ತಿರಾವ್

ಮೂರ್ತಿರಾವ್ ಅವರ 'ಪೂರ್ವಸೂರಿಗಳೊಡನೆ' ಪುಸ್ತಕವು 'ಸೀತಾಪರಿತ್ಯಾಗ' ಎನ್ನುವ ವಸ್ತುವನ್ನು ವಾಲ್ಮೀಕಿ, ಉತ್ತರಕಾಂಡ, ಕಾಳಿದಾಸ, ಭವಭೂತಿ, ಇವರು ಹೇಗೆ ನಿರೂಪಿಸಿದ್ದಾರೆ ಎನ್ನುವುದನ್ನು ವಿವರಿಸುತ್ತದೆ. ಸೀತೆಯ ಬಗೆಗಿನ ಲೇಖಕರ ಅನುಕಂಪೆಯು ಪ್ರಧಾನವಾಗಿ ಆ ಹಿನ್ನೆಲೆಯಲ್ಲಿಯೇ ನಾಲ್ಕು ಕವಿಗಳ ದೃಷ್ಟಿಕೋನವನ್ನು ಇಲ್ಲಿ ನೋಡಲಾಗಿದೆ. ಭವಭೂತಿಯ ನಾಟಕವು ಸೀತೆಯನ್ನು ಮೊದಲಿನಿಂದಲೂ ಉದಾತ್ತವಾಗಿ, ಪರವಹಿಸಿ ಕಾಣುವುದರಿಂದಲೂ ರಾಮನು ಇಲ್ಲಿ ತನ್ನ ಮನಸ್ಸಿನ ಆಳದಿಂದ, ಅಹಂಕಾರದಿಂದ ಸೀತೆಯನ್ನು ಬಿಟ್ಟವನಲ್ಲವೆಂದು ಚಿತ್ರಿತವಾಗಿರುವುದರಿಂದ ಲೇಖಕರ ಒಲವು ಭವಭೂತಿಯ ಸೀತಿಪರಿತ್ಯಾಗ ಸಂದರ್ಭದ ಕಡೆಗೆ ಇದೆ. ಈ ನಾಲ್ಕು ಲೇಖನಗಳ ವಿಶೇಷವೆಂದರೆ ಸೀತಾ ಪರಿತ್ಯಾಗದ ಸಂದರ್ಭವನ್ನು ಪ್ರತಿಯೊಂದು ಕಾವ್ಯವೂ ಮೂಡಿಸಿರುವ ಬಗೆಯನ್ನು ಲೇಖಕರು ಅತ್ಯಂತ ಭಾವ ತನ್ಮಯತೆಯಿಂದ ವಿವರಿಸುತ್ತ ಪರಿಚಯಿಸುತ್ತಾರೆ. ಪರಿಚಯವು ಹೃದ್ಯವಾಗಿದೆ. ಕೊನೆಯ 'ಮೇಘದೂತದಲ್ಲಿ ಕಾವ್ಯ ಪ್ರತಿಮೆ' ಎನ್ನುವ ಲೇಖನವು ಕಾವ್ಯದ ಕೆಲವು ಪ್ರತಿಮೆಗಳನ್ನು ವಿವರಿಸುತ್ತದೆ.

ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ : (5 ನೇ ಸಂಪುಟ)

ಜಾಗತಿಕ ಮತ್ತು ಭಾರತೀಯ ಜನಜೀವನ ಮತ್ತು ಸಾಹಿತ್ಯಕ ಹಿನ್ನೆಲೆಯಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯ ವಿಶ್ಲೇಷಣೆಯನ್ನು ಮಾಡಿಕೊಡುವ ಆಶಯದೊಂದಿಗೆ ಪ್ರಕಟವಾದ ಸಾಹಿತ್ಯ ಚರಿತ್ರೆಯ ಐದನೆಯ ಸಂಪುಟವಿದು. ಸಮೂಹ ಪ್ರಯತ್ನದ ಇಂಥ ಬರವಣಿಗೆಗಳ ರಚನೆಯ ಸ್ವರೂಪವನ್ನು ಸಂಪಾದಕರು ನಿರ್ಧರಿಸಬೇಕಾಗುತ್ತದೆ. ಏಕೆಂದರೆ ವಿವಿಧ ಜ್ಞಾನಶಾಖೆಗಳೊಡನೆ, ವಿವಿಧ ಭಾಷೆಯ ಸಾಹಿತ್ಯ ಪ್ರಕಾರದೊಡನೆ ಸಂಬಂಧ ಹೊಂದುವ ಕನ್ನಡ ಸಾಹಿತ್ಯ ಬರವಣಿಗೆಯು ಸುಸಂಗತವಾದ ಸೂತ್ರವೊಂದನ್ನು ಪಡೆದಿರಬೇಕಾದದ್ದು ಅನಿವಾರ್ಯವಾಗಿದೆ. ಇಲ್ಲದೇ ಹೋದರೆ ಬರವಣಿಗೆಯ ಉದ್ದೇಶವು ಹೆಚ್ಚು ಯಶಸ್ವಿಯಾಗಲಾರದೆಂದು ಅನ್ನಿಸುತ್ತದೆ. 'ಸಾಹಿತ್ಯವಾರ್ಷಿಕ'ದ ಹಿಂದಿನ ಸಂಚಿಕೆಗಳಲ್ಲಿ ವಿಮರ್ಶಕರು ಈ ರೀತಿಯ ಸಮೂಹ ಪ್ರಯತ್ನಗಳ ವಿಧಾನವನ್ನು, ರೂಪುಗೊಳ್ಳಬೇಕಾದ ರೀತಿಯನ್ನೂ ಕುರಿತು ವಿಚಾರ ಮಾಡಿದ್ದಾರೆ, ಅದನ್ನು ಇಲ್ಲಿ ಮತ್ತೆ ಪುನರಾವರ್ತಿಸಿ ಹೇಳಲು ಹೋಗುವುದಿಲ್ಲ.

ಅಧ್ಯಯನ ಸಂಸ್ಥೆಯು ಈ ಪ್ರಯತ್ನದಲ್ಲಿ ಉಂಟಾಗಿರುವ ಕೊರತೆಗಳನ್ನು ಹಿಂದಿನ ಸಾಹಿತ್ಯದ ವಾರ್ಷಿಕ ಸಂಚಿಕೆಗಳಲ್ಲಿ ವಿಮರ್ಶಕರು ಗುರುತಿಸಿದ್ದಾರೆ. ಪ್ರಸ್ತುತ ಐದನೆಯ ಸಂಪುಟವೂ ಸಹ ಅಂಥ ಅರೆಕೊರೆಗಳಿಂದಲೇ ತುಂಬಿದೆ. ಸಾಹಿತ್ಯ ಚರಿತ್ರೆಯು ಇಲ್ಲಿ ಬೇರೆಯ ಶಿಸ್ತುಗಳ ವಿವರಗಳ ಜೊತೆಗೇ ಯಾವುದೇ ರೀತಿಯ ಸಂಬಂಧವನ್ನು ಪಡೆದಂತೆ ತೋರುವುದಿಲ್ಲ. ಹೀಗಾಗಿ ಇಲ್ಲಿರುವ ಏಳು ಅಧ್ಯಾಯ ಗಳಲ್ಲಿ ಪ್ರತಿಯೊಂದೂ ಪ್ರತ್ಯೇಕವಾದ, ಯಾವುದೇ ರೀತಿಯಲ್ಲಿ ಪರಸ್ಪರ ಸಂಬಂಧ ವಿಲ್ಲದ ಬರವಣಿಗೆಗಳಂತೆ ತೋರುತ್ತದೆ. ಅಧ್ಯಾಯ ಒಂದರ ವಿವರಗಳು ಯಾವುದೇ ರೀತಿಯಲ್ಲಿ ಕರ್ನಾಟಕ ಸಾಂಸ್ಕೃತಿಕ ಸಾಹಿತ್ಯದ ಶಿಳಿವಳಿಕೆಗೆ ಹಿನ್ನೆಲೆಯಾಗಿ ರೂಪು ಗೊಳ್ಳುವುದೇ ಇಲ್ಲ. ಹಾಗೇ ನೋಡಿದರೆ ಅಧ್ಯಾಯ ಎರಡರಿಂದ ಐದನೇ ಅಧ್ಯಾಯ ಗಳಲ್ಲಿಯಾದರೂ ಒಂದು ಸಾಂಸ್ಕೃತಿಕ ಸಂಬಂಧ ರೂಪುಗೊಳ್ಳಬೇಕಾಗಿತ್ತು. ಕರ್ನಾಟಕದ ರಾಜಕೀಯ. ಸಾಮಾಜಿಕ, ಧಾರ್ಮಿಕ ಜೀವನದ ನಿರೂಪಣೆಗೆ ಭಾಷೆ. ಶಾಸನಗಳು ಆಕರಗಳಾಗಿ ರೂಪುಗೊಂಡಿರುವ ಬಗೆ ಯಾವುದು ಎನ್ನುವುದೂ ಕೂಡ ಇಲ್ಲಿ ಸೂಚಿತ ವಾಗುವುದಿಲ್ಲ. ಹೀಗೆ ಪ್ರತ್ಯೇಕ ಬರವಣಿಗೆಗಳಾಗಿಯೇ ಈ ಲೇಖನಗಳನ್ನು ನೋಡ ಬೇಕಾದ ಸಂದರ್ಭ ಇಲ್ಲಿ ಬಂದೊದಗಿದೆ. ಆದ್ದರಿಂದ ಲೇಖಕರ ಪ್ರತಿಭೆ, ಬರವಣಿಗೆಯ ವಿಶಿಷ್ಟತೆಯನ್ನು ಪ್ರತ್ಯೇಕವಾಗಿಯೇ ಇಲ್ಲಿ ನೋಡಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕೆ. ಅನಂತರಾಮು ಅವರ 'ಕನ್ನಡ ಭಾಷಾಸ್ವರೂಪ' ಎನ್ನುವ ಲೇಖನ, ಕುಮಾರವ್ಯಾಸನನ್ನು ಕುರಿತ ವೆಂಕಟಾಚಲಶಾಸ್ತ್ರಿಗಳ ಲೇಖನ-ಇವು ಗಮನಿಸತಕ್ಕವು ಗಳಾಗಿ ತೋರುತ್ತವೆ. ಕನ್ನಡ ಕವಿ, ಮತ್ತು ಕೃತಿಗಳನ್ನು ಕುರಿತ ಬಹುಪಾಲು ಲೇಖನ ಗಳು ಪ್ರಾಥಮಿಕ ಪರಿಚಯ, ಸ್ಥೂಲವಾದ ವಿಮರ್ಶೆಯ ನೆಲೆಗೆ ಉಳಿದುಬಿಟ್ಟಿವೆ.

೦ ೦ ೦ ೦ ೦ ೦

(ಸಾಹಿತ್ಯ ತತ್ತ್ವ ಹಾಗೂ ಆಧುನಿಕ ಕೃತಿ ವಿಮರ್ಶೆ)

**ಕೆ. ವಿ. ನಾರಾಯಣ**

ಕುವೆಂಪು ಕಾವ್ಯ ಮೀಮಾಂಸೆ : ಸಿ.ಪಿ.ಕೆ.

'ಈ ಪುಸ್ತಿಕೆಯಲ್ಲಿ ಎರಡು ಲೇಖನಗಳಿವೆ ; ಒಂದು ಕುವೆಂಪು ಅವರ ಕಾವ್ಯ ಮೀಮಾಂಸೆಯ ಸ್ವರೂಪ, ವೈಶಿಷ್ಟ್ಯ, ಕೊಡುಗೆಗಳ ಒಟ್ಟು ನೋಟ ; ಮತ್ತೊಂದು ನಿರ್ದಿಷ್ಟವಾದ ಅವರ 'ರಸೋ ವೈ ಸಃ' ಎಂಬ ಮಹತ್ವದ ಕೃತಿಯ ಸವಿವರ

ಪರಿಶೀಲನ. ಕುವೆಂಪು ಅವರ ಕಾವ್ಯಮೀಮಾಂಸೆಯ ವಿಚಾರಗಳು ದೇಶೀಯ ಹಾಗೂ ಪಾಶ್ಚಾತ್ಯ ಚಿಂತನೆಗಳ ಉಚಿತ ಸಂಗಮವೆಂದೂ, ಯಾವುದು ಉಪಾದೇಯವೋ ಅದನ್ನು ಅವರು ಯೋಗ್ಯ ರೀತಿಯಲ್ಲಿ ತಮ್ಮ ಮೀಮಾಂಸೆಯ ಚೌಕಟ್ಟಿನಲ್ಲಿ ಅಳವಡಿಸಿ ಕೊಂಡಿದ್ದಾರೆಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ಅಲ್ಲದೆ ತಮ್ಮ ವಿಚಾರ ಗಳಿಗಾಗಿ ಅವರು ಭಾರತೀಯ ದರ್ಶನಗಳನ್ನೂ ಕೂಡ ಅವಲಂಬಿಸಿರುವುದನ್ನು ಗುರುತಿಸಿದ್ದಾರೆ. ಆದರೆ ಪಾಶ್ಚಾತ್ಯ ಕಾವ್ಯ ಮೀಮಾಂಸೆಯ ವಿಚಾರಗಳನ್ನು ಪಡೆಯು ವಾಗ ಅವುಗಳಿಗೆ ಹಿನ್ನೆಲೆಯಾಗಿದ್ದ ವಿವಿಧ ತಾತ್ತ್ವಿಕ ಚೌಕಟ್ಟುಗಳ ಬಗೆಗೆ ಕುವೆಂಪು ಯಾವ ಬಗೆಯ ದೃಷ್ಟಿಯನ್ನು ತಳೆದಿದ್ದರು ಎಂಬುದನ್ನು ಗಮನಿಸಿಲ್ಲ. ಏಕೆಂದರೆ ಕೆಲವೊಮ್ಮೆ ಪಾಶ್ಚಾತ್ಯ ಚಿಂತನೆಗಳು ಕ್ರೈಸ್ತಧರ್ಮದ ಹಿನ್ನೆಲೆಯಿಂದ ರೂಪು ಗೊಂಡಿರುವುದರಿಂದ ಅವು ಕುಬ್ಜವಾಗುವುವೆಂದು ಕುವೆಂಪು ಅವರು ಹೇಳಿರು ವುದುಂಟು. ಅದೇ ಬಗೆಯ ಒಂದು ಮಾತನ್ನು ಈ ಪುಸ್ತಕದಲ್ಲೂ ಒಂದೆಡೆ ಗುರುತಿಸ ಲಾಗಿದೆ. (ಪು. 6).

ಕುವೆಂಪು ಅವರ ಕಾವ್ಯ ಮೀಮಾಂಸೆಯನ್ನು ದರ್ಶನ, ಪೂರ್ಣದೃಷ್ಟಿ ಮತ್ತು ಪ್ರತಿಮೆ ಎಂಬ ಮೂರು ಮಾತುಗಳಲ್ಲಿ ಸಂಗ್ರಹಿಸಬಹುದೆಂಬ ತಮ್ಮ ವಿಚಾರಕ್ಕೆ ತಕ್ಕಂತೆ ವಿಚಾರಗಳನ್ನು ಅಳವಡಿಸಿದ್ದಾರೆ. ಕುವೆಂಪು ಅವರ ಬರಹಗಳನ್ನು ಆಧರಿಸಿ ಈ ಮೂರು ಪರಿಕಲ್ಪನೆಗಳನ್ನು ಕುರಿತಂತೆ ಕುವೆಂಪು ವ್ಯಕ್ತ ಪಡಿಸುವ ನಿಲುವುಗಳನ್ನು, ಅವುಗಳ ಉಪಯುಕ್ತತೆಗಳನ್ನು ವಿವರಿಸಲಾಗಿದೆ.

ಎರಡನೆಯ ಭಾಗದಲ್ಲಿ 'ರಸೋ ವೈ ಸಃ' ಕೃತಿಯ ಒಂದೊಂದು ಲೇಖನವನ್ನೂ ತೆಗೆದುಕೊಂಡು, ಆಯಾ ಲೇಖನದಲ್ಲಿ ಮಂಡಿತವಾದ ವಿಚಾರಗಳನ್ನು ಸಂಗ್ರಹಿಸಿ, ಆ ವಿಚಾರಗಳ ಮಹತ್ವವನ್ನು ಗುರುತಿಸುವ ಯತ್ನವನ್ನು ಮಾಡಲಾಗಿದೆ.

ಪುತಿನ ಕಾವ್ಯಮೀಮಾಂಸೆ : ಸಿ.ಪಿ.ಕೆ.

ಪುತಿನ ಅವರ 'ಕಾವ್ಯ ಕುತೂಹಲ' ಮತ್ತು 'ರಸಪ್ರಜ್ಞೆ' ಎಂಬ ಕಾವ್ಯಮೀಮಾಂಸೆ ಸಂಬಂಧಿಸಿದ ವಿಚಾರಗಳಿರುವ ಕೃತಿಗಳ ಸ್ಥೂಲ ವಿವೇಚನೆ ಈ ಪುಸ್ತಿಕೆಯ ಉದ್ದೇಶ. ಪುತಿನ ಅವರ ಕಾವ್ಯ ಚಿಂತನವನ್ನು ಅವರ ಮಾತುಗಳಲ್ಲಿ ಪರಿಚಯಿಸುತ್ತಲೆ, ಅದರ ವೈಶಿಷ್ಟ್ಯಗಳನ್ನು ಎತ್ತಿ ತೋರುವ ಕೆಲಸ ಇಲ್ಲಿ ನಡೆದಿದೆ.

ಪುತಿನ ಅವರ ಕಾವ್ಯ ಚಿಂತನೆಗಳ ಮೇಲೆ ಪಾಶ್ಚಾತ್ಯ ಚಿಂತನೆಗಳ ಪ್ರಭಾವ ಇಲ್ಲವೆನ್ನುವ ನಿಲುವನ್ನು ಹೊಂದಿರುವ ಲೇಖಕರು ಆ ವಿಚಾರಗಳು ಭಾರತೀಯ ದರ್ಶನ ಹಾಗೂ ಕಾವ್ಯ ಚಿಂತನೆಗಳಿಂದ ರೂಪುಗೊಂಡು ಅದನ್ನು ಆಧುನಿಕ ಸಂದರ್ಭ ದಲ್ಲಿ ಪುತಿನ ಅವರು ರೂಪಿಸುತ್ತಿರುವ ಬಗೆಯನ್ನು ವಿವರಿಸಿದ್ದಾರೆ. ಪುತಿನ ಅವರ

ಕಾವ್ಯಚಿಂತನೆಯ ಒಟ್ಟು ಸಾರವನ್ನು ರಸಸಮರ್ಥನೆ ಎಂದು ಗುರುತಿಸಿ ಅದಕ್ಕನು ಗುಣವಾಗಿ ಅವರ ವಿಚಾರಗಳನ್ನು ನಿರೂಪಿಸಿದ್ದಾರೆ. ಪ್ರತಿನ ಅವರ ವಿಚಾರಗಳನ್ನು ಸಂಗ್ರಹರೂಪದಲ್ಲಿ ನಿರೂಪಿಸುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ, ಆದರೆ ಆ ವಿಚಾರಗಳ ವೈಶಿಷ್ಟ್ಯ ಹಾಗೂ ಅನನ್ಯತೆಗಳು ಮಾತ್ರ ಈ ಪುಸ್ತಕದಲ್ಲಿ ಚರ್ಚಿತವಾಗಿಲ್ಲ.

ಆಲೋಕ : ವಿ. ಎಂ. ಇನಾಂದಾರ್

ಏಳು ಲೇಖನಗಳಿರುವ ಈ ಸಂಕಲನದಲ್ಲಿ ಆರು ಕಾದಂಬರಿ ಮತ್ತು ಕಾದಂಬರಿ ಕಾರರನ್ನು ಕುರಿತು ಇವೆ. ಕೊನೆಯ ಬರೆಹ, 'ಸ್ವಾತಂತ್ರ್ಯೋತ್ತರ ಕಾಲು ಶತಮಾನ—ಒಂದು ನೋಟ' ಎಂಬುದು. ಕನ್ನಡ 'ಕಾದಂಬರಿಯ ಹಿನ್ನೆಲೆ' ಲೇಖನದಲ್ಲಿ ಚಾರಿತ್ರಿಕ ವಾದ ಮಾಹಿತಿಯನ್ನು ನೀಡಲಾಗಿದೆ. ಅಲ್ಲಲ್ಲಿ ಕಳೆದ ಶತಮಾನದ ಕಾದಂಬರಿ ಕೃಷಿ ಯನ್ನು ಸಮೀಕ್ಷಿಸುವ ನೋಟಗಳೂ ಸಿಗುತ್ತವೆ. ಕನ್ನಡದ ಮೊದಲ ಮುಖ್ಯ ಕಾದಂಬರಿಗಳನ್ನು ಕುರಿತಂತೆ ನೀಡಲಾಗಿರುವ ವಿಮರ್ಶೆಯು ಅಷ್ಟೇನೂ ಒಳನೋಟ ಗಳಿಂದ ಕೂಡಿಲ್ಲ. 'ಗಳಗನಾಥರ ಕಾರ್ಯ'ದಲ್ಲಿ ಪರಿಚಯ ಮುಖ್ಯವಾಗಿದೆ. ಇದೇ ಮಾತು 'ಶರಚ್ಚಂದ್ರ'ಲೇಖನಕ್ಕೂ ಅನ್ವಯಿಸುತ್ತದೆ. ಮಾಸ್ತಿಯವರ ಎರಡು ಕಾದಂಬರಿ ಗಳನ್ನು ಕುರಿತು ಸವಿವರವಾದ ವಿಮರ್ಶೆಯು ಎರಡು ಲೇಖನಗಳಲ್ಲಿ ಹರಡಿದೆ. ಎರಡೂ ಕಾದಂಬರಿಗಳು ಮುಖ್ಯ ನೆಲೆಗಳನ್ನು ಆ ಲೇಖನಗಳಲ್ಲಿ ಗುರುತಿಸಲು ಯತ್ನಿ ಸಿದ್ದಾರೆ. ಆದರೂ ಇಲ್ಲಿವರೆಗೆ ಬಂದ ವಿಮರ್ಶೆಗಳ ಮುಂದುವರಿಕೆಯಾಗಿ ಮಾತ್ರ ಕಾಣುತ್ತದೆ. 'ಕಾದಂಬರಿಕಾರನ ದೃಷ್ಟಿಕೋನ' ಎಂಬುದು ಇಲ್ಲಿರುವ ಮೀಮಾಂಸಾ ಪ್ರಧಾನ ಲೇಖನವಾಗಿದೆ. ಕನ್ನಡ ಕಾದಂಬರಿಗಳಿಗೆ ಸಂಬಂಧಿಸಿದಂತೆ ಅನ್ವಯವು ಕಂಡುಬರುವುದಿಲ್ಲ. ಒಟ್ಟಾರೆಯಾಗಿ ಸಾಮಗ್ರಿಯನ್ನು ಸಂಕಲನಗೊಳಿಸಿಕೊಂಡಿದೆ. ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯವನ್ನು ಕುರಿತ ಲೇಖನದಲ್ಲಿ ಆ ಪೂರ್ವದ ಸಾಹಿತ್ಯ ದಿಂದ ಇದು ಹೇಗೆ ಭಿನ್ನ ; ಹಾಗೂ ಸಾಧನೆಯ ದೃಷ್ಟಿಯಿಂದ ಇದರ ಸ್ಥಾನವೇನು ಎಂಬ ನೋಟವೇ ಅಲ್ಲದೆ ಅದಕ್ಕೆ ಕಾರಣಗಳನ್ನೂ ಕೂಡ ಲೇಖಕರು ಕಾಣಲು ಯತ್ನಿ ಸಿದ್ದಾರೆ. ಇದು ನಮ್ಮ ಆಲೋಚನಾಕ್ರಮದ ಒಂದು ನಿಟ್ಟನ್ನು ತೋರಿಸಬಲ್ಲದು.

ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು : ಜಿ. ಎಸ್. ಆಮೂರ

ಕನ್ನಡದ ಕಥಾ ಸಾಹಿತ್ಯವನ್ನು ಕುರಿತಂತೆ ಬರೆದ ಹನ್ನೆರಡು ಲೇಖನಗಳು ಈ ಸಂಕಲನದಲ್ಲಿವೆ. ಶಿವರಾಮ ಕಾರಂತರ 'ಮರಳಿ ಮಣ್ಣಿಗೆ' 'ಸರಸಮ್ಮನ ಸಮಾಧಿ', 'ಅಳಿದ ಮೇಲೆ' ಮತ್ತು 'ಬೆಟ್ಟದ ಜೀವ' ಕಾದಂಬರಿಗಳನ್ನು ಕುರಿತ ಬರೆಹಗಳಿವೆ. ಹಾಗೆಯೇ 'ಗ್ರಾಮಾಯಣ', 'ವಂಶವೃಕ್ಷ', 'ಹಳದಿ ಮೀನು', 'ಸಂಸ್ಕಾರ' ಮತ್ತು

'ಮುಕ್ತಿ' ಕಾದಂಬರಿಗಳನ್ನು ಕುರಿತ ವಿಮರ್ಶಾ ಲೇಖನಗಳು ಇಲ್ಲಿವೆ. ಯಶವಂತ ಚಿತ್ತಾಲ ಮತ್ತು ಶಾಂತಿನಾಥ ದೇಸಾಯಿ ಇವರ ಕತೆಗಳನ್ನು ಕುರಿತು ಮತ್ತು ಅನಂತ ಮೂರ್ತಿಯವರ 'ಮೌನಿ' ಕತೆಯನ್ನು ಕುರಿತು ಬರೆದ ಲೇಖನಗಳು ಸಣ್ಣಕತೆಯ ವಿಮರ್ಶೆಯ ವಲಯಕ್ಕೆ ಸೇರುತ್ತವೆ.

ಆಮೂರರು ಬರೆದ ಈ ವಿಮರ್ಶಾ ಲೇಖನಗಳಲ್ಲಿ ಆಯಾ ಲೇಖಗಳನ ಸಂದರ್ಭದಲ್ಲಿ ತಕ್ಕ ವಿಮರ್ಶಾ ಮಾನದಂಡಗಳನ್ನು ಆಯಲು ಹೊರಡದೆ ಬಹು ಪಾಲು ಎಲ್ಲ ವಿಮರ್ಶೆಗಳಿಗೂ ಹಿನ್ನೆಲೆಯಾಗಿ ಉಳ್ಳ ನೆಲೆಯೊಂದನ್ನು ಆಧರಿಸು ವುದನ್ನು ನಾವು ಗುರುತಿಸಬಹುದು. ಆದರೆ ಆ ಮಾನದಂಡಗಳನ್ನು ಅನ್ವಯಿ ನಡೆಸುವ ವಿಮರ್ಶೆಯು ಆಯಾಕೃತಿಗೆ ಸಂಬಂಧಿಸಿದಂತೆ ಇರುವುದೇ ಹೊರತು ಆಯಾ ಲೇಖಕರ ಬಗೆಗೆ, ಅವರ ಕೃತಿಗಳ ಬಗೆಗೆ ಸಾಮಾನ್ಯೀಕರಿಸಿದ ನಿಲುವು ಗಳನ್ನು ತಳೆಯಲು ಅನುವಾಗುವುದಿಲ್ಲ. ಆದ್ದರಿಂದ ಆಮೂರರ ವಿಮರ್ಶೆಯು ಬಹುಮಟ್ಟಿಗೆ ಕೃತಿನಿಷ್ಠ ಎನ್ನಬಹುದು. ಹೀಗೆನ್ನುವಾಗಲೂ ಅವರು ರೂಪಿಸಿಕೊಂಡ ವಿಮರ್ಶಾ ಮಾನದಂಡಗಳಿಗೆ ಅವರು ಕನ್ನಡ ಕಥಾ ಪರಂಪರೆಯ ಅಧ್ಯಯನವನ್ನು ಅವಲಂಬಿಸಿರುವುದನ್ನು ಮರೆಯುವಂತಿಲ್ಲ.

ಕೃತಿಯ ಬಂಧ, ತಂತ್ರ, ಸಂವಿಧಾನಗಳಿಗೂ ಅದು ಮಂಡಿಸುತ್ತಿರುವ ಆಶಯ ವಸ್ತು, ಜೀವನದೃಷ್ಟಿ ಇವುಗಳಿಗೂ ಇರುವ ಸಂಬಂಧವನ್ನು ಗುರುತಿಸುವುದೇ ಆಮೂರರ ವಿಮರ್ಶಾ ಲೇಖನಗಳ ಮುಖ್ಯ ಗುರಿ. ಈ ಸಂಬಂಧ ವಿಶ್ಲೇಷಣೆಯಲ್ಲಿ ಲೇಖಕರು ಯಾವುದೇ ಪೂರ್ವ ನಿಶ್ಚಿತ ಮಾದರಿಗಳನ್ನು ಹೊಂದಿರುವುದಿಲ್ಲ. ಇದರಿಂದಾಗಿ ಕನ್ನಡ ಕಾದಂಬರಿಗಳಲ್ಲೇ ವಿನ್ಯಾಸ ತಳೆಯುತ್ತಿರುವ ರಾಚನಿಕ ಶಿಲ್ಪ ವೊಂದರ ಗ್ರಹಿಕೆ ಅವರಿಗೆ ಸಾಧ್ಯವಾಗಿದೆ. ಇದು ಈ ವಿಮರ್ಶೆಗಳ ಒಂದು ಮುಖ್ಯ ಸಾಧನೆಯಾಗಿದೆ. ಹಾಗೂ ಕಾದಂಬರಿ ಪರಂಪರೆಯಲ್ಲಿ ಕಂಡು ಬರುವ ಪಲ್ಲಟಗಳನ್ನು, ಈ ಪರಂಪರೆಯ ಬೆಳವಣಿಗೆಯ ಹಂತಗಳೆಂಬ ಬಗೆಯಲ್ಲಿ ಕಾಣುವುದು ಕೂಡ ಸಾಧ್ಯ ವಾಗುತ್ತದೆ. ಇವೆಲ್ಲ ಸಂಗತಿಗಳೂ ಲೇಖನಗಳಲ್ಲಿ ನೇರವಾಗಿ ನಿರೂಪಿತವಾಗಿಲ್ಲದಿದ್ದರೂ ಓದುವವರಿಗೆ ಅದರ ಸೂಚನೆಗಳು ದೊರಕುತ್ತವೆ.

'ಸರಸಮ್ಮನ ಸಮಾಧಿ'ಯನ್ನು ಕುರಿತ ವಿಮರ್ಶೆಯಲ್ಲಿ ಬೇರೆ ಬೇರೆ ಜ್ಞಾನಶಾಖೆಗಳ ನೆರವು ಪಡೆದು ಕೃತಿ ವಿಮರ್ಶೆಗೆ ಬೇಕಾದ ತಾತ್ತ್ವಿಕ ಚೌಕಟ್ಟುಗಳನ್ನು ರೂಪಿಸಿಕೊಳ್ಳುವ ಯತ್ನವಿದೆ. ಇತರ ವಿಮರ್ಶಾ ಲೇಖನಗಳಿಂದ ಇದು ಭಿನ್ನವಾಗುವ ನೆಲೆ ಇಲ್ಲಿಯೇ ರೂಪುಗೊಳ್ಳುವುದು. ಇದರಿಂದ ಆ ಕೃತಿಯ ವಿಮರ್ಶಾ ಪರಂಪರೆಗೆ ಬೆಲೆಯುಳ್ಳ ಮುಂದುವರಿಕೆಯನ್ನು ಒದಗಿಸಿದಂತಾಗಿದೆ.

ಸಾಹಿತ್ಯ, ಸೃಜನಶೀಲತೆ ಮತ್ತು ನಾನು : ಯಶವಂತ ಚಿತ್ತಾಲ

ಈ ಸಂಕಲನದಲ್ಲಿ ಎರಡು ಭಾಗಗಳಿವೆ. ಮೊದಲ ಭಾಗದಲ್ಲಿ ಆರು ಟಿಪ್ಪಣಿಗಳಿವೆ. ಇವುಗಳಲ್ಲಿ ಸೃಜನಶೀಲತೆಯ ಗಳಿಗೆಗಳ ಹಿಂದಿರುವ ಜೀವನ ಸಮ್ಮುಖ ಬೇರುಗಳ ಅನ್ವೇಷಣೆ ಇದೆ. ಎರಡನೆಯ ಭಾಗದಲ್ಲಿ ಎಂಟು ಟಿಪ್ಪಣಿಗಳಿವೆ. ಈ ಟಿಪ್ಪಣಿಗಳು ಸಾಹಿತ್ಯವನ್ನು ಕುರಿತ ಕೆಲವು ತಾತ್ತ್ವಿಕ ಚರ್ಚೆಗಳನ್ನು ಹಾಗೂ ಕೃತಿ ವಿಮರ್ಶೆಯನ್ನೂ ಒಳಗೊಂಡಿವೆ.

ಸೃಜನಶೀಲ ಲೇಖಕರೊಬ್ಬರು, ಕೃತಿ ರಚನೆಯ ಹಿಂದಿರುವ ಪ್ರೇರಣೆಗಳನ್ನು ವಿವೇಚಿಸುವ ಸಂದರ್ಭಗಳು ಕನ್ನಡದಲ್ಲಿ ತೀರಾ ಕಡಿಮೆ. ಆ ಬಗೆಯ ಸಾಹಿತ್ಯಕ್ಕೆ ಇಲ್ಲಿನ ಟಿಪ್ಪಣಿಗಳು ಯೋಗ್ಯ ಸೇರ್ಪಡೆ. ಈ ಟಿಪ್ಪಣಿಗಳಲ್ಲಿ ಲೇಖಕರು ಮುಖ್ಯವಾಗಿ ಸಾಹಿತ್ಯದ ಜೀವನ ಸಂಯೋಜನಾ ಸಾಮರ್ಥ್ಯವನ್ನು. ಅದರ ಸಾವಯುವ ಸಂಘಟನಾ ನೆಲೆಗಳನ್ನು. ಅನೂಹ್ಯ ಸಂಬಂಧ ರಚನಾ ಕೌಶಲವನ್ನು ಸಂಬಂಧರಹಿತ ಘಟನೆಗಳ ಮುಖಾಮುಖಿಯಲ್ಲಿ ಹೊಸ ಸತ್ಯಗಳ ಪೊಳಹುಗಳನ್ನು ನೀಡುವ ಶಕ್ತಿಯನ್ನು ವಿವರಿಸಿದ್ದಾರೆ. ಈ ವಿವರಣೆಯೂ ರೋಚಕವೂ ಹೃದ್ಯವೂ ಆಗುವಂತೆ ನೋಡಿ ಕೊಂಡಿದ್ದಾರೆ. ಸಾಹಿತ್ಯ ರಚನೆ ಕೇವಲ ಬುದ್ಧಿಪ್ರಧಾನ ಚಟುವಟಿಕೆ ಎಂಬುದು ಹೊರ ಕವಚ ಮಾತ್ರವಾಗಿದ್ದು ಒಳಗೆ ಅಡಗಿರುವ ತರ್ಕದೂರ ಸಂಗತಿಗಳ ಪರಿಚಯ ಇಲ್ಲಿ ಸಾಧ್ಯ. ಆದರೆ ಈ ಅರಿವು, ಈ ಹಿಮ್ಮೊಗ ಪಯಣವೂ ಕೂಡ ಕೇವಲ ಹೊಳಹು ಮಾತ್ರವಾಗಿರದೆ ಬುದ್ಧಿಪೂರ್ವಕವಾದ ಗ್ರಹಿಕೆಯೇ ಅಲ್ಲವೆ ಎಂಬೊಂದು ಸಂದೇಹ ಹಾಗೆಯೇ ಉಳಿಯುತ್ತದೆ.

ಇಲ್ಲಿನ ಸಾಹಿತ್ಯ ಮೀಮಾಂಸೆಯ ಟಿಪ್ಪಣಿಗಳಲ್ಲಿಯೂ ಕೆಲಸ ಮಾಡುವ ಮನಸ್ಸು ಸೃಜನ ಶೀಲ ಲೇಖಕನದ್ದೇ ಆಗಿದೆ. ಕೃತಿ ರೂಪ ತಳೆಯುವ ಹಿಂದಿನ ಪ್ರಕ್ರಿಯೆಗಳನ್ನು, ಪ್ರೇರಣೆಗಳನ್ನು ಗುರುತಿಸುವ ಯತ್ನಕ್ಕೆ ಒತ್ತು ಬಿದ್ದಿದೆ. 'ಕಥಾ ಸಾಹಿತ್ಯದಲ್ಲಿ ತಂತ್ರ' 'ಸಾಹಿತ್ಯ ಮತ್ತು ಸಾಮಾಜಿಕ ಪ್ರಜ್ಞೆ' ಕುರಿತ ಎರಡು ಟಿಪ್ಪಣಿಗಳು ಮೇಲಿನ ಮಾತಿಗೆ ಪುರಾವೆಯಾಗಿವೆ. ಇದರಿಂದ ಕೃತಿ ವಿಮರ್ಶೆಗೆ ಬೇಕಾದ ಕೆಲವಾದರೂ ಒಳನೋಟ ಗಳು ದೊರಕುತ್ತವೆ. ಕೃತಿಯನ್ನು ಗ್ರಹಿಸುವಲ್ಲಿ ಲೇಖಕರು ಅನ್ಯ ಜ್ಞಾನ ಶಿಸ್ತುಗಳ ಚಿಂತನಾಕ್ರಮವನ್ನೂ ಹಾಗೂ ವಿಚಾರ ಪ್ರಣಾಲಿಯನ್ನು ಯೋಗ್ಯವೆಂಬ ಮಾದರಿ ಯಲ್ಲಿ ಬಳಸುತ್ತಾರೆ. ಅವರು ಬಳಸುವ ವೈಚಾರಿಕ ನೆಲೆಗಳೂ ಗತಿಶೀಲವಾಗಿದ್ದು ಸತ್ಯದ ಆತ್ಯಂತಿಕ ಸ್ವರೂಪವನ್ನು ಹೇಳುವುದಿಲ್ಲವಾದರೂ ಜ್ಞಾನಾವರಣದ ಈಗಿನ ನೆಲೆಗಳನ್ನು ಬಳಸುವುದು ಸಾಧುವಾದುದೇ ಸರಿ. ಆ ಮೂಲಕವಾದರೂ ಮತ್ತಷ್ಟು ವಿಚಾರಗಳು ಕನ್ನಡ ವಿಮರ್ಶೆಗೆ ಬರಲು ಈ ಟಿಪ್ಪಣಿಗಳು ಚೋದನೆಯನ್ನು ನೀಡ ಬಹುದು.

ಈ ಟಿಪ್ಪಣಿಗಳು ಇನ್ನೂ ಒಂದು ಕಾರಣದಿಂದ ಮುಖ್ಯವಾಗುತ್ತವೆ ; ಅದೆಂದರೆ ಸಾಮಾನ್ಯವಾಗಿ ಸಾಹಿತ್ಯದ ಅಧ್ಯಯನ ಅನುಸರಿಸುವ ನೆಲೆಗಳಿಗಿಂತ ಭಿನ್ನವಾದ ಆದರೆ ಅಧ್ಯಯನಕ್ಕೆ ಪೂರಕವಾಗಿದ್ದು ಅದರ ವ್ಯಾಪ್ತಿಯನ್ನು ಹೆಚ್ಚಿಸಬಲ್ಲ ದೃಷ್ಟಿಕೋನಗಳು ಇಲ್ಲಿ ಲಭಿಸುತ್ತವೆ. ಇದರಿಂದ ಸಾಹಿತ್ಯ ರಚನೆ ಮತ್ತು ಅದರ ಸಂವಹನವೆಂಬ ಚಟುವಟಿಕೆಯನ್ನು ಒಟ್ಟಾರೆ ಮಾನವನ ಕ್ರಿಯಾವರ್ತಗಳ ಚೌಕಟ್ಟಿನಲ್ಲಿ ಇರಿಸಿ ವಿವೇಚಿಸುವುದು ಸಾಧ್ಯವಾಗುತ್ತದೆ. ಹೀಗೆಂದ ಮಾತ್ರಕ್ಕೆ ಇಲ್ಲಿನ ನಿರ್ಣಯಗಳು ಈವರೆಗಿನ ಸಾಹಿತ್ಯದ ಅಧ್ಯಯನ ಚಟುವಟಿಕೆಗಳಲ್ಲಿ ಗ್ರಹಿಸದೇ ಉಳಿದದ್ದು ಎಂದೇನಲ್ಲವಾದರೂ, ಈ ನಿರ್ಣಯಗಳನ್ನು ತಲುಪಲು ಇಲ್ಲಿ ಅನುಸರಿಲಾದ ಮಾರ್ಗಗಳು ಮಾತ್ರ ಹೊಸವು ಎಂಬುದಂತೂ ನಿಜ. ಈ ದೃಷ್ಟಿಯಿಂದ ಈ ಟಿಪ್ಪಣಿಗಳು ಕನ್ನಡ ವಿಮರ್ಶೆ ಪಡೆದುಕೊಳ್ಳುತ್ತಿರುವ ಪ್ರಬುದ್ಧತೆಯನ್ನು ಸಾಧಿಸಿ ತೋರಿಸುವ ನೆಲೆಯಲ್ಲಿವೆ.

ಸಾಹಿತ್ಯ ಮತ್ತು ಅಭಿರುಚಿ : ಶಂಕರ ಮೊಕಾಶಿ-ಪುಣೇಕರ

ಈ ಸಂಕಲನದಲ್ಲಿ ಹತ್ತು ಲೇಖನಗಳಿವೆ. ಕೃತಿ ವಿಮರ್ಶೆ, ಸಾಹಿತ್ಯ ಮೀಮಾಂಸೆ, ರಂಗಭೂಮಿ ಹಾಗೂ ಸಾಹಿತ್ಯ ಸಮೀಕ್ಷೆ ಹೀಗೆ ಹಲವು ವಲಯಗಳಿಗೆ ಈ ಲೇಖನಗಳು ಹಂಚಿಹೋಗುತ್ತವೆ. 'ಶಾಶ್ವತ ಸಾಹಿತ್ಯ' ತಾತ್ತ್ವಿಕವಾದ ನಿಲುವುಗಳ ಮಂಡನೆಗೆ ಮೀಸಲಾಗಿದೆ. ಅದರ ಮೂಲಕ ಮೊಕಾಶಿಯವರ ಹಲವು ವಿಮರ್ಶಾ ಸೂತ್ರಗಳ ಎಳೆಗಳನ್ನೂ ಹೆಕ್ಕಿ ತೆಗೆಯಬಹುದು. ಮೂರು ಲೇಖನಗಳಲ್ಲಿ ಹೊಸಗನ್ನಡ ಕಾವ್ಯದ ಕೆಲವು ಮುಖ್ಯ ನೆಲೆಗಳನ್ನು, ಆ ಬಗೆಗೆ ನಡೆದಿರುವ ವಿಮರ್ಶೆಯಲ್ಲಿ ತಾವು ಕಂಡಿರುವ ಟೊಳ್ಳುಗಳನ್ನು ಲೇಖಕರು ಗುರುತಿಸುತ್ತಾರೆ. ಬೇಂದ್ರೆಯವರ ಕಾವ್ಯ, ಕಾರಂತರ ಕಾದಂಬರಿಗಳು, ಜಡಭರತರ ಮೂಕಬಲಿ ಹಾಗೂ ಬೇಂದ್ರೆಯವರ ಒಂದು ಕವಿತೆ ('ಓ ತಾಯಿ ಮಾಯಿ') ಎಂಬಿವೇ ವಿಷಯಗಳನ್ನು ಕುರಿತ ನಾಲ್ಕು ಲೇಖನಗಳಿವೆ. ಕನ್ನಡ ವಿಮರ್ಶೆಯ ಹಿಂದಿನ ಪಾಶ್ಚಾತ್ಯ ವಿಮರ್ಶಾ ಪ್ರೇರಣೆಗಳನ್ನು ಕುರಿತ ಒಂದು ಲೇಖನವಿದೆ.

ನವ್ಯವಿಮರ್ಶೆಯು ಸ್ವೀಕರಿಸಿದ ವಿಮರ್ಶಾ ನೆಲೆಗಟ್ಟುಗಳನ್ನು ಎಡೆಬಿಡದೆ, ತಮ್ಮದೇ ಆದ ಅನನುಕರಣೀಯ ಬಗೆಯಲ್ಲಿ, ಧಿಕ್ಕರಿಸುತ್ತ ಬಂದಿರುವ ಮೊಕಾಶಿಯವರ ವಿಚಾರಗಳು ಹರಿಯುವ ದಿಕ್ಕನ್ನು ಇಲ್ಲಿನ ಲೇಖನಗಳು ತೋರಿಸಿಕೊಡುತ್ತವೆ. ಮೊಕಾಶಿಯವರು ಪೂರ್ವ ಪಕ್ಷವನ್ನು ಖಂಡಿಸಲು ತಮ್ಮ ಲೇಖನದ ಬಹುಪಾಲನ್ನು ತೊಡಗಿಸುವ ಬಗೆಯಿಂದಾಗಿ ಕೆಲವೊಮ್ಮೆ ಒಟ್ಟು ನಿರೂಪಣೆಯಲ್ಲಿ ಏರುಪೇರುಗಳು ಕಂಡು ಬರುವುದುಂಟು. ವಿಮರ್ಶೆಯು ಕೇವಲ ಶ್ರೇಷ್ಠವಾದುದರ ವ್ಯಾಖ್ಯಾನದಲ್ಲಿ ಮಾತ್ರ ತೊಡಗಬಾರದೆಂಬ ಮುಖ್ಯ ನಿಲುವಿನಿಂದ ಹೊರಡುವ ಲೇಖಕರಿಗೆ ಶ್ರೇಷ್ಠವಾದುದು ಯಾವುದು ಎಂಬ ಬಗ್ಗೆ ಅವರದೇ ಆದ ಚಿಂತನೆಗಳು ಇರುವುದನ್ನು ಇಲ್ಲಿನ ಲೇಖನಗಳಲ್ಲಿ ಗುರುತಿಸಬಹುದು.

ಹೀಗೆ, ಬಳಕೆಯಲ್ಲಿರುವ ವಿಮರ್ಶೆಯಲ್ಲಿ ತಾವು ಗುರುತಿಸುವ ವಿಕ್ಷಿಪ್ತತೆಗಳನ್ನು ಚರ್ಚಿಸುವ ಲೇಖನಗಳನ್ನು ಬಿಟ್ಟರೆ, ಉಳಿದ ಕೃತಿ ಸಂಬಂಧಿ ವಿಮರ್ಶಾ ಲೇಖನಗಳಲ್ಲಿ, ಲೇಖಕರು ಸಾಕಷ್ಟು ಒಳನೋಟಗಳಿರುವ ನೆಲೆಗಳಿಗೆ ಒಯ್ಯುತ್ತಾರೆ. ಕಾರಂತರ ಕಾದಂಬರಿಗಳ ಕಲಾವಿದ ನಾಯಕರುಗಳ ಬಗೆಗೆ ಅವರು ಎತ್ತಿರುವ ಪ್ರಶ್ನೆ ಯುಕ್ತವಾಗಿದ್ದು, ಇನ್ನಷ್ಟು ಚಿಂತನೆಗಳಿಗೆ ಅನುವುಮಾಡಿಕೊಡಬಲ್ಲುದು. ಬೇಂದ್ರೆಯವರ ಕಾವ್ಯಾಭ್ಯಾಸಕ್ಕೆ ಬೇಕಾದ ರೂಪುರೇಖೆಗಳನ್ನು ನಿರೂಪಿಸುವ ಲೇಖನವು ಮಹತ್ವಾಕಾಂಕ್ಷಿಯಾಗಿದ್ದರೂ, ಪರಿಣಾಮದಲ್ಲಿ, ಮತ್ತಷ್ಟು ಸಂಗತಿಗಳನ್ನು ಲೇಖಕರು ಬೆಳೆಸಿ ವಿವರಿಸಬೇಕೆಂಬ ಅಪೇಕ್ಷೆಯನ್ನು ಉಳಿಸುತ್ತದೆ. 'ಓ ತಾಯಿ ಮಾಯಿ' ಕವನದ ವಿಶ್ಲೇಷಣೆಯು ಕವನವನ್ನು ಕಾರಣ ಮಾಡಿಕೊಂಡು ಸಾಕಷ್ಟು ವಿಷಯಾಂತರಗಳೊಡನೆ ಮುಂದುವರೆಯುತ್ತದೆ.

'ಪ್ರೇಕ್ಷಕ ಮತ್ತು ಕಲಾಭಿರುಚಿ' ಲೇಖನದ ಮೊದಲ ಅರ್ಧ ಯುರೋಪಿನ ರಂಗಭೂಮಿಯನ್ನು ಕುರಿತ ವಿಚಾರಗಳನ್ನು ಮಂಡಿಸಿ ಮುಂದಿನ ಅರ್ಧವು ಪ್ರಚಲಿತ ಕನ್ನಡ ರಂಗಭೂಮಿಯಲ್ಲಿರುವ ಸಮಸ್ಯೆಗಳನ್ನು ಚರ್ಚಿಸುತ್ತದೆ. ಅಮೆಚ್ಯೂರ್ ರಂಗಭೂಮಿಯ ಪ್ರವರ್ತಕರು ವೃತ್ತಿರಂಗಭೂಮಿಯ ಮೇಲೆ ನಡೆಸಿದ ಧಾಳಿಯಿಂದ ಆದ ಅಪಾಯಗಳನ್ನು ಮೊಕಾಶಿಯವರು ಸರಿಯಾಗಿಯೇ ಗುರುತಿಸಿದ್ದಾರೆ. ಆದರೆ ಇದನ್ನು ಕಾರಣ ಮಾಡಿಕೊಂಡು ಅಮೆಚ್ಯೂರ್ ರಂಗವನ್ನೆ ನಿರಾಕರಿಸಲು ಬರುವುದಿಲ್ಲವಷ್ಟೆ. ಮೊಕಾಶಿಯವರು ತಳೆಯುವ ಈ ನಿರಾಕರಣೆಯ ನಿಲುವು ಮಾತ್ರ ಚರ್ಚಾರ್ಹವೆನಿಸುತ್ತದೆ.

ಸಾಹಿತ್ಯ ಮತ್ತು ಪರಂಪರೆ : ಗಿರಡ್ಡಿ ಗೋವಿಂದರಾಜ

ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಹನ್ನೊಂದು ವಿಮರ್ಶಾ ಲೇಖನಗಳು ಇಲ್ಲಿ ಸಂಕಲನಗೊಂಡಿವೆ. ಸಾಹಿತ್ಯದಲ್ಲಿ ಪರಂಪರೆಯನ್ನು ಕುರಿತ ಚರ್ಚೆಯ ವಿವಿಧ ಮುಖಗಳನ್ನು ವಿವೇಚಿಸುವ ಮೂರು ಲೇಖನಗಳಿವೆ. ಕಾವ್ಯ, ಕಾದಂಬರಿ ಮತ್ತು ವಿಮರ್ಶೆಯನ್ನು ಸಮೀಕ್ಷಿಸುವ ಐದು ಲೇಖನಗಳಿವೆ. ಕೃತಿ ವಿಮರ್ಶೆಗಳು ಮೂರು : (ಮೂಕಜ್ಜಿಯ ಕನಸುಗಳು, ಮಾಟಗಾತಿ ಕಥಾ ಸಂಕಲನ ಮತ್ತು ಹಯವದನ).

'ಪರಂಪರೆ ಮತ್ತು ಪ್ರತಿಭೆ (1964) ಎಂಬ ಲೇಖನದ ಉಪಶೀರ್ಷಿಕೆಯೇ ಸೂಚಿಸುವಂತೆ, ಅದು ಟಿ. ಎಸ್. ಎಲಿಯಟ್‌ನ ವಿಚಾರಗಳ ಸಂಗ್ರಹ ಮಂಡನೆಗೆ ಉದ್ದೇಶಿತವಾಗಿದೆ. 'ಸಾಹಿತ್ಯದಲ್ಲಿ ಸಂಪ್ರದಾಯ, ಹೊಸಮಾರ್ಗ ಮತ್ತು ಸಾಹಿತ್ಯ ನಿರ್ಮಿತಿ' (1980) ಮತ್ತು 'ಸಾಹಿತ್ಯ ಮತ್ತು ಪರಂಪರೆ' (1977) ಈ ಎರಡೂ ಲೇಖನಗಳೂ ಸೇರಿ ಒಂದು ತಾತ್ತ್ವಿಕ ಚೌಕಟ್ಟನ್ನು ನಿರ್ಮಿಸಲು ಯೋಜಿಸುತ್ತವೆ. ಲೇಖನಗಳ ಕಾಲಾನುಕ್ರಮಣಿಯನ್ನು ಗಮನಿಸಿದರೆ 'ಪರಂಪರೆ' ಎಂಬ ಮಾತಿನ

ಬದಲು 'ಸಂಪ್ರದಾಯ'ವೆಂಬ ಮಾತನ್ನು ಲೇಖಕರು ಆಯ್ದುಕೊಂಡಿರುವಂತೆ ತೋರುತ್ತದೆ. ಸದ್ಯ ಬಳಕೆಯಲ್ಲಿರುವ ವಿಮರ್ಶಾ ಪರಿಭಾಷೆಯಲ್ಲಿ ಇವೆರಡೂ ಪದಗಳಿಗೆ ನಿರ್ದಿಷ್ಟ ಅರ್ಥವ್ಯತ್ಯಾಸವಿದೆ. Tradition ಎಂಬುದಕ್ಕೆ ಸಂವಾದಿಯಾಗಿ 'ಪರಂಪರೆ' ಎಂಬುದೇ ತಕ್ಕುದು. 'ಸಂಪ್ರದಾಯ'ವು ಸ್ಥಗಿತಗೊಂಡದ್ದನ್ನು ಸೂಚಿಸಲು ಯುಕ್ತ.

ಶ್ರೇಷ್ಠ ಸಾಹಿತ್ಯ ಕೃತಿಯು ಪರಂಪರೆಯೊಡನೆ ನಿಕಟ ಸಂಬಂಧವನ್ನು ಪಡೆದಿರಲೇ ಬೇಕೆಂಬುದು ಅನಿವಾರ್ಯವಾದುದೇನೂ ಅಲ್ಲವೆಂಬ ನಿಲುವು, ಈ ಲೇಖನಗಳಲ್ಲಿ ಒಂದೆಡೆ ಬರುವುದು ವಚನಗಳನ್ನು ಇದಕ್ಕೆ ನಿದರ್ಶನವಾಗಿ ಕೊಡುತ್ತಾರೆ. ಪರಂಪರೆಯ ವ್ಯಾಖ್ಯೆಯಲ್ಲಿ ಕೇವಲ ಸಾಹಿತ್ಯ ಪರಂಪರೆಯನ್ನಷ್ಟೇ ತೆಗೆದುಕೊಂಡರೆ ಮೇಲಿನ ಮಾತಿಗೆ ಅಷ್ಟಿಷ್ಟು ಸಮರ್ಥನೆ ದೊರಕೀತು. ಆದರೆ ಸಂಸ್ಕೃತಿಯ ವಿವಿಧ ಅಂಗಗಳೂ ಪರಂಪರೆಯ ಭಾಗಗಳೇ ಆಗಿರುವಾಗ ಅವುಗಳೆಲ್ಲದರೊಡನೆಯೂ ಸಂಬಂಧ ಸೂಚಿಸಿಕೊಳ್ಳದೆ ಶ್ರೇಷ್ಠ ಸಾಹಿತ್ಯ ಕೃತಿಯು ರಚನೆಯಾಗಲಾರದಷ್ಟೆ.

ಸಮೀಕ್ಷಾತ್ಮಕ ಲೇಖನಗಳಲ್ಲಿ ಯುಕ್ತ ವಿಮರ್ಶಾ ಚೌಕಟ್ಟು ಹಾಗೂ ಅದಕ್ಕನುಗುಣವಾಗಿ ಮಾಹಿತಿಯ ವಿಶ್ಲೇಷಣೆ ಕಂಡುಬರುತ್ತದೆ. ಕಣವಿಯವರ ಶಿಶುಗೀತೆಗಳನ್ನು ಕುರಿತ ಲೇಖನ ಅವರ ಕಾವ್ಯವನ್ನು ಕುರಿತೂ ಕೆಲವು ವಿಚಾರಾರ್ಹ ಒಳನೋಟಗಳಿಂದ ಕೂಡಿದೆ. 'ಬಿಕ್ಕಟ್ಟಿನಲ್ಲಿ ಕನ್ನಡ ವಿಮರ್ಶೆ' ಹಲವಾರು ವಾದಗ್ರಸ್ತ ಸಂಗತಿಗಳನ್ನು ಪೂರ್ವಪಕ್ಷವನ್ನಾಗಿಸಿಕೊಂಡು ಅವೆಲ್ಲಕ್ಕೂ ಯುಕ್ತ ಉತ್ತರ ನೀಡಬೇಕೆಂಬ ಉಮೇದಿನಿಂದ ರಚಿತವಾಗಿದೆ. ಆ ಲೇಖನದ ತುರ್ತಿನ ವಾದಮಂಡನೆ, ಈ ಸಂಕಲನದ ಇನ್ನಾವುದೇ ಬರೆಹದಲ್ಲೂ ಕಾಣದ ಲಕ್ಷಣ. ಹೀಗಿದ್ದರೂ ಅಲ್ಲಿಯೂ ಮತ್ತೂ ಚರ್ಚೆಗೆ ಯೋಗ್ಯವಾದ ಹೊರ ಚಾಚುಗಳು ಉಳಿದುಕೊಂಡಿವೆ.

ಕೃತಿ ವಿಮರ್ಶೆಯ ಲೇಖನಗಳಲ್ಲಿ ವಿಶ್ಲೇಷಣೆಯನ್ನು ಮುಖ್ಯ ನೆಲೆಯಾಗಿಸಿಕೊಂಡು ಆ ಮೂಲಕ ಕೃತಿಯ ಆಶಯಗಳನ್ನು, ಮೌಲ್ಯಗಳನ್ನು ಗ್ರಹಿಸುತ್ತಾರೆ. ಆ ಆಶಯಗಳನ್ನು ಕುರಿತ ಚರ್ಚೆಯನ್ನು ನಾವು ಕಾಣಬಹುದಾಗಿದೆ. ಕೃತಿಯ ತಂತ್ರದ ಸಾಧುತ್ವವನ್ನೂ ವಿಮರ್ಶೆಯ, ವ್ಯಾಪ್ತಿಯಲ್ಲಿ ತಂದು ಅನುಚಿತವಾದದ್ದನ್ನು ಗುರುತಿಸಲಾಗಿದೆ. 'ಹಯವದನ'ದ ಬಗೆಗಿನ ಚರ್ಚೆಯಲ್ಲಿ ಈ ಅಂಶವನ್ನು ಕಾಣಬಹುದು.

**ಕಟಾಕ್ಷ : ಗೌರೀಶ ಕಾಯ್ಕಿಣಿ**

ಎಂಟು ಲೇಖನಗಳ ಸಂಕಲನ. ಮೂರು ಲೇಖನಗಳು ಸಮಕಾಲೀನ ಕನ್ನಡ ಕಾವ್ಯವನ್ನು ಕುರಿತಂತೆ ಇವೆ. ಉಳಿದ ಐದು ಲೇಖನಗಳಲ್ಲಿ ಕನ್ನಡ ವಿಮರ್ಶೆಯ ಸಂದರ್ಭದಲ್ಲಿ ಕಾಣುವ ಕೆಲವು ಮುಖ್ಯ ಸಮಸ್ಯೆಗಳನ್ನು ಚರ್ಚಿಸಲಾಗಿದೆ.

'ಹೊಸ ಕಾವ್ಯದ ಹಾದಿ' ಲೇಖನದಲ್ಲಿ ಉಪಶೀರ್ಷಿಕೆಗಳ ಅಡಿಯಲ್ಲಿ ಆರು ದಶಕಗಳ ಕಾವ್ಯವನ್ನು ಕುರಿತಂತೆ ಚರ್ಚೆಯೊಂದನ್ನು ಬೆಳೆಸಿದ್ದಾರೆ. ಈ ಚರ್ಚೆಯಲ್ಲಿ ಈಗಾಗಲೇ ಸಿದ್ಧಗೊಂಡುದೆಂದು ತಿಳಿಯಲಾದ ಕೆಲವು ವಿಮರ್ಶಾ ನಿರ್ಣಯಗಳನ್ನು. ಬೇರೊಂದು ನಿಟ್ಟಿನಿಂದ ನೋಡಿ, ಪ್ರಶ್ನಿಸಲಾಗಿದೆ ; ಅದಕ್ಕೆ ತಕ್ಕ ತಾತ್ತ್ವಿಕ ನೆಲೆಯನ್ನು ಬಲವಾಗಿಲ್ಲವಾದರೂ, ಸೆಳಕುಗಳು ಕಾಣುವಂತೆ ರೂಪಿಸಲಾಗಿವೆ. 'ವಿಮರ್ಶೆಯಲ್ಲಿ ನವ್ಯತೆ' ಎಂಬುದೂ ಇಂಥದೇ ಒಂದು ಸಮೀಕ್ಷಾ ಲೇಖನ. ಇಲ್ಲಿನ ನಿರ್ಣಯಗಳು ಕೆಲವು ಕಡೆಗಳಲ್ಲಿ ಬೀಸುಬೀಸಾಗಿದ್ದು ಪ್ರಶ್ನಾರ್ಹವಾಗಿವೆ. 'ಕಾವ್ಯದಲ್ಲಿ ದಲಿತ ಪ್ರಜ್ಞೆ' ಎಂಬ ಲೇಖನದಲ್ಲಿ. ದಲಿತ ಪ್ರಜ್ಞೆಯ ವ್ಯಾಖ್ಯೆಯು ಮಂಡಿತವಾಗಿದ್ದು ಆ ಮೂಲಕ ತೀರ ಇತ್ತೀಚಿನ ಕನ್ನಡ ಕಾವ್ಯ ಸಮರ್ಥನೆಯೂ ಜರುಗಿದೆ.

'ಕಾವ್ಯವೆಂದರೇನು ?' ಮತ್ತು 'ವಿಮರ್ಶೆಯ ಬಗೆಗೆ ಒಂದು ವಿಮರ್ಶೆ' 'ಪರಿಚಯಾತ್ಮಕ. ಪ್ರಾಥಮಿಕ ನೆಲೆಯ ಲೇಖನಗಳು. 'ಪರಕೀಯ (ಅನಾಥ) ಪ್ರಜ್ಞೆ' ಲೇಖನದಲ್ಲಿ ಈ ಸಂಪ್ರತ್ಯಯವನ್ನು ವಿವಿಧ ಜ್ಞಾನ ಶಾಖೆಗಳ ನೆರವಿನಿಂದ ನಿರ್ವಚಿಸ ಲಾಗಿದೆ. 'ಅನುಭವ ಮತ್ತು ಅಭಿವ್ಯಕ್ತಿ' ಎಂಬ ಬರೆಹದಲ್ಲಿ ವಾಗ್ವಾದವೊಂದನ್ನು ಬೆಳಸಿದ್ದಾರೆ. 'ಸಾಹಿತ್ಯದಲ್ಲಿ ಶೂದ್ರ-ಬ್ರಾಹ್ಮಣ ಸಂದರ್ಭ' ಸದ್ಯ ನಮ್ಮ ವಿಮರ್ಶೆ ಯಲ್ಲಿ ಬಳಕೆಯಲ್ಲಿರುವ ಚರ್ಚೆಯ ನೆಲೆಯೊಂದರ ಉಪಯುಕ್ತತೆ, ಅದರ ಆನ್ವಯಿಕ ನೆಲೆಯ ಏರುಪೇರು ಇವೇ ಮುಂತಾದ ಸಂಗತಿಗಳನ್ನು ಚರ್ಚಿಸುವ ಲೇಖನ. ಇಲ್ಲಿ ಬೇರೊಂದು ನೆಲೆಯಲ್ಲಿ ನಿಂತವರಿಗೆ ಇಡೀ ಚರ್ಚೆ ಹೇಗೆ ಕಾಣಬಹುದೆಂಬ ಸಂಗತಿ ಗೋಚರವಾಗುತ್ತದೆ.

ಈ ಲೇಖನಗಳಲ್ಲಿ ಗಾಢವಾದ ಯಾವುದೇ ತಾತ್ತ್ವಿಕ ಚೌಕಟ್ಟು ಕಾಣಸಿಗು ವುದಿಲ್ಲ. ಸಾಹಿತ್ಯದ ಅಧ್ಯಯನದಲ್ಲಿ ಆಸಕ್ತವಾದ ಮನಸ್ಸೊಂದು ಜಾಡಿಗೆ ಬಿದ್ದ ವಿಮರ್ಶೆಯ ನೆಲೆಗಳಿಗೆ ಪ್ರತಿಕ್ರಿಯಿಸುವ, ಅಪೇಕ್ಷಿತ ಪುರವಣಿ ನೀಡುವ ಪ್ರವೃತ್ತಿ ಕಾಣುತ್ತದೆ. ವಿಮರ್ಶೆ ಎಂಬ ಚಟುವಟಿಕೆಗೆ ಈ ಬಗೆಯ ಕೊಡುಗೆಗಳೂ ಅವಶ್ಯವೇ ಸರಿ. ಏಕೆಂದರೆ ವೃತ್ತಿಪರ ವಿಮರ್ಶಕನಿಗೆ ತಟ್ಟದ ಕೆಲವು ಸೂಕ್ಷ್ಮಗಳು ಈ ಮೂಲಗಳಿಂದ ದೊರಕುವ ಸಾಧ್ಯತೆ ಇರುತ್ತದೆ.

ವಿಶ್ಲೇಷಣೆ : ಎಚ್. ಎಸ್. ರಾಘವೇಂದ್ರರಾವ್

ಒಂಭತ್ತು ಲೇಖನಗಳ ಸಂಗ್ರಹವಿದು. ಮೂರು ಲೇಖನಗಳು ಸಾಹಿತ್ಯ ಮೀಮಾಂಸೆಯ ಕೆಲವು ಹೊಸ ಚಿಂತನೆಗಳನ್ನು ವಿವರಿಸುವ, ಮಂಡಿಸುವ ಆಸಕ್ತಿ ಯನ್ನು ಪ್ರಕಟಿಸುತ್ತವೆ. ಉಳಿದ ಲೇಖನಗಳು ಕೃತಿವಿಮರ್ಶೆಗೆ ಮೀಸಲಾಗಿವೆ. ಕೃತಿ ವಿಮರ್ಶೆಯ ಬರೆಹಗಳಲ್ಲೂ ಅವಶ್ಯಕವಿರುವ ತಾತ್ತ್ವಿಕ ಮಾನದಂಡಗಳನ್ನು ವಿಮರ್ಶೆಯ ಒಡಲಿನಲ್ಲಿಯೇ ರೂಪಿಸಿಕೊಳ್ಳುವ ಯತ್ನವಿದೆ. ಹೀಗಾಗಿ ಇಲ್ಲಿನ ಎಲ್ಲ ಲೇಖನಗಳಲ್ಲೂ ಕಂಡುಬರುವ ಸಾಮಾನ್ಯ ಲಕ್ಷಣವೆಂದರೆ ವಿಮರ್ಶೆಗೆ ಬೇಕಾದ

ತಾತ್ತ್ವಿಕ ನಿಲುವುಗಳನ್ನು ಹುಡುಕಿಕೊಳ್ಳುವುದು. ಅವುಗಳನ್ನು ಕೆಲವೊಮ್ಮೆ ಕೇವಲ ನಿರೂಪಿಸಿ ಬಿಟ್ಟಿರುವ ಲೇಖನಗಳ ಜೊತೆಗೆ ಅನ್ವಯ ಕ್ರಮದಲ್ಲಿ ಆ ತತ್ತ್ವಗಳನ್ನು ಪರೀಕ್ಷಿಸಿ ನೋಡುವ ಲೇಖನಗಳೂ ಇಲ್ಲಿವೆ.

ಶಾಬ್ದಿಕ ಮಾಧ್ಯಮದ ವೈಶಿಷ್ಟ್ಯವನ್ನು ವಿವರಿಸುವ ಲೇಖನ, ಹಾಗೂ ಮನೋ ಭಾಷಾವಿಜ್ಞಾನವನ್ನು ಕುರಿತ ಲೇಖನ ಇವೆರಡೂ ಹೊಸ ಪರಿಭಾಷೆಯೊಂದನ್ನು ರೂಪಿಸುವ ಯತ್ನದಲ್ಲಿವೆ. ಅಭ್ಯಾಸ ಮತ್ತು ಆ ಮೂಲಕ ದೊರಕಿದ ಗ್ರಹಿಕೆಯನ್ನು ಸಾಹಿತ್ಯದ ಅಧ್ಯಯನಕ್ಕೆ ಒದಗಿಸುವ ಲೇಖಕರ ಯತ್ನ ಈ ಲೇಖನಗಳಲ್ಲಿ ಸ್ಪಷ್ಟವಾಗಿವೆ. ಛಂದಸ್ಸನ್ನು ಕುರಿತ ಲೇಖನ ಬೇಂದ್ರೆಯವರ ಕವನಗಳ ಅಭ್ಯಾಸಕ್ಕೆ ಪೂರ್ವಭಾವಿಯಾಗಿ ನಡೆಸಿದ ಸಿದ್ಧತೆಯಾದರೂ ಕೆಲವು ಪ್ರಾಥಮಿಕ ಹಂತದ ಗೊಂದಲಗಳನ್ನು ಆಧುನಿಕ ಪರಿಭಾಷೆಯಲ್ಲಿ ನಿವಾರಿಸಿ ವಿವರಿಸುವ ದೆಸೆಯನ್ನು ಹಿಡಿಯಲಾಗಿದೆ. 'ರತ್ನನ ಪದಗಳು' ಲೇಖನದಲ್ಲಿಯೂ ಇದೇ ಮಾದರಿಯನ್ನು ಕಾಣಬಹುದು. ಆದರೆ ಇಲ್ಲಿ ಶೋಧಿತ ವಾದ ನೆಲೆ ಶೈಲಿಶಾಸ್ತ್ರದ್ದು. ಅದನ್ನು ರತ್ನನ ಪದಗಳು ಭಾಷೆಗೆ ಅನ್ವಯಿಸಿ ಕೆಲವು ಸೂಕ್ತ ನಿರ್ಣಯಗಳನ್ನು ತಲುಪಲಾಗಿದೆ.

'ಜೋಗಿ', 'ಬಿಳಿಯ ಹೂಗಳ ಕವಿತೆ ಗೋರಿಗಳ ಮೇಲೆ', 'ಸಂಸ್ಕಾರ' ಮತ್ತು 'ಶಿಕಾರಿ' ಕೃತಿಗಳನ್ನು ಕುರಿತ ವಿಮರ್ಶೆಯ ಲೇಖನಗಳು ಅಭ್ಯಾಸ ಪೂರ್ಣವಾಗಿದ್ದು, ಆಯಾ ಕೃತಿಗಳ ಬಗೆಗೆ ಓದುಗರಿಗೆ ಯೋಗ್ಯವಾದ ಒಳನೋಟಗಳನ್ನು ಒದಗಿಸುತ್ತವೆ. ಅಲ್ಲಿ ತಲುಪಲಾದ ನಿರ್ಣಯಗಳನ್ನು ವಿಮರ್ಶೆಯಲ್ಲಿ ಚರ್ಚಿಸಬಹುದಾದರೂ ಅನುಸರಿಸಿದ ವಿಧಾನದಲ್ಲಿ ಅಚ್ಚುಕಟ್ಟಿದೆ. 'ಶಿಕಾರಿ' ಕಾದಂಬರಿಯ ವಿಮರ್ಶೆಯಲ್ಲಿ ಮಾತ್ರ ಕೃತಿಯ ಸಮರ್ಥನೆಯ ಧಾಟಿಯೊಂದು ಮೇಲುಗೈ ಪಡೆದು, ಕೆಲವಾದರೂ ಅನಗತ್ಯವಾದ ಅನ್ಯವಿವರಗಳು ತಲೆಹಾಕುವಂತಾಗಿದೆ.

ಕೃತಿ ವಿಮರ್ಶೆಯಲ್ಲಿ ಅನುಸರಿಸಿದ ವಿಧಾನದಲ್ಲಿಯೇ ಲೋಪವಿರುವ, ಅಥವಾ ವಾದಗ್ರಸ್ತವಾದ ವಿಧಾನವಿರುವ ಬರಹವೆಂದರೆ 'ಕುಮಾರವ್ಯಾಸನ ಇತರ ಪಾತ್ರಗಳು'. ಇಲ್ಲಿ ಆಧುನಿಕ ಕೃತಿಗಳ ಪಾತ್ರ ನಿರ್ಮಾಣದ ತಂತ್ರದ ನೆಲೆಯಲ್ಲಿ ದೇಶೀಕಾವ್ಯವೊಂದರ ಪಾತ್ರಗಳನ್ನು ವಿವೇಚಿಸಲಾಗಿದೆ. ಹೀಗಾಗಿ ಆಯ್ದುಕೊಂಡ ಮಾದರಿಯೇ ತಕ್ಕುದಲ್ಲ. ಅದರಿಂದ ಕೃತಿಯಲ್ಲಿ ಪಾತ್ರ ನಿರ್ಮಾಣದ ಹಂತದ ದೋಷಗಳು 'ಕಾಣ' ತೊಡಗು ತ್ತವೆ. ಇದು ಒಂದು ಮುಖ್ಯ ಪ್ರಶ್ನೆ. ಏಕೆಂದರೆ ಇಲ್ಲಿನ ಇತರ ಎಲ್ಲ ಲೇಖನಗಳೂ ಸಮಕಾಲೀನ ಕೃತಿ ಹಾಗೂ ಸಮಕಾಲೀನ ವಿಚಾರಗಳನ್ನು ಕುರಿತಿವೆ. ಹಳಗನ್ನಡ ಮತ್ತು ನಡುಗನ್ನಡ ಕೃತಿ ಸಮುದಾಯವನ್ನು ವಿಮರ್ಶಿಸಲು ಆರಿಸುವ ಮಾನದಂಡ ಗಳ ಸ್ವರೂಪವು ಯಾವುದಾಗಿರಬೇಕೆಂಬ ನೆಲೆಯಲ್ಲಿ ಈ ಲೇಖಕರು ಇನ್ನೂ ನಿರ್ಧಾರಕ ಹಂತವನ್ನು ಮುಟ್ಟಿಲ್ಲವೆಂದೇ ಹೇಳಬೇಕು.

ಹೊಸ ಹೆಜ್ಜೆ ಹೊಸ ಹಾದಿ : ಟಿ. ಪಿ. ಅಶೋಕ

ಈ ಸಂಕಲನದಲ್ಲಿರುವ ಹನ್ನೆರಡು ಲೇಖನಗಳನ್ನು ಎರಡು ಗುಂಪುಗಳಲ್ಲಿ ಪರಿಶೀಲಿಸಬಹುದು. ಮೊದಲ ಆರು ಲೇಖನಗಳು ಸಾಹಿತ್ಯದ ಅಧ್ಯಯನಕ್ಕೆ ಅವಶ್ಯ ವಾದ ಚಿಂತನೆಗಳನ್ನು ಕುರಿತಂತೆ ಇವೆ. ಆಲ್ಬರ್ಟ್ ಕಾಮು ಜ್ಯಾಂ ಪಾಲ್ ಸಾರ್ತ್ರೆ ಮತ್ತು ಲುಕಾಚ್ಸ್ ಇವರ ಸಾಹಿತ್ಯ ಸಂಬಂಧಿ ವಿಚಾರಗಳನ್ನು ನಾಲ್ಕು ಲೇಖನಗಳಲ್ಲಿ ವಿವರಿಸಲಾಗಿದೆ. 'ಸಾಹಿತ್ಯ ಮತ್ತು ಬದ್ಧತೆ' ಎಂಬ ಲೇಖನದಲ್ಲಿ ಮ್ಯಾಕ್ಸ್ ಅವೆರೆತ್ ಎಂಬ ಮಾರ್ಕ್ಸ್‌ವಾದಿ ವಿಮರ್ಶಕನ ವಿಚಾರಗಳಿವೆ. 'ಸಾಹಿತ್ಯ ಮತ್ತು ಮನೋವಿಜ್ಞಾನ' ಎಂಬ ಲೇಖನದಲ್ಲಿ ಸಾಹಿತ್ಯದ ಅಧ್ಯಯನಕ್ಕೆ ಮನೋವಿಜ್ಞಾನದ ಚಿಂತನೆಗಳ ಉಪಯುಕ್ತತೆಯನ್ನು ಕುರಿತ ಪ್ರಾಥಮಿಕ ಚಿಂತನೆಗಳು ಸಂಗ್ರಹಗೊಂಡಿವೆ. ಈ ಆರೂ ಲೇಖನಗಳು ಲೇಖಕರ ಅಧ್ಯಯನ ಹಾಗೂ ಗ್ರಹಿಸಿದ್ದನ್ನು ಸಂಗ್ರಹವಾಗಿ ಮಂಡಿಸುವ ಸಾಮರ್ಥ್ಯಕ್ಕೆ ಪುರಾವೆಯಾಗಿವೆ. ಆದರೆ ಅವುಗಳಲ್ಲಿ ಮಂಡಿತವಾದ ವಿಚಾರ ಸರಣಿಗಳು ಲೇಖಕರ ಕೃತಿ ವಿಮರ್ಶೆಗೆ ನಿರ್ದಿಷ್ಟವಾದ ಯಾವುದೇ ಮಾನದಂಡಗಳನ್ನು ಒದಗಿಸಿದಂತೆ ತೋರುವುದಿಲ್ಲ.

ಎರಡನೆಯ ಗುಂಪಿನಲ್ಲಿ ಕಥಾಸಾಹಿತ್ಯವನ್ನು ಕುರಿತಂತೆ ಬರೆದ ಆರು ಕೃತಿಗಳ ವಿಮರ್ಶಾ ಲೇಖನಗಳಿವೆ. ಮುಲ್ಕರಾಜ್ ಆನಂದ್ ಅವರ ಕಾದಂಬರಿಗಳು, ದೇವನೂರು ಮಹಾದೇವ ಅವರ ಕತೆಗಳು, ಕರಿಮಾಯಿ, ಮುಸ್ಸಂಜೆಯ ಕಥಾಪ್ರಸಂಗ, ಕರ್ವಾಲೋ ಹಾಗೂ ವಂಶವೃಕ್ಷ ಕೃತಿಗಳನ್ನು ಲೇಖಕರು ವಿಮರ್ಶಿಸಿದ್ದಾರೆ. ಇವು ಗಳಲ್ಲಿ ಹಲವು ತೀರಾ ಇತ್ತೀಚಿನ ಕೃತಿಗಳು ಎಂಬುದನ್ನು ಗಮನಿಸಬೇಕು. ಎಂದರೆ ಹೊಸ ಕೃತಿಗಳಿಗೆ ಉತ್ಸಾಹದ ವಿಮರ್ಶೆಯ ಮೂಲಕ ಸ್ವಾಗತ ನೀಡುವುದೇ ಅಲ್ಲದೆ ಆ ಮುಂದಿನ ವಿಮರ್ಶಾ ಪರಂಪರೆಗೆ ಚಾಲೂ ಕೊಡುವ ಅಪೇಕ್ಷೆಯಿಂದ ಈ ವಿಮರ್ಶಾ ಬರೆಹಗಳು ರಚಿತವಾಗಿವೆ. ಬಹುಮಟ್ಟಿಗೆ ವಿವರಣೆ, ವಿವರಗಳ ಮರು ಸಂಯೋಜನೆ ಯಿಂದ ಹೊರಡುವ ಅರ್ಥ ವಿಶೇಷ, ಆ ಮೂಲಕ ರೂಪುಗೊಳ್ಳುವ ಕಾದಂಬರಿಯ ದೃಷ್ಟಿಕೋನದ ಗ್ರಹಿಕೆ – ಇದು ಅಶೋಕ ಅವರು ಅನುಸರಿಸುವ ವಿಧಾನ. ಇವರಿಂದ ಕೃತಿಯ ಮೊದಲೋದಿನ ಪರಿಣಾಮಗಳು ಆಕಾರ ತಾಳುತ್ತವೆ. ಕರಿಮಾಯಿ ಮತ್ತು ವಂಶವೃಕ್ಷ ಕಾದಂಬರಿಗಳ ವಿಮರ್ಶೆಯಲ್ಲಿ ಮಾತ್ರ ಲೇಖಕರು ಇನ್ನು ಒಂದು ಹೆಜ್ಜೆ ಮುಂದುವರೆದು ಕೃತಿಗಳ ಆಶಯವನ್ನು ಕುರಿತಂತೆ ಚರ್ಚೆಯನ್ನು ಬೆಳೆಸಲು ಆಸಕ್ತ ರಾಗುತ್ತಾರೆ. ಈ ಚರ್ಚೆಯು ಮುಖ್ಯವಾಗಿ ಕೆಲವು ನೈತಿಕ ಒತ್ತಾಯಗಳಿಂದ ಪ್ರೇರಿತ ವಾದಂತೆ ಭಾಸವಾಗುತ್ತದೆ. ಎಂದರೆ ಆಶಯ ಮತ್ತು ಬಂಧಗಳ ಸಂಬಂಧದ ಚರ್ಚೆ ಗಿಂತ ವೈಚಾರಿಕವಾಗಿ ಗ್ರಹಿಸಿದ, ಕೃತಿಯ ಆಶಯವನ್ನು, ಅದರ ಸಾಧುತ್ವ ಹಾಗೂ ಪ್ರಗತಿಗಾಮಿತ್ವವನ್ನು ಕುರಿತು ವಿಮರ್ಶೆ ಬೆಳೆಯುತ್ತದೆ.

ಕನ್ನಡ ವಿಮರ್ಶೆಯ ದೃಷ್ಟಿಯಿಂದ ಈ ಕೃತಿಯ ಎರಡನೆಯ ಭಾಗದ ಲೇಖನ ಗಳು ಮಾತ್ರ ಉಪಯುಕ್ತ. ಮೊದಲ ಭಾಗದ ವಿಚಾರಗಳನ್ನು ಕನ್ನಡ ಸಂದರ್ಭಕ್ಕೆ ಅನ್ವಯಿಸಿ ಚರ್ಚೆ ಬೆಳೆಸಿದ್ದರೆ ಅವೂ ಉಪಯುಕ್ತವಾಗಬಹುದಿತ್ತು. ಲೇಖಕರು

ವಿಮರ್ಶಾ ಪರಂಪರೆಯೊಂದು ಬೆಳೆಯುವುದನ್ನು ಬಯಸುವುದಾದರೆ, ಒಂದು ಕೃತಿಯ ಬಗ್ಗೆ ಆವರೆಗೆ ಬಂದಿರುವ ವಿಮರ್ಶಾ ಬರೆಹಗಳನ್ನು ಅವಲೋಕಿಸಿ ಅಲ್ಲಿಂದ ಮುಂದೆ ತಮ್ಮದು ಹೇಗೆ ಹೊಸ ಹೆಜ್ಜೆ ಎಂಬುದನ್ನು ಸ್ಪಷ್ಟಗೊಳಿಸಬೇಕಾಗುವುದು. ಇಲ್ಲಿನ ಕೃತಿವಿಮರ್ಶೆಯ ಲೇಖನಗಳಲ್ಲಿ ಇದು ನಡೆದಿಲ್ಲ.

ಅನುಸಂಧಾನ : ನರಹಳ್ಳಿ ಬಾಲಸುಬ್ರಹ್ಮಣ್ಯ

ಕನ್ನಡದ ಆರು ಕಾದಂಬರಿಗಳನ್ನು ಕುರಿತು ಬರೆದ ವಿಮರ್ಶಾ ಲೇಖನಗಳು ಈ ಸಂಕಲನದಲ್ಲಿವೆ. ಚಿಕ್ಕವೀರ ರಾಜೇಂದ್ರ, ಮಲೆಗಳಲ್ಲಿ ಮದುಮಗಳು, ಸಮೀಕ್ಷೆ ಭಾರತೀಪುರ, ದಾಟು ಮತ್ತು ಒಡಲಾಳ ಇವೇ ಈ ಆರು ಕಾದಂಬರಿಗಳು.

ಈ ವಿಮರ್ಶಾ ಲೇಖನಗಳಲ್ಲಿ ಆಯಾ ಕಾದಂಬರಿಗಳ ವಿವರ ಗ್ರಹಿಕೆಯ ಮೂಲಕ ದೊರಕುವ ತಾತ್ವಿಕ ಚೌಕಟ್ಟನ್ನು ಕಾಣುವ ಯತ್ನ ಸ್ಪಷ್ಟವಿದೆ. ಭಾರತೀಪುರ ಮತ್ತು ದಾಟು ಕಾದಂಬರಿಗಳ ಬಗ್ಗೆ ಮಾತ್ರ ಮೊದಲೇ ಜಿದ್ದು ಕಟ್ಟಿ ನಿಂತಂತೆ ತೋರುತ್ತದೆ. ಎಂದರೆ ಆ ಕಾದಂಬರಿಗಳ ವಿಮರ್ಶೆಯ ಮೂಲಕ ನಿರೂಪಿಸಲಾದ ಕೊರತೆಗಳು ಸಾಧುವಲ್ಲವೆಂದು ಹೇಳುತ್ತಿಲ್ಲ; ಆದರೆ ಆ ಕೊರತೆಗಳನ್ನು ಗುರುತಿಸಿ ನಿರೂಪಿಸುವಲ್ಲಿ ಒಂದು ಬಗೆಯ ಉದ್ವೇಗವಿದೆ. ಈ ಉದ್ವೇಗವೇ ಕಾರಣವಾಗಿ ಆಯಾ ಕೃತಿಗಳನ್ನು ಸಮರ್ಥಿಸಲೂ ಕಾರಣಗಳನ್ನು ಹುಡುಕಲು ಅನುವಾಗುವುದೂ ಸಾಧ್ಯ.

ಉಳಿದ ನಾಲ್ಕು ಕಾದಂಬರಿಗಳಲ್ಲಿ ಧಾಟಿ ಬೇರೆ. ಚಿಕವೀರರಾಜೇಂದ್ರ ಕೃತಿಯ ಮುಖ್ಯ ವಿವರಗಳ ಮೂಲಕ ಅವರು ಗುರುತಿಸಿದ ನೆಲೆ ಯುಕ್ತವೇ ಸರಿ. ಕಲಾಕೃತಿ ರೂಪುಗೊಳ್ಳುವ ಕ್ರಮದಲ್ಲಿಯೂ ಅದು ಅನಿವಾರ್ಯವಾದದ್ದು. ಮಲೆಗಳಲ್ಲಿ ಮದು ಮಗಳು ಕಾದಂಬರಿಯ ವಿಮರ್ಶೆಯಲ್ಲಿ ಅದರ ರಾಚನಿಕ ಸ್ವರೂಪವನ್ನು ಗ್ರಹಿಸಲು ಯತ್ನಿಸಿದ್ದರೂ, ಕೃತಿಯನ್ನು ಇಡಿಯಾಗಿ ಗ್ರಹಿಸುವಲ್ಲಿ ಮಾತ್ರ ಯಶಸ್ಸು ಪಡೆದಿಲ್ಲ. ಆದ್ದರಿಂದಲೇ ಅವರ ಲೇಖನದ ಕೊನೆಗೆ ಎತ್ತುವ ಪ್ರಶ್ನೆಗಳು ಹುಟ್ಟುವುದು ಸಾಧ್ಯ ವಾಗಿದೆ. ಲೇಖಕರಾಗಲೀ, ಅವರು ಉಲ್ಲೇಖಿಸುವ ಬಿ. ಕೃಷ್ಣಪ್ಪನವರಾಗಲೀ ಪರಿಚಿತ ಸಮಾಜಜ್ಞಾನವನ್ನು ಕಾದಂಬರಿಯಲ್ಲಿ ತಾಳೆ ನೋಡುವ ಬಗೆಯನ್ನು ಅನುಸರಿಸಿ ಕೊಂಚ ಅಸಾಹಿತ್ಯಕ ನೆಲೆಯನ್ನು ತಲುಪುವುದುಂಟು. 'ಸಮೀಕ್ಷೆ'ಯಲ್ಲಿ ಸೂರ-ಕಾಳಿಯರ ಜೀವನವನ್ನು ಕಾರಂತರು 'ವೈಭವೀಕರಿಸು'ವುದರ ಪ್ರಾಸ್ತುತ್ಯವನ್ನು ಪ್ರಶ್ನಿಸುವುದೂ ಕೂಡ ಮೇಲಿನಂಥದೇ ನೆಲೆಯಿಂದ. ಏಕೆಂದರೆ ಕೃತಿಯ ಚರ್ಚೆಯಲ್ಲಿ ನಮ್ಮ 'ಅರಿವನ್ನು' 'ಅಪೇಕ್ಷೆ'ಯನ್ನು ಎಷ್ಟು ಬಳಸಬೇಕೆಂಬುದು ಅತಿ ಎಚ್ಚರದಿಂದ ಸಾಧಿತವಾಗುವುದು. ಇಲ್ಲದಿದ್ದರೆ ಆರೋಪ ಪ್ರತ್ಯಾರೋಪಗಳಿಂದಲೇ ಕೂಡಿದ ಚರ್ಚೆಗೆ ಅನುವಾಗಬೇಕಾಗುವುದು.

'ಒಡಲಾಳ' ಕೃತಿಯ ಮುಖ್ಯ ನೆಲೆಗಳನ್ನು ಲೇಖಕರು ಸರಿಯಾಗಿಯೇ ಗ್ರಹಿಸಿ ದ್ದಾರೆ. ವಿನಾಯಿತಿಗಳಾಗಿ ಅಪೇಕ್ಷಿಸುವ ಕೃತಿಯೆಂದು ಒಡಲಾಳವನ್ನು ಗಮನಿಸ

ಬೇಕಿಲ್ಲ. ಹೀಗಿದ್ದರೂ ಅದರ ಒಳಗಿರುವ ಶ್ರೇಷ್ಠ ಕಲಾಕೃತಿಯ ಲಕ್ಷಣಗಳಲ್ಲಿ ಕೆಲವನ್ನು ಲೇಖಕರು ತಮ್ಮ ವಿಮರ್ಶೆಯಲ್ಲಿ ಗುರುತಿಸಿದ್ದಾರೆ.

ಆರೂ ಲೇಖನಗಳಲ್ಲಿ ಜಡಪಡಿಸುವ, ಯುಕ್ತವಾದುದನ್ನು ಗುರುತಿಸಲು ಯತ್ನಿಸುವ, ಅನುಚಿತವೆನಿಸಿದ್ದನ್ನು, ಪ್ರಶ್ನಿಸಲು ತವಕಿಸುವ ವಿಮರ್ಶಕರು ಇಲ್ಲಿ ಕಾಣ ಸಿಗುತ್ತಾರೆ. ರೂಪುಗೊಳ್ಳುವ ಹಂತದಲ್ಲಿ ಇದು ಅಸಹಜವಲ್ಲದ ಅವಸ್ಥೆ. ಇಲ್ಲಿಂದ ಮುಂದಿನ ಹೆಜ್ಜೆಗಳು ಮುಖ್ಯ. ಏಕೆಂದರೆ ಇಡಿಯಾಗಿ ಸಾಹಿತ್ಯ ಪರಂಪರೆಯೊಡನೆ ಕೊಂಡಿಹಾಕಿಕೊಳ್ಳದ ವಿಮರ್ಶೆ ಹೆಚ್ಚಿನದೇನನ್ನು ಕೊಡಲಾರದಷ್ಟೇ. ಆ ದಿಕ್ಕಿನೆಡೆಗೆ ಯತ್ನಿಸುವ ಹೊಣೆ ಲೇಖಕರ ಮೇಲಿದೆ.

ಓದಿನಾ ಒಳಗು : ಎಚ್. ಎಸ್. ಪಾರ್ವತಿ

ಈ ಸಂಕಲನದಲ್ಲಿ ಹತ್ತು ಲೇಖನಗಳಿವೆ. ಈ ಲೇಖನಗಳನ್ನು ಒಗ್ಗೂಡಿಸುವ ಸಾಮಾನ್ಯ ಸೂತ್ರವೇನೂ ಇಲ್ಲ. ಕಾದಂಬರಿ, ಕಾದಂಬರಿ ಕಾರ್ತಿಯನ್ನು ಕುರಿತ ಲೇಖನ ಗಳು. ಐದು ವಚನ ಸಾಹಿತ್ಯವನ್ನು ಕುರಿತ ಒಂದು ಲೇಖನವಿದೆ. ಭಾವಗೀತೆ ಕುರಿತ ಲೇಖನವೊಂದು. ಎರಡು ಸಮೂಹ ಮಾಧ್ಯಮಗಳಿಗೆ ಸಂಬಂಧಿಸಿವೆ. ಕುಮಾರವ್ಯಾಸನಲ್ಲಿ ದ್ರೌಪದಿಯ ಪಾತ್ರ ಚಿತ್ರಣವನ್ನು ಕುರಿತ ಲೇಖನ ಕೂಡ ಇಲ್ಲಿದೆ. ಈ ವಿಮರ್ಶಾ ಲೇಖನಗಳಲ್ಲಿ, ಲೇಖಕಿ ಕೃತಿ, ಕೃತಿಕಾರರ ಬಗ್ಗೆ ಪರಿಚಯ, ವಿವರಣೆ ಹಾಗೂ ಆಸ್ವಾದನೆಗಳ ನೆಲೆಯಿಂದ ವಿಮರ್ಶೆಯ ಹೊಣೆ ನಿರ್ವಹಿಸುವುದು ಸ್ಪಷ್ಟವಾಗಿದೆ. ನಿರ್ದಿಷ್ಟ ವಿಮರ್ಶಾ ಮಾನದಂಡಗಳ ಗೋಜಿಗೆ ಹೋಗದೆ ಕೃತಿಯ ಅಭ್ಯಾಸವೇ ಮುಖ್ಯವೆಂಬ ನಿಲುವಿನಿಂದ ಈ ಬರೆಹಗಳು ಮೂಡಿವೆ. ಇದರಿಂದಾಗಿಯೇ ಎಷ್ಟೋ ಕಡೆಗಳಲ್ಲಿ, ಕನ್ನಡ ವಿಮರ್ಶೆಯಲ್ಲಿ ಈಗ ತೀರಾ ಪ್ರಾಥಮಿಕವೆನಿಸಿರುವ ಸಂಗತಿಗಳೂ, ಇಲ್ಲಿ ಮತ್ತೆ ವಿವರಣೆ ಪಡೆದಿವೆ. 'ಓದಿದ ಪುಸ್ತಕಗಳ ಒಳಗೇನಿದೆ ಎನ್ನುವ ಕುತೂಹಲ'ವೇ ಕಾರಣವಾಗಿರುವ ಈ ಲೇಖನಗಳ ಹಿಂದಿರುವ ಉತ್ಸಾಹವನ್ನು ಅಲ್ಲಗಳೆಯುವಂತಿಲ್ಲ ವಾದರೂ ವಿಮರ್ಶೆಯ ಬೆಳವಣಿಗೆಯ ದೃಷ್ಟಿಯಿಂದ ಇವುಗಳ ತಾಳಿಕೆ ಕಡಿಮೆ ಎನ್ನದೆ ವಿಧಿಯಿಲ್ಲ.

ಯಶವಂತ ಚಿತ್ತಾಲ : ಕೆಲವು ಅಧ್ಯಯನಗಳು : ಸಂ. ಜಿ. ಎಸ್. ಭಟ್ಟ :

ಯಶವಂತ ಚಿತ್ತಾಲರ ಸಾಹಿತ್ಯವನ್ನು ಕುರಿತಂತೆ ಈಗಾಗಲೇ ಬೇರೆಬೇರೆ ಕಡೆಗಳಲ್ಲಿ ಪ್ರಕಟಗೊಂಡ ಇಪ್ಪತ್ತೈದು ಲೇಖನಗಳು, ಲೇಖನದ ಭಾಗಗಳು ಇಲ್ಲಿ ಸಂಕಲಿತವಾಗಿವೆ. ಇದರೊಡನೆ ಚಿತ್ತಾಲರೇ ಬರೆದ ಎರಡು ಲೇಖನಗಳೂ ಇವೆ. ಚಿತ್ತಾಲರ ಕತೆಗಳು, ಕಾದಂಬರಿಗಳು ಹಾಗೂ ಸಾಹಿತ್ಯ ಮೀಮಾಂಸೆಯ ಬರೆಹಗಳು— ಇವೆಲ್ಲವನ್ನೂ ಈ ಲೇಖನಗಳಲ್ಲಿ ವಿಮರ್ಶಿಸಲಾಗಿದೆ. 1957ರಲ್ಲಿ ಬರೆದ ಲೇಖನ ವೊಂದರಿಂದ ಹಿಡಿದು 1981ರಲ್ಲೇ ಬರೆದ ಲೇಖನದವರೆಗೆ ಇಲ್ಲಿನ ಬರೆಹಗಳ ಕಾಲಾ ವಧಿ ವ್ಯಾಪ್ತವಾಗಿದೆ. ಅಂದರೆ ಸುಮಾರು ಇಪ್ಪತ್ನಾಲ್ಕು ವರ್ಷಗಳ ಅವಧಿಯಲ್ಲಿ

ಚಿತ್ತಾಲರು ತಮ್ಮ ಕೃತಿಗಳನ್ನು ರಚಿಸುತ್ತಾ ಬಂದಂತೆ ಅವರ ಸಾಹಿತ್ಯ ಕೃತಿಗಳ ವಿಮರ್ಶೆಯೂ ಬೆಳೆಯುತ್ತಾ ಬಂದಿದೆ. ಈ ಲೇಖನಗಳ ಮೂಲಕ ಕಥಾ ಸಾಹಿತ್ಯ ವನ್ನು ಕುರಿತಂತೆ ನಮ್ಮ ವಿಮರ್ಶೆಯ ಮಾನದಂಡಗಳು ಪ್ರಬುದ್ಧವಾಗುತ್ತ ಬಂದಿರುವ ಕ್ರಮವನ್ನು ಗಮನಿಸಬಹುದು.

ಇಲ್ಲಿ ವಿವಿಧ ಲೇಖಕರು ಮಂಡಿಸಿರುವ ವಿಮರ್ಶಾ ಲೇಖನಗಳ ಬಗೆಗೆ ಇಲ್ಲವೇ ಅಲ್ಲಿನ ವಿಮರ್ಶಾ ಧೋರಣೆಗಳ ಬಗೆಗೆ ಚರ್ಚೆ ಅನವಶ್ಯಕ. ಏಕೆಂದರೆ ಅದರಿಂದ ಪ್ರತ್ಯೇಕವಾದ ಚರ್ಚೆಯ ನೆಲೆಗಳನ್ನೆ ಬೆಳೆಸಬೇಕಾಗುತ್ತದೆ. ಹೀಗಿದ್ದರೂ ಚಿತ್ತಾಲರ ಎಲ್ಲ ಕೃತಿಗಳ ಬಗೆಗೂ ಸಮಾನದೃಷ್ಟಿಯ ವಿಮರ್ಶೆ ಕಂಡುಬರುವುದಿಲ್ಲ. ಕಥೆಗಳಲ್ಲಿ ಕೆಲವು ಕಥೆಗಳ ಬಗೆಗೇ ಹೆಚ್ಚಿನ ಅವಧಾರಣೆ ಬಿದ್ದಂತಿವೆ. ಸಮೀಕ್ಷಾ ಪ್ರಧಾನವಾದ ಲೇಖನಗಳಲ್ಲಿಯೂ ಈ ಕೊರತೆ ನೀಗಿದಂತಿಲ್ಲ.

ಈ ಕೃತಿಯ ಸಂಪಾದನೆಯನ್ನು ಕುರಿತು ಒಂದು ಮಾತು. ಕೃತಿಕಾರನೊಬ್ಬನ ಕೃತಿಗಳನ್ನು ಕುರಿತ ವಿಮರ್ಶೆಯ ಪರಂಪರೆಯನ್ನು ಸೂಚಿಸುವ ಈ ಬಗೆಯ ಕೃತಿಗಳ ಸಂಪಾದಕರು ವಿಶೇಷವಾದ ಹೊಣೆಯೊಂದನ್ನು ಅವಶ್ಯವಾಗಿ ಹೊರಬೇಕು. ಕೇವಲ ಲೇಖನಗಳನ್ನು ಸಂಕಲಿಸುವುದು ಮಾತ್ರ ಮುಖ್ಯ ಕೆಲಸವಲ್ಲ. ಅವುಗಳನ್ನು ಯುಕ್ತ ವಾಗಿ ಅಳವಡಿಸುವುದೂ ಮುಖ್ಯ. ಹೀಗೆ ಅಳವಡಿಸುವಾಗ ಲೇಖನಗಳಲ್ಲಿ ಮಂಡಿತ ವಾದ ವಿಮರ್ಶಾಧೋರಣೆಗಳಿಂದ ಚಿತ್ತಾಲರ ಕೃತಿಗಳ ಬಗೆಗಿನ ತಿಳಿವು ಎಷ್ಟು ಹೆಚ್ಚು ತ್ತಿದೆ ಎಂಬ ಸಂಗತಿಯನ್ನು ಟಿಪ್ಪಣಿಗಳ ಮೂಲಕ ಗ್ರಹಿಸುವುದು ಅವಶ್ಯ. ಈ ಹೊಣೆ ಸಂಪಾದಕರಿಂದ ನಿರ್ವಹಣೆಗೊಂಡಿಲ್ಲ. ಹಾಗಾಗಿ ಇದೊಂದು ಸಂಕಲನ ಗ್ರಂಥವಾಗಿ ಮಾತ್ರ ಉಳಿಯುತ್ತದೆ.

ಸಿಂಧೀ ಸಾಹಿತ್ಯ ಚರಿತ್ರೆ : ಇಂಗ್ಲಿಷ್ ಮೂಲ : ಎಲ್. ಎಚ್. **ಅಜ್ವಾಣಿ ;**
ಕನ್ನಡ ಅನುವಾದ : ಸುಮತೀಂದ್ರ ನಾಡಿಗ್

ಕೇಂದ್ರ ಸಾಹಿತ್ಯ ಅಕಾಡೆಮಿಯು ತನ್ನ ವ್ಯಾಪ್ತಿಗೆ ಬರುವ ಭಾರತೀಯ ಭಾಷೆ ಗಳ ಸಾಹಿತ್ಯ ಚರಿತ್ರೆಗಳನ್ನು ಇನ್ನುಳಿದ ಭಾಷೆಗಳಲ್ಲಿ ಪ್ರಕಟಿಸುವ ಯೋಜನೆಯಲ್ಲಿ ಕನ್ನಡಕ್ಕೆ ಬಂದಿರುವ ಗ್ರಂಥವಿದು. ಅಲ್ಲಲ್ಲಿ ಬಂದ ಒಂದೆರಡು ಲೇಖನಗಳನ್ನು ಬಿಟ್ಟರೆ 'ಸಿಂಧೀ ಸಾಹಿತ್ಯ'ವನ್ನು ಕುರಿತು ಕನ್ನಡದಲ್ಲಿ ಏನೇನೂ ಮಾಹಿತಿ ಇಲ್ಲ. ಹೀಗಿರುವಾಗ ಇದು ಸ್ವಾಗತಾರ್ಹ ಪ್ರಕಟನೆಯೇ ಸರಿ.

ಭಾರತೀಯ ಸಾಹಿತ್ಯದ ಪ್ರಧಾನ ಲಕ್ಷಣಗಳನ್ನು ಹೊಂದಿದ ಸಿಂಧೀ ಸಾಹಿತ್ಯ ಕುತೂಹಲಕಾರಿಯಾದ ಸಂಗತಿಗಳನ್ನು ಒಳಗೊಂಡಿದೆ. ಜನಜೀವನ ಮತ್ತು ಸಂಸ್ಕೃತಿ ಯಲ್ಲಿ ಆದ ಏರುಪೇರುಗಳು ಸಾಹಿತ್ಯದಲ್ಲಿ ಬೀರಿದ ಪರಿಣಾಮಗಳನ್ನು ಈ ಚರಿತ್ರೆಯ ಲೇಖಕರು ಮುಂದಿಟ್ಟಾಗುವಂತೆ ವಿವರಿಸಿದ್ದಾರೆ.

ಸಾಹಿತ್ಯ ಚರಿತ್ರೆಯ ರಚನೆಯ ದೃಷ್ಟಿಯಿಂದ ಇದು ಸಾಂಪ್ರದಾಯಿಕವಾದ ಮಾದರಿಯನ್ನೆ ಅನುಸರಿಸಿದೆ. ಮಾಹಿತಿ ಜೋಡಣೆ ಮತ್ತು ವ್ಯಾಖ್ಯಾನಗಳನ್ನು ಹೊಂದಿಸುವ ಈ ಶೈಲಿಯಲ್ಲಿ ಮಾಹಿತಿಗೆ ನೀಡುವ ನೆಲೆಗೆ ಬಹುಮಟ್ಟಿಗೆ ಮೇಲುಗೈ ದೊರಕಿದೆ. ಕನ್ನಡದ ಓದುಗನ ದೃಷ್ಟಿಯಿಂದ ಇದಾದರೂ ಅತ್ಯವಶ್ಯಕವೇ ಸರಿ.

ಅನುವಾದದಲ್ಲಿ ಗದ್ಯಭಾಗಕ್ಕೆ ಸಂಬಂಧಿಸಿದಂತೆ ಮೋಸವಿಲ್ಲ. ಆದರೆ ಮೂಲ ಕೃತಿಗಳ ಉಲ್ಲೇಖಗಳನ್ನು, ಕಾವ್ಯಭಾಗಗಳನ್ನು ಅನುವಾದಿಸುವಾಗ ಮಾತ್ರ ಹಿತ ವೆನಿಸುವ ಓದು ದೊರಕದು. ಸಿಂಧಿಯಿಂದ ಇಂಗ್ಲಿಷ್‌ಗೆ, ಅಲ್ಲಿಂದ ಕನ್ನಡಕ್ಕೆ ಬಂದಾಗ ಅನಿವಾರ್ಯವೇ ಸರಿ. ಇದಕ್ಕೆ ಯಾರನ್ನೂ ದೂಷಿಸಿ ಫಲವಿಲ್ಲ.

**ಪಾಶ್ಚಾತ್ಯ ಸಾಹಿತ್ಯ ಮಾರ್ಗದರ್ಶಿ : ಸಂಪುಟ 1 : ಗ್ರೀಕ್ ಸಾಹಿತ್ಯ**

ಡಿ. ಆರ್. ನಾಗರಾಜ್

ಪಾಶ್ಚಾತ್ಯ ಸಾಹಿತ್ಯಗಳನ್ನು ಪರಿಚಯಿಸುವ ಉದ್ದೇಶದಿಂದ ಕನ್ನಡ ಅಧ್ಯಯನ ಕೇಂದ್ರ ಯೋಜಿಸಿರುವ ಐದು ಸಂಪುಟಗಳಲ್ಲಿ ಇದು ಮೊದಲನೆಯದು.

ಕೃತಿ, ಕೃತಿಕಾರರನ್ನು ಆಧರಿಸಿ ಒಂದೊಂದು ಪರಿಚಯಾತ್ಮಕ ಕಿರುಬರೆಹಗಳನ್ನು ರಚಿಸಿ ಸಂಕಲಿಸಿರುವ ಕೋಶಮಾದರಿಯ ಗ್ರಂಥವಿದು. ಕೃತಿ, ಕೃತಿಕಾರರ ಆಯ್ಕೆಯಲ್ಲಿ ಕೇವಲ ಮಹತ್ತ್ವದವರನ್ನು ಮಾತ್ರ ಪರಿಗಣಿಸದೆ ಚಾರಿತ್ರಿಕವಾದ ನೆಲೆಗೆ ಅವಧಾರಣೆ ನೀಡಿರುವುದು ಸ್ಪಷ್ಟವಾಗಿದೆ. ಆದರೂ ಮುಖ್ಯವೆನಿಸಿದ ಕೃತಿ, ಕೃತಿಕಾರರ ಬಗೆಗಿನ ದಾಖಲುಗಳು ದೀರ್ಘವಿದ್ದು, ಬರೆಹವೂ ಉತ್ಸಾಹದಿಂದ ಕೂಡಿದೆ. ಉಳಿದ ಕಡೆ ಮಾಹಿತಿಯಷ್ಟೇ ಮುಖ್ಯ. ಎಂದರೆ ಈ ಕೋಶ ಮಾದರಿ ರಚನೆಯೂ ಬುಡದಲ್ಲಿ ಆಯ್ಕೆಯ ನೆಲೆಗಳನ್ನು ಹೊಂದಿದೆ.

ಗ್ರೀಕ್ ಸಾಹಿತ್ಯವೆಂದರೂ ಇಲ್ಲಿ 'ಪ್ರಾಚೀನ'ವೆಂಬ ಮಾತೂ ಸೇರಬೇಕು. ಏಕೆಂದರೆ ಆಧುನಿಕ ಗ್ರೀಕ್ ಸಾಹಿತ್ಯದ ಬಗೆಗೆ ಇಲ್ಲಿ ಮಾಹಿತಿ ಇಲ್ಲ. ದಾಖಲುಗಳನ್ನು ಬರೆಯುವಾಗ ಹಲವಾರು ಕಡೆ ವಿವರಣೆ ಆವಶ್ಯವಿರುವ ಪದಗಳನ್ನು ಬಳಸಿದ್ದರೂ ಈ ಕೋಶದಲ್ಲಿ ಅಂಥ ಪದಗಳಿಗೆ ವಿವರಣೆ ದೊರಕುವುದಿಲ್ಲ. ತತ್ತ್ವ ಶಾಸ್ತ್ರಕ್ಕೆ ಸಂಬಂಧಿಸಿದ ಪದಗಳು ಇದಕ್ಕೆ ಉದಾಹರಣೆಗಳು. ಅಲ್ಲದೆ ಇಂಗ್ಲಿಷ್ ಪದಗಳನ್ನು ತದ್ಧಿತ ಪ್ರತ್ಯಯಗಳೊಡನೆ ಕನ್ನಡದಲ್ಲಿ ಬಳಸುವುದು ತಪ್ಪೇನೂ ಅಲ್ಲವಾದರೂ ಈ ಬಗೆಯ ರಚನೆಗಳಲ್ಲಿ ವಿವರಣೆಗಳು ಕೊರತೆ ಬೀಳಲು ಇದು ಕಾರಣವಾಗುತ್ತವೆ. (ಇದರಲ್ಲೂ ಹೆಲೆನಿಕ್ ಮತ್ತು ಹೆಲೆನಿಸ್ಟಿಕ್ ಪದಗಳ ಬಗ್ಗೆ ಗೊಂದಲವಿದ್ದಂತಿದೆ).

ಪ್ರಾಚೀನ ಗ್ರೀಕ್ ಸಾಹಿತ್ಯದ ಉತ್ಕೃಷ್ಟ ಕೃತಿಗಳ ಬಗ್ಗೆ ಪ್ರಾಥಮಿಕ ಪರಿಚಯ ವನ್ನು ಬಯಸುವವರಿಗೆ ಈ ಕೃತಿ ದೃಢ ವಿಶ್ವಾಸ ಹಾಗೂ ಉತ್ಸಾಹಗಳಿಂದ ನೆರ ವಾಗುವುದೆಂಬುದನ್ನು ಅಲ್ಲಗಳೆಯುವಂತಿಲ್ಲ.

# ಪ್ರಬಂಧ-ಪ್ರವಾಸ–ನಗೆಬರೆಹ

**ಕಿ. ರಂ. ನಾಗರಾಜ**

ಸಾಹಿತ್ಯ ವಾರ್ಷಿಕದ ಪ್ರಬಂಧ-ಪ್ರವಾಸ-ನಗೆಬರೆಹ ವಿಭಾಗಕ್ಕೆ 1981ರಲ್ಲಿ ಒಟ್ಟು 9 ಪುಸ್ತಕಗಳು ಬಂದಿವೆ. ಒಂದೊಂದೂ ಭಿನ್ನ ಆಸಕ್ತಿಗಳಿಂದ ಕೂಡಿದೆ. ತಮಿಳು ಸಾಹಿತ್ಯದ ದಿಗ್ಗಜ ಸ್ವಾಮಿನಾಥ ಅಯ್ಯರ್ ಅವರ ಅನುವಾದಿತ ಪ್ರಬಂಧಗಳು ಸೋದರ ಭಾಷೆಯ ಮೂಲಕ ಕನ್ನಡಕ್ಕೆ ಬಂದಿರುವ ಕೃತಿಯಾಗಿದೆ. ಅಡಿಗರು ಅನುವಾದಿಸಿರುವ ಆಯ್ದ ಪ್ರಬಂಧಗಳು ಇಂಗ್ಲಿಷ್ ಪ್ರಬಂಧ ಸಾಹಿತ್ಯದ ಪರಿಚಯ ಮಾಡಿಕೊಡುತ್ತದೆ. ನಮ್ಮ ಶ್ರೇಷ್ಠ ಪ್ರಬಂಧಕಾರರಲ್ಲಿ ಒಬ್ಬರಾದ ಪು.ತಿ.ನ. ಅವರು ಮೂವತ್ತು ವರುಷಗಳ ಅನಂತರದಲ್ಲಿ ಮತ್ತೆ ಪ್ರಬಂಧ ಸಂಕಲನ ಪ್ರಕಟಿಸಿದ್ದಾರೆ. ಕನ್ನಡದಲ್ಲಿ ಪ್ರಚಲಿತವಾಗಿರುವ ಪ್ರವಾಸ ಸಾಹಿತ್ಯ ಕ್ಷೇತ್ರಕ್ಕೆ ಕು. ಶಿ. ಹರಿದಾಸಭಟ್ಟ, ಎಸ್. ವೆಂಕಟರಾಂ ಇವರ ಕೃತಿಗಳು ಸೇರುತ್ತವೆ.

ಲಲಿತ ಪ್ರಬಂಧಗಳ ರಚನೆ ಕ್ರಮೇಣ ಕಡಿಮೆಯಾಗುತ್ತ ಬಂದಿರುವುದನ್ನು ನಾವೆಲ್ಲ ಗಮನಿಸುತ್ತಿದ್ದೇವೆ. ಸಣ್ಣಕತೆ, ಆಯಾ ವಿಷಯಗಳ ಬಗೆಗೆ ಗಂಭೀರ ಬರವಣಿಗೆ ಹೆಚ್ಚಿನ ಪ್ರಮಾಣದಲ್ಲಿ ಬರುತ್ತಿರುವುದರಿಂದ-ಹೀಗೆ ಆಗುತ್ತಿರಬಹುದೆಂದು ಸೂಚಿಸ ಬಹುದು.

ಯದುಗಿರಿಯಲ್ಲಿ ಗೆಳೆಯರು : ಪು.ತಿ. ನರಸಿಂಹಾಚಾರ್

ಪು.ತಿ.ನ. ಕನ್ನಡ ಪ್ರಬಂಧ ಸಾಹಿತ್ಯಕ್ಕೆ ತುಂಬ ವಿಶಿಷ್ಟವಾದ ಬರಹಗಳನ್ನು ಸೇರಿಸಿದವರು. 'ಈಚಲು ಮರದ ಕೆಳಗೆ', 'ರಾಮಾಚಾರಿಯ ನೆನಪು' ಅವರ ವಿಶಿಷ್ಟತೆಗೆ ಸಾಕ್ಷಿಯಾಗಿದೆ. ಕಳೆದ ಮೂವತ್ತು ವರ್ಷಗಳ ಅವಧಿಯಲ್ಲಿ ಬರೆದ 'ಯದುಗಿರಿಯಲ್ಲಿ ಗೆಳೆಯರು' ಸಂಕಲನ ಅವರ ವಿಶಿಷ್ಟತೆಗೆ ಮತ್ತೂ ಕೆಲವು ಅಂಶಗಳನ್ನೂ ಸೇರಿಸಿದೆ.

ಪು.ತಿ.ನ. ಅವರ ಗದ್ಯ ಸುಗಮ್ಯವೆನ್ನಬಹುದಾದ ಎಲ್ಲ ಗುಣಗಳನ್ನು ಪಡೆದು ಕೊಂಡದ್ದು. ಯಾವ ಧಾವಂತವೂ ಇಲ್ಲದೆ ಸೂಕ್ಷ್ಮ ವಿವರಗಳನ್ನು ಕಟ್ಟಿಕೊಳ್ಳುವಂಥದ್ದು. ಯದುಗಿರಿಗೆ ಬಂದ ಸ್ನೇಹಿತರು ಕೆಲವು ದಿನ ಅಲ್ಲಿಯೇ ಉಳಿಯುತ್ತಾರೆ. ಅವರೊಂದಿಗೆ ಕಳೆಯುವ ದಿನಗಳ ಮೂಲಕ ಈ ಪ್ರಬಂಧಗಳು ರೂಪುಗೊಳ್ಳುತ್ತವೆ. ಇಂಥ ಒಂದು 'ಕಾಲ್ಪನಿಕ'ದ ಮೂಲಕ ಪುತಿನ ಅವರ 'ವಿಶಿಷ್ಟತೆ'ಯಾದ ಚಿಂತನಶೀಲತೆಯನ್ನು ಆವರಿಸುತ್ತದೆ.

ಮನುಷ್ಯ ಸ್ವಭಾವದ ಸೂಕ್ಷ್ಮಗಳು, ಅವನ ಭಾವ ವಿವರಗಳು ನಿಸರ್ಗದ ನಿಗೂಢ ವಿವರಗಳು-ಪು.ತಿ.ನ. ಅವರ ಪ್ರಬಂಧಗಳಲ್ಲಿ ತುಂಬ ಅರ್ಥಪೂರ್ಣವಾಗಿ ಬಳಕೆಯಾಗುವುದನ್ನು ಕಾಣುತ್ತೇವೆ. ಚಿತ್ರನಿರ್ಮಾಣ, ಸನ್ನಿವೇಶ ನಿರ್ಮಾಣದಲ್ಲಿ ಪ್ರಕಟಗೊಳ್ಳುವ ಅನಿರೀಕ್ಷಿತತೆ ಓದುಗನನ್ನು ಎಲ್ಲ ಹಂತಗಳಲ್ಲಿಯೂ ಎಚ್ಚರವಾಗಿರುವಂತೆ ಮಾಡುತ್ತದೆ.

ಇವೆಲ್ಲಕ್ಕೂ ಮಿಗಿಲಾಗಿ ಆತ್ಮೀಯ ನಿವೇದನೆಯ ಸ್ವರೂಪ ಈ ಪ್ರಬಂಧಗಳಿಗೆ ಹೊಸ ಶೋಭೆಯನ್ನು ತಂದಿದೆ.

ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ ಮತ್ತು ಇತರ ಪ್ರಬಂಧಗಳು: ಬಿ. ಜಿ. ಎಲ್. ಸ್ವಾಮಿ

ಮಹಾಮಹೋಪಾಧ್ಯಾಯ ದಾಕ್ಷಿಣಾತ್ಯ ಕಲಾನಿಧಿ ಎಂದು ಹೆಸರಾದ ಡಾ. ಸ್ವಾಮಿನಾಥ ಅಯ್ಯರ್ ತಮಿಳು ಸಂಸ್ಕೃತಿಯ ಶ್ರೇಷ್ಠ ಚಿಂತಕರು. ತಮಿಳು ಗದ್ಯದ ಸೂಕ್ಷ್ಮತೆಗಳನ್ನು ತಮ್ಮ ಎಲ್ಲ ರೀತಿಯ ಬರವಣಿಗೆಗಳಲ್ಲಿಯೂ ಅಭಿವ್ಯಕ್ತಿ ಮಾಡಿದವರು. ಗದ್ಯಶೈಲಿಯ ವಿಕಾಸದಲ್ಲಿ ಇವರ ಬರವಣಿಗೆಗಳು ಒಂದು ಮುಖ್ಯ ಮೈಲಿಗಲ್ಲು ಎಂದು ಅನುವಾದಕರು ತಿಳಿಸಿದ್ದಾರೆ.

ಈ ಸಂಕಲನದಲ್ಲಿ ಸ್ವಾಮಿನಾಥ ಅಯ್ಯರ್ ಅವರ ನಾಲ್ಕು ಪುಸ್ತಕಗಳಿಂದ, ಆಯ್ದ ಪ್ರಬಂಧಗಳನ್ನು ಸಂಕಲಿಸಿ ಅನುವಾದಿಸಿದ್ದಾರೆ. 'ನಾನು ಕಂಡದ್ದೂ ಕೇಳಿದ್ದು', 'ನೆನಪಿನ ಮಂಜರಿ', 'ನಲ್ಗದ್ಯಮಾಲೆ' ಹಾಗೂ 'ಕೃಷ್ಣ ಅಯ್ಯರ್ ಜೀವನ ಚರಿತ್ರೆ' ಈ ಪುಸ್ತಕಗಳಲ್ಲಿನ ಲೇಖನಗಳನ್ನು ಪ್ರಸ್ತುತ ಅನುವಾದ ಒಳಗೊಳ್ಳುತ್ತದೆ.

ಒಟ್ಟು ಇಪ್ಪತ್ಮೂರು ಪ್ರಬಂಧಗಳಿವೆ. ಗ್ರಂಥ ಸಂಪಾದನೆ, ಕವಿಕತೆ, ಕಥಾನಕ ಮತ್ತು ಸಂಗೀತಕ ಎಂಬ ನಾಲ್ಕು ಭಾಗಗಳಲ್ಲಿ ಐಯ್ಯರ್ ಅವರ ಲೇಖನಗಳು ಸಂಕಲಿತವಾಗಿದೆ. ಈ ಎಲ್ಲ ಕ್ಷೇತ್ರಗಳಲ್ಲಿ ನಿರಂತರವಾಗಿ ಕೆಲಸ ಮಾಡಿದ ಸ್ವಾಮಿನಾಥ ಅಯ್ಯರ್ ಪಾರಂಪರಿಕ ಹಾಗೂ ಆಧುನಿಕ ತಿಳುವಳಿಕೆಗಳಿಂದ ಪರಿಷ್ಕಾರಗೊಂಡ ಪ್ರಖರ ಆಲೋಚನೆಗಳನ್ನು ಪ್ರಾಚೀನ ತಮಿಳು ಸಾಹಿತ್ಯಕ್ಕೆ ಸಂಬಂಧಿಸಿದಂತೆ ಮಾಡಿದ್ದಾರೆ. ಸಂಶೋಧನೆಯ ಅವರ ಗಾಢ ಅನುಭವದಿಂದ ಗದ್ಯ ಶೈಲಿಗೆ ಬಂದಿರುವ ಮೆರುಗನ್ನು ಕನ್ನಡ ಅನುವಾದದ ಮೂಲಕ ತಿಳಿಯಬಹುದು.

ಅನೇಕ ಜ್ಞಾನಶಾಖೆಗಳ ತಿಳಿವು ಸಾಹಿತ್ಯದ ಸೂಕ್ಷ್ಮಗಳನ್ನು ಗ್ರಹಿಸುವುದರಲ್ಲಿ ಹೇಗೆ ಪ್ರವೃತ್ತವಾಗಬೇಕೆನ್ನುವುದಕ್ಕೆ ಇಲ್ಲಿನ ಪ್ರಬಂಧಗಳು ತಕ್ಕ ಉದಾಹರಣೆಗಳೆಂದರೆ ತಪ್ಪಾಗಲಾರದು. ತೌಲನಿಕ ಸಾಹಿತ್ಯದ ಬೆಳವಣಿಗೆಯ ಈ ದಿನಗಳಲ್ಲಿ ತಮಿಳು ಸಾಹಿತ್ಯದ ವಿದ್ವತ್ ವಲಯವನ್ನು ಅಲ್ಲಿನ ವಿದ್ವಾಂಸರ ಆಶಯಗಳು ಹೇಗೆ ಪ್ರಕಟಗೊಳ್ಳುತ್ತಿದೆ ಎಂಬುದನ್ನು ತಿಳಿಯಲು ಈ ಕೃತಿ ಸಹಕಾರಿ. ತುಂಬ ನೇರವಾದ, ಹೃದ್ಯವಾದ ಶೈಲಿ ಸ್ವಾಮಿನಾಥ ಅಯ್ಯರ್ ಅವರದು ಎಂಬುದು ಬಿ.ಜಿ.ಎಲ್.

ಸ್ವಾಮಿಯವರ ಅನುವಾದದ ಮೂಲಕ ನಮ್ಮ ಅನುಭವಕ್ಕೆ ಬರುತ್ತದೆ. ಹೊಸ ವಿದ್ಯಾಭ್ಯಾಸ ಪದ್ಧತಿ ಹಾಗೂ ಸಾಹಿತ್ಯದ ಪ್ರವಚನ ವಿಶ್ಲೇಷಣೆಗಳೊಂದಿಗೆ ಭಾರತೀಯ ಅಧ್ಯಯನ ಹಾಗೂ ಶೋಧನೆಯ ಸ್ವರೂಪ ಸೇರಿದಾಗ ಏರ್ಪಡಬಹ ದಾದ ಕ್ರಿಯಾಶೀಲ ವಿಚಾರಧಾರೆಯ ನೋಟವನ್ನು ಈ ಕೃತಿ ಪ್ರತಿಬಿಂಬಿಸುತ್ತದೆ. ಹಳೆಯ ಸಾಹಿತ್ಯ ಅಧ್ಯಯನದ ನೆಲೆಗಳನ್ನು ಯಾವ ಪೂರ್ವಗ್ರಹಗಳೂ ಇಲ್ಲದೆ ಅಧ್ಯಯನ ಮಾಡುವ ಕ್ರಮವನ್ನು ಈ ಪುಸ್ತಕದ ಉದ್ದಕ್ಕೂ ತಿಳಿಯಬಹುದು.

ಪುಸ್ತಕದ ಮತ್ತೊಂದು ವೈಶಿಷ್ಟ್ಯವೆಂದರೆ ಗಾಢವಾದ ಸಂಶೋಧನೆಯ ಮಧ್ಯೆ ಪ್ರಕಟಗೊಳ್ಳುವ ತಿಳಿಯಾದ ಹಾಸ್ಯ, ಆತ್ಮೀಯವೂ ವೈಯಕ್ತಿಕವೂ ಆದ ಘಟನೆಗಳ ನಿರೂಪಣೆ ಇವುಗಳಿಂದಾಗಿ ಸಂಶೋಧನೆಗೆ ಹೊಸ ಮೆರುಗು ಬಂದಿದೆ. ತಮಿಳು ಸಾಹಿತ್ಯದ ಬಗೆಗೆ ಕನ್ನಡದಲ್ಲಿ ತಿಳಿಯಬೇಕೆನ್ನುವವರಿಗೆ ಇದೊಂದು ಮುಖ್ಯ ಕೃತಿ. ಸಂಶೋಧನೆ, ಗ್ರಂಥ ಸಂಪಾದನೆ, ವಿಮರ್ಶೆ ಇವುಗಳು ಪರಸ್ಪರ ಸಂಬಂಧಿಸುವ ಬಗೆಯ ದೃಷ್ಟಿಯಿಂದ ಅನೇಕ ಕುತೂಹಲಗಳನ್ನು ಇಲ್ಲಿ ಕಾಣಬಹುದು.

ಆಯ್ದ ಪ್ರಬಂಧಗಳು : ವಿವಿಧ ಲೇಖಕರು : ಅನುವಾದ: ಗೋಪಾಲಕೃಷ್ಣ ಅಡಿಗ

ಕನ್ನಡದಲ್ಲಿ ಲಲಿತ ಪ್ರಬಂಧ ಒಂದು ಸಾಹಿತ್ಯ ರೂಪವೆನ್ನಿಸಿಕೊಂಡರೂ ಇತ್ತೀಚಿನ ದಿನಗಳಲ್ಲಿ ಅಂಥ ಬರವಣಿಗೆಗೆ ಹೆಚ್ಚು ಆರ್ಕರ್ಷಣೆ ಇಲ್ಲ. ಬರವಣಿಗೆಯೂ ಅಂಥ ಹೇಳಿಕೊಳ್ಳುವ ಪ್ರಮಾಣದಲ್ಲಿ ಇಲ್ಲ.

ಪ್ರಸ್ತುತ ಅನುವಾದ ಪಾಶ್ಚಾತ್ಯ ಸಾಹಿತ್ಯದ ಮಹತ್ವದ ಪ್ರಬಂಧಕಾರರಾದ-ಗೋಲ್ಡ್‌ಸ್ಮಿತ್, ಲೇ ಹಂಟ್, ಫ್ರಾನ್ಸಿಸ್ ಬೇಕನ್, ಎಡಿಸನ್, ಸ್ಟೀಲ್, ಸ್ಟೀವನ್‌ಸನ್, ಹ್ಯಾಜ್‌ಲಿಟ್, ಥಾಮಸ್ ಡಿ ಕ್ವಿನ್ಸೀ ಹಾಗೂ ಜಾನ್ ರಸ್ಕಿನ್ ಅವರುಗಳ ಪ್ರಬಂಧ ಗಳಿವೆ. ಈ ಎಲ್ಲ ಪ್ರಬಂಧಕಾರರು ಇಂಗ್ಲಿಷ್ ಸಾಹಿತ್ಯದಲ್ಲಿ ತುಂಬ ಪ್ರಸಿದ್ಧಿಯನ್ನು ಪಡೆದವರು, ಅಲ್ಲದೆ ಪ್ರಬಂಧ ಸಾಹಿತ್ಯಕ್ಕೆ ದೊಡ್ಡ ಗೌರವವನ್ನು ತಂದುಕೊಟ್ಟವರು. ಭಾಷೆಯ ಸೂಕ್ಷ್ಮತೆ, ಸನ್ನಿವೇಶ ನಿರ್ಮಾಣ, ತಿಳಿಹಾಸ್ಯ, ವಿಷಾದದ ಛಾಯೆ, ಮನುಷ್ಯ ಸ್ವಭಾವದ ಸೂಕ್ಷ್ಮತೆ-ರೂಕ್ಷತೆಗಳು ಈ ಪ್ರಬಂಧಕಾರರ ಪ್ರಬಂಧಗಳಲ್ಲಿ ಕಾಣುತ್ತೇವೆ. ಇಲ್ಲಿನ ಬಹುತೇಕ ಪ್ರಬಂಧಗಳು-ಶಾಲಾ ಕಾಲೇಜುಗಳ ಪಠ್ಯಗಳಲ್ಲಿ ಈಗಾಗಲೇ ಪರಿಚಿತವಿರುವಂಥದ್ದೂ ಆಗಿವೆ. ಬೇಕನ್ನನ 'ಗ್ರಂಥ ವ್ಯಾಸಂಗ' ಎಡಿಸನ್ನನ 'ನ್ಯಾಯದೇವತೆಯ ದರ್ಶನ', ರಸ್ಕಿನ್ನನ 'ಅಭಿರುಚಿ ಮತ್ತು ಶೀಲ ಸ್ವಭಾವ ದಂಥ ಪ್ರಬಂಧಗಳು ವಿಚಾರಪೂರ್ಣ ಚಿಂತನೆಯನ್ನು ಬೆಳೆಸುತ್ತವೆ.

ಅಡಿಗರು ಈ ಪ್ರಬಂಧಗಳನ್ನು ತುಂಬ ಅಚ್ಚುಕಟ್ಟಾಗಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಪ್ರಬಂಧ ಸಾಹಿತ್ಯದ ಶ್ರೇಷ್ಠ ಬರಹಗಳ ಈ ಅನುವಾದ ಕನ್ನಡದ ಓದುಗನಿಗೆ ತುಂಬಾ ಉಪಯುಕ್ತ.

ಹುರಿಗಾಳು : ಗೀತಾ ಕುಲಕರ್ಣಿ

ಇದೊಂದು ನಗೆಬರಹಗಳ ಸಂಕಲನ. ಹನ್ನೆರಡು ನಗೆಬರಹಗಳಿವೆ. ಮಾಮೂಲು ಧಾಟಿಯಲ್ಲಿರುವ ಈ ಬರೆಹಗಳು ನಗೆಯ ಬರೆಹಕ್ಕೆ ಬೇಕಾದ ಮನೋಭಾವವನ್ನು ಪಡೆದಿಲ್ಲ. ನಗೆಯ ಬರೆಹಕ್ಕೆ ಅಗತ್ಯವಾದ ಸೂಕ್ಷ್ಮತೆಯನ್ನು ಇಲ್ಲಿನ ಯಾವ ಪ್ರಬಂಧವೂ ಪಡೆದುಕೊಂಡಿಲ್ಲ. ಮಿಗಿಲಾಗಿ ಲೋಕಾಭಿರಾಮದ ಹರಟೆಯ ಮಟ್ಟದಲ್ಲಿ ಮಾತ್ರ ನಿಲ್ಲುತ್ತದೆ.

ನಗೆಬರಹದ ಯಶಸ್ಸು-ಸನ್ನಿವೇಶ ನಿರ್ಮಾಣ ಮತ್ತು ಮಾತಿನ ಮೊನಚು ಹಾಗೂ ಜಾಣ್ಮೆಯ ಮೇಲೆ ಆಧರಿಸಿದೆ. ಅಲ್ಲದೆ ಲೇಖಕ ತಾನು ಕಟ್ಟುವ ವಸ್ತುವನ್ನು-ಸಮರ್ಥ ವಿನ್ಯಾಸದಲ್ಲಿ ಸಂಯೋಜಿಸಬೇಕಾಗುತ್ತದೆ. ಇಡೀ ಪುಸ್ತಕವನ್ನು ಓದಿದ ಮೇಲೆ ಮತ್ತೆ ನೆನೆಯಬೇಕೆಂಬ ಅಂಶಗಳು ತುಂಬಾ ಕಡಿಮೆ. ಬರವಣಿಗೆಯಲ್ಲಿ ಸಲೀಸುತ ನವಿರುವುದರಿಂದ ಓದಿಕೊಂಡು ಹೋಗಲು ಕಷ್ಟವೇನೂ ಆಗುವುದಿಲ್ಲ. ನಗೆಬರಹಗಳಿಗೆ ಹಿನ್ನೆಲೆಯಾಗಿ ಬರುವ ವಿಷಾಧದ ಛಾಯೆ ಸಂದರ್ಭದ ಒತ್ತಡದಿಂದ ಹುಟ್ಟದೆ ಲೇಖಕರು ಒತ್ತಾಯದಿಂದ ಸೇರಿಸಿದಂತೆ ಇದೆ.

ಚಿನ್ನದ ಕತ್ತಿ : ಶಿವರಾಮು

ಹಾಸ್ಯವಿಡಂಬನೆಗಳು ಸಮ್ಮಿಶ್ರವಾಗಿರುವ ಪ್ರಬಂಧಗಳೆಂದು ಲೇಖಕರು ತಾವೇ ಬರೆದಿರುವ 'ಸ್ವಸನ'ದಲ್ಲಿ ಹೇಳಿಕೊಂಡಿದ್ದಾರೆ. ಹನ್ನೊಂದು ಪ್ರಬಂಧಗಳಿರುವ ಈ ಸಂಕಲನಕ್ಕೆ ಶಿವರಾಮ ಕಾರಂತರು 'ಮುನ್ನುಡಿ' ಬರೆದಿದ್ದಾರೆ. ಮುನ್ನುಡಿಯ ಕೆಲವು ಸಾಲುಗಳನ್ನು ತೆಗೆದು ಬರೆಯುತ್ತೇವೆ. "ವಿಡಂಬನ ಸಾಹಿತ್ಯ ನಮ್ಮಲ್ಲಿ ಸಾಕಷ್ಟು ಬಲಿಯದ ರೀತಿ. ಇದು ಖಂಡನೆಗೆ ಬಳಸುವ ವಾಗಾಯುಧ! ನೋವುಗೊಂಡವನೂ ಮೊದಲು ನಕ್ಕು. ಅನಂತರ ಸಿಟ್ಟಿಗೇಳುವ ಪರಿಣಾಮ ತರುವಂಥದು. ಅದಕ್ಕೆ ಊಹಾಶಕ್ತಿಬೇಕು. ಒಂದು ವಾಕ್ಯದಲ್ಲೋ ಮಾತಿನಲ್ಲೋ ಸನ್ನಿವೇಶದಲ್ಲೋ ಬಹುಜನರು ಕಾಣುವ ಅರ್ಥದ ಬದಲು, ತದ್ವಿರುದ್ಧವಾದ ಅರ್ಥ ಹೊರಡಿಸುವ ಚಮತ್ಕಾರಕ್ಕೆ ಈ ಸಾಹಿತ್ಯದ ಜೀವಾಳ."

ಇನ್ನು ಈ ಪ್ರಬಂಧಗಳನ್ನು ಕುರಿತು: ಈ ಸಂಕಲನದಲ್ಲಿನ ಅನೇಕ ಪ್ರಬಂಧ ಗಳಲ್ಲಿ ನಮ್ಮ ಈ ಹೊತ್ತಿನ ರಾಜಕೀಯ ವಿಡಂಬನೆಯ ಉದ್ದೇಶವನ್ನು ಗುರುತಿಸ ಬಹುದಾಗಿದೆ. ಆದರೆ ಲೇಖಕರ ಅದನ್ನು ಒಂದು ಕೇಂದ್ರಕ್ಕೆ ತರುವುದಾಗದೆ ಕೈಚೆಲ್ಲಿದ್ದಾರೆ. ಎಲ್ಲ ಪ್ರಬಂಧಗಳಲ್ಲಿಯೂ ಏಕತಾನತೆ ಇದೆ. ವೈವಿಧ್ಯವಿಲ್ಲ. ಕೆಲವೊಮ್ಮೆ ತಮ್ಮ ಪೂರ್ವನಿರ್ಧಾರಿತ ನಿಲುವುಗಳನ್ನು ಪ್ರಬಂಧಗಳಲ್ಲಿ ಹೇರುವುದರಿಂದ ಪ್ರಬಂಧಕ್ಕೆ ಸಮರ್ಥ ಚಾಲನೆ ಒದಗಿ ಬರುವುದಿಲ್ಲ.

"ಈ ಬರಹವನ್ನು ಕೊಂಡು ಓದಿದವರು ತಮ್ಮಲ್ಲಿ ಚಿನ್ನದ ಕತ್ತಿ ಇದೆ ಎಂದು ಯಾರಿಗೂ ತಿಳಿಸಬಾರದು. ತಿಳಿಸಿದ್ದಾದರೆ ಅದನ್ನು ಎರವಲುಕೊಟ್ಟು ಕಳೆದುಕೊಳ್ಳ ಬೇಕಾಗುತ್ತದೆ" (ಶಿವರಾಮ ಕಾರಂತರ ಮುನ್ನುಡಿಯಿಂದ).

ಪ್ರದಕ್ಷಿಣೆ : ಎಸ್. ವೆಂಕಟರಾಮ್

ಸ್ಥೂಲವಾಗಿ ಪ್ರವಾಸ ಸಾಹಿತ್ಯವೆನ್ನಿಸಿಕೊಳ್ಳುವ ಈ ಪುಸ್ತಕ ಒಳ ಹೊಕ್ಕು ನೋಡಿದರೆ ಹಾಗಲ್ಲವೆಂದು ಗೊತ್ತಾಗುತ್ತದೆ. ಲೇಖಕರು ಇದನ್ನು ರಾಜಕೀಯ ವಿಶ್ವಪರ್ಯಟನವೆಂದು ಕರೆದಿದ್ದಾರೆ. ರಷ್ಯಾದ ಟ್ರೇಡ್ ಯೂನಿಯನ್ ಆಹ್ವಾನದ ಮೇರೆಗೆ ಅಲ್ಲಿ ನಡೆಸಿದ ಪ್ರವಾಸ, ಜಿನೀವಾ ಕಾರ್ಮಿಕ ಸಮ್ಮೇಳನದ ಅನಂತರ ಪ್ಯಾರಿಸ್, ಲಂಡನ್‌ಗಳಿಗೆ ಭೇಟಿ ನೀಡಿದ್ದು ಹಾಗೂ ಅಮೆರಿಕಾ, ಟೋಕಿಯೊ ಹಾಂಗ್‌ಕಾಂಗ್ ಪ್ರವಾಸ ಈ ಪುಸ್ತಕದ ಮುಖ್ಯ ಹಿನ್ನೆಲೆ. ತಮ್ಮ ಪ್ರವಾಸ ಕಾಲದಲ್ಲಿ ಎರಡು ಮೂರು ದಿನಕ್ಕೊಮ್ಮೆ ಲಹರಿ ಬಂದಾಗ ವೀಕ್ಷಣೆ, ಅನ್ನಿಸಿಕೆ, ಚಿಂತನೆಯ "ದಿನಚರಿ ಬರೆಯುತ್ತಿದ್ದೆ" ಎಂದು ಲೇಖಕರು ಹೇಳಿದ್ದಾರೆ. ಈ ಕ್ರಮ ಪುಸ್ತಕದ ಉದ್ದಕ್ಕೂ ಖಚಿತವಾಗಿ ಕಾಣಬಹುದು.

ಭಾರತದ ರಾಜಕಾರಣ, ಅಂತರರಾಷ್ಟ್ರೀಯ ರಾಜಕಾರಣದ ಸೂಕ್ಷ್ಮ ವಿಮರ್ಶೆ ಕೃತಿಯಲ್ಲಿ ಮೈತಳೆಯುತ್ತದೆ. ನೋಡುವ ಘಟನೆ, ಒಳಗೊಳ್ಳುವ ಸನ್ನಿವೇಶಗಳನ್ನು ಅನೇಕ ಮಟ್ಟಗಳಲ್ಲಿ ಚಿಂತನೆಗೆ ತಂದುಕೊಳ್ಳುವ ಲೇಖಕರ ದೃಷ್ಟಿಯಿಂದಾಗಿ ಈ ಪುಸ್ತಕ ಕೇವಲ ಪ್ರವಾಸ ಕಥನವಾಗದೆ ಭಾರತೀಯ ರಾಜಕಾರಣಿ, ಕಾರ್ಮಿಕ ನಾಯಕ ನೊಬ್ಬನ ಕ್ರಿಯಾಶೀಲ ಚಟುವಟಿಕೆಗಳ ಸಮರ್ಥ ದಾಖಲೆಗಳಾಗಿವೆ.

ದೂರದಿಂದ ಸ್ಥೂಲವಾಗಿ ಕಾಣುವ ರಾಜಕಾರಣದ ಪರಿಗಳು – ಬದುಕಿನ ಘಟನೆ ಹಾಗೂ ಸನ್ನಿವೇಶಗಳಲ್ಲಿ ಬೇರೆಯೇ ಆಗಿಬಿಡುತ್ತದೆ ಎಂಬ ನಿಲುವು ವೆಂಕಟರಾಂ ಅವರ ಪುಸ್ತಕದ ಮೂಲಕ ಪ್ರಕಟಗೊಳ್ಳುತ್ತದೆ. ಒಂದು ದೇಶದ ಘೋಷಿತ ರಾಜಕೀಯ ನೆಲೆಗೂ – ಬದುಕಿನ ಪ್ರಕ್ರಿಯೆಗಳಿಗೂ ಇರುವ ಅಂತರವನ್ನು ಲೇಖಕರು ತುಂಬಾ ಚೆನ್ನಾಗಿ ಬಲ್ಲವರೆಂಬುದನ್ನು ಕೃತಿಯ ಅನೇಕ ಸಂದರ್ಭಗಳು ಸಾಬೀತುಪಡಿಸುತ್ತದೆ. ಯು. ಆರ್. ಅನಂತಮೂರ್ತಿಯವರು ಈ ಪುಸ್ತಕಕ್ಕೆ ತುಂಬ ಮೌಲಿಕವಾದ ಮುನ್ನುಡಿ ಬರೆದಿದ್ದಾರೆ. ಅದರಿಂದ ಕೆಲವು ಮಾತುಗಳನ್ನು ತೆಗೆದು ಬರೆಯುತ್ತೇನೆ. "ತನ್ನ ದೇಶಕ್ಕೂ ಇನ್ನೊಂದು ದೇಶಕ್ಕೂ ನಡುವೆ ಇರುವ ಸಾಮ್ಯ, ವಿರೋಧಗಳನ್ನು ವೆಂಕಟರಾಂ ಗ್ರಹಿಸುವ ಬಗೆಯಲ್ಲಿ...ಮುಜುಗರ ವಾಗಲೀ, ಕೀಳರಿಮೆಯಾಗಲೀ, ಜಂಭವಾಗಲೀ ಇಲ್ಲದಿರುವುದು ಈ ಪ್ರವಾಸ ಕಥನದ ವೈಶಿಷ್ಟ್ಯವೆನ್ನಬಹುದು. ಲೇಖಕರಿಗೆ ... ಭಾರತ ಸಂಸ್ಕೃತಿಯನ್ನು ಕಂಡಾ ಪಟ್ಟೆ ಹೊಗಳಿ ಅವಮಾನ ಮುಚ್ಚಿಕೊಳ್ಳುವ ಅಗತ್ಯವಿಲ್ಲ. ಅಥವಾ ಈ ಯೂರೋಪಿ ಯನ್ನರ ಸಾಧನೆ ಯಾವುದೋ ದೈವದತ್ತವಾದ ಅವರ ಹಿರಿಮೆಯಿಂದ ಉಂಟಾದದ್ದು ಎಂಬ ಬೆರಗೂ ಇಲ್ಲ. ಈ ಹದ ಬಹಳ ವಿಶೇಷವಾದ್ದು, ಭಾರತೀಯರಲ್ಲಿ ತುಂಬ ವಿರಳವಾದ್ದು."

ಈ ಪುಸ್ತಕ ಓದುಗನಿಗೆ ವಿದೇಶದ ಅನುಭವಗಳನ್ನು ಕೊಡುತ್ತಲೇ ಜಗತ್ತಿನ ರಾಜಕಾರಣದ, ಕಾರ್ಮಿಕರಂಗದ ಸಮಕಾಲೀನ ಒತ್ತಡಗಳ ಪರಿಚಯವಾಗುತ್ತದೆ.

ರಾಜಕೀಯ ಬಣಗಳ ಒಳ ಹೊರಗುಗಳು ಭಾರತದ ಸಮಾಜವಾದೀಯ ದೃಷ್ಟಿಯ ಮೂಲಕ ನಿರ್ವಚನಕ್ಕೆ ಗುರಿಯಾಗುತ್ತಲೇ ಇರುತ್ತದೆ. ಸೂಕ್ಷ್ಮ ಸಂವೇದನೆ. ರಾಜಕೀಯ ಪ್ರಜ್ಞೆಯ ಲೇಖಕರ ಈ ಪುಸ್ತಕ ಕನ್ನಡ ಪ್ರವಾಸ ಸಾಹಿತ್ಯದಲ್ಲಿ ತನ್ನದೇ ಆದ ವಿಶಿಷ್ಟತೆಯನ್ನು ಪಡೆದುಕೊಂಡಿದೆ.

ಜಗದಗಲ : ಕು. ಶಿ. ಹರಿದಾಸ ಭಟ್ಟ

ಇದೊಂದು ಪ್ರವಾಸ ಸಾಹಿತ್ಯ ಸಂಕಲನ. 'ನನ್ನದು ಈ ಕನ್ನಡ ನಾಡು', 'ಮೇಘಾಲಯದ ಹಾದಿಯಲ್ಲಿ', 'ಹಾಂಕಾಂಗ್‌ನಲ್ಲಿ ಐದು ದಿನ', 'ಜಪಾನ್‌ನಲ್ಲಿ ನಮ್ಮ ಯಕ್ಷಗಾನ', 'ಪ್ರಯಾಸದ ಉದ್ಯಮ' ಎಂಬ ಐದು ಪ್ರಬಂಧಗಳು ಇದರಲ್ಲಿ ಸಂಕಲಿತವಾಗಿವೆ.

ಇದರಲ್ಲಿನ ಮೂರು ಪ್ರಬಂಧಗಳು ವಿದೇಶ ಪ್ರವಾಸದ ಅನುಭವದ ವಿವರಗಳನ್ನು ಆಧರಿಸಿದ್ದು. ಇನ್ನೆರಡು ಪ್ರಬಂಧಗಳಲ್ಲಿ ಒಂದು ಕನ್ನಡ ನಾಡನ್ನು ಕುರಿತದ್ದು; ಮತ್ತೊಂದು ಮೇಘಾಲಯದ ಪ್ರವಾಸಕ್ಕೆ ಸಂಬಂಧಿಸಿದ್ದು.

'ನನ್ನದು ಈ ಕನ್ನಡ ನಾಡು' ಪ್ರಬಂಧ ಕನ್ನಡ ನಾಡಿನ ಚಿತ್ರವನ್ನು ಕೊಡುವುದರೊಂದಿಗೆ ಆರ್ಥಿಕ ಪರಿಸ್ಥಿತಿಯ ಪರಿಚಯವನ್ನು ಮಾಡಿಕೊಡುತ್ತದೆ. ಅಸ್ಸಾಂ ಮತ್ತು ಮೇಘಾಲಯಗಳ ಪರಿಚಯದೊಂದಿಗೆ ಅಲ್ಲಿನ ಸಾಂಸ್ಕೃತಿಕ ವಿಶಿಷ್ಟತೆಗಳನ್ನು ಮೇಘಾಲಯದ ಹಾದಿಯಲ್ಲಿ ಪ್ರಬಂಧ ಮಾಡಿಕೊಟ್ಟಿದೆ.

ಶಿವರಾಮ ಕಾರಂತರೊಂದಿಗೆ ಹಾಂಕಾಂಗ್, ಜಪಾನ್‌ಗಳಲ್ಲಿ ದಕ್ಷಿಣ ಕನ್ನಡದ ಯಕ್ಷಗಾನದ ಗುಂಪನ್ನು ಕರೆದೊಯ್ದು ಬಂದ ಅನುಭವಗಳ ಭಾಗ ಈ ಪುಸ್ತಕದ ಮುಖ್ಯ ಭಾಗ. ಕನ್ನಡ ನಾಡಿನ ವೈಶಿಷ್ಟ್ಯಗಳಲ್ಲಿ ಒಂದಾದ ಯಕ್ಷಗಾನ ವಿದೇಶದಲ್ಲಿ ಪಡೆದ ಯಶಸ್ಸು ಆಕರ್ಷಣೆಯ ಸ್ವರೂಪವನ್ನು ಅಲ್ಲಿನ ಕಲಾಸಕ್ತರು ಹಾಗೂ ಇನ್ನಿತರರೊಂದಿಗೆ ತಾವು ಮತ್ತು ತಮ್ಮ ಪಡೆದ ಅನುಭವಗಳು ತುಂಬ ಆಸಕ್ತಿಯನ್ನು ಹುಟ್ಟಿಸುತ್ತವೆ.

ಅಧ್ಯಯನದ ಹಾದಿಯಲ್ಲಿ : ಜಯತೀರ್ಥ ರಾಜಪುರೋಹಿತ

ಅನೇಕ ಆಸಕ್ತಿಗಳಿಗೆ ಸಂಬಂಧಿಸಿದ ಪ್ರಬಂಧಗಳನ್ನು ಈ ಪುಸ್ತಕದಲ್ಲಿ ಕಾಣುತ್ತೇವೆ. ಆಡಳಿತ ವ್ಯವಸ್ಥೆ, ಸರ್ಕಾರ ಮತ್ತು ಸಾಮಾನ್ಯ ನಾಟಕ, ಕಾವ್ಯ, ವಿಮರ್ಶೆ ಹಾಗೂ ಸಂಗೀತ ಇವುಗಳನ್ನು ಕುರಿತು ನಡೆಸಿರುವ ಲಹರಿ ಈ ಪ್ರಬಂಧಗಳ ಚೌಕಟ್ಟನ್ನು ನಿರ್ಧರಿಸಿದೆ. ಲೇಖಕರು "ಮನಸ್ಸು ತನಗೆ ರೋಚಕವಾಗಿ ಕಂಡ ವಿಷಯಗಳನ್ನು ಹೆಕ್ಕಿ, ಹಿಂಜಿ ಪ್ರಬಂಧ ರೂಪದಲ್ಲಿ ಅಭಿವ್ಯಕ್ತಿಸಲು ಇಲ್ಲಿ ಪ್ರಯತ್ನಿಸಿದೆ" ಎಂದಿದ್ದಾರೆ.

'ಕನ್ನಡನಾಡಿನಲ್ಲಿದ್ದ ಆಂಗ್ಲರು' – (ಕರಿನಾಡಿನಲ್ಲಿ ಬಿಳಿಯರು) ಅನೇಕ ವಿವರಗಳನ್ನು ಒಳಗೊಂಡಿವೆ. ಸಾಂಸ್ಕೃತಿಕವಾಗಿ ಮಹತ್ವದ ಈ ವಿವರಗಳನ್ನು ಒಂದೆಡೆಗೆ ತಂದು ಕರ್ನಾಟಕದ ಆಡಳಿತ ವ್ಯವಸ್ಥೆಯ ಪರಿಚಯವನ್ನು ಮಾಡಿಕೊಟ್ಟಿದ್ದಾರೆ. ಈ ಸಂಕಲನದಲ್ಲೆಲ್ಲಾ ತುಂಬ ಗಣನೀಯವಾದ ಲೇಖನವೆಂದರೆ ಇದೊಂದೇ.

ಚೇರಮನ ಕಥೆಯ ತೌಲನಿಕ ಅಧ್ಯಯನ : ಎಸ್. ವಿದ್ಯಾಶಂಕರ

ತಮಿಳು, ಸಂಸ್ಕೃತ ಮತ್ತು ಕನ್ನಡ ಸಾಹಿತ್ಯಗಳಲ್ಲಿ ಚೇರಮನ ಕಥೆಯ ವಿನ್ಯಾಸ ರೂಪುಗೊಂಡಿರುವ ಬಗೆಯನ್ನು ಈ ಪುಸ್ತಕ ವಿವರಿಸುತ್ತದೆ. ಚೇರಮನ ಬಗೆಗೆ ಇರುವ ಅಪಾರ ಮಾಹಿತಿಗಳನ್ನು ಒಂದೆಡೆಗೆ ತಂದು ತೌಲನಿಕವಾಗಿ ಅವನ ಬದುಕನ್ನು ಪುನಾರಚಿಸುವ ಪ್ರಯತ್ನ ಇಲ್ಲಿ ನಡೆದಿದೆ. ಅರವತ್ತಮೂರು ಪುರಾತನರಲ್ಲಿ ಒಬ್ಬನೂ ನಂಬಿಯಣ್ಣನ ಸಮಕಾಲೀನನೂ ಆದ ಕೇರಳದ ಅರಸು ಚೇರಮ. ಸಂಸ್ಕೃತ, ತಮಿಳು ಹಾಗೂ ಕನ್ನಡ ಕವಿಗಳಿಗೆ ಇವನ ವ್ಯಕ್ತಿತ್ವ ಕುತೂಹಲವಾಗಿ ಕಂಡಿದೆ.

ಕನ್ನಡಕ್ಕೆ ಸಂಬಂಧಿಸಿದಂತೆ – ಹರಿಹರ ಮತ್ತು ಚೇರಮಾಂಕರ ಕೃತಿಗಳ ಮೂಲ ಪ್ರೇರಣೆಗಳನ್ನು ಇಲ್ಲಿ ಗುರುತಿಸಲಾಗಿದೆ. ಅಲ್ಲದೆ ಈ ಕೃತಿಗಳ ಕಥಾನಕವನ್ನು ಸಂಗ್ರಹಿಸಿಟ್ಟಿದ್ದಾರೆ. ಕಥಾ ದೃಷ್ಟಿಯಿಂದ ಇರಬಹುದಾದ – ಅನೇಕ ವ್ಯತ್ಯಾಸಗಳಿಗೆ ಪ್ರಾಯಶಃ ಸಾಂಸ್ಕೃತಿಕವಾದ ಮತ್ತು ಚಾರಿತ್ರಿಕ ಒತ್ತಡಗಳು ಕಾರಣವಿದ್ದಿರಬಹುದು. ಪ್ರಾದೇಶಿಕ ಕಾವ್ಯಗಳ ಅಧ್ಯಯನದ ಸಂದರ್ಭದ ಮುಖ್ಯವೆನ್ನಿಸುವ ಇನ್ನಿತರ ನೆಲೆಗಳನ್ನು ಈ ಕೃತಿ ಒಳಗೊಂಡಿದ್ದರೆ ಇನ್ನೂ ಹೆಚ್ಚು ಉಪಯುಕ್ತವಾಗುತ್ತಿತ್ತು.

## ಜೀವನ ಚರಿತ್ರೆ

**ಹು. ಕಾ. ಜಯದೇವ್**
**ಕೃಷ್ಣ ಪರಮೇಶ್ವರ ಭಟ್ಟ**

ಈ ವರ್ಷ ಈ ವಿಭಾಗದಲ್ಲಿ ಪರಿಶೀಲನೆಗೆ ಒಳಗಾಗಿರುವುವು ಇಪ್ಪತ್ತೆರಡು ಕೃತಿಗಳು. ಅವುಗಳಲ್ಲಿ ಹದಿನೈದನ್ನು ಗದಗಿನ ಶ್ರೀ ಜುದ್ಗುರು ತೋಂಟದಾರ್ಯ ಸಂಸ್ಥಾನ ಮಠದವರು ಪ್ರಕಟಿಸಿದ್ದಾರೆ. ಇವೆಲ್ಲವೂ ಸಣ್ಣ ಕೃತಿಗಳು – ಪುಸ್ತಿಕೆಗಳು. ಈ ಕೃತಿಗಳಲ್ಲಿ ಲೇಖಕರು ನಾಡು, ನುಡಿ, ಧರ್ಮ, ಕಲೆ, ವಿದ್ಯಾಭ್ಯಾಸ, ಜನತೆಯ ಏಳಿಗೆಗಾಗಿ ದುಡಿದ ಮಹನೀಯರ ಸಂಕ್ಷಿಪ್ತ ಚಿತ್ರಗಳನ್ನು ಜನತೆಯ ಮುಂದಿಟ್ಟಿದ್ದಾರೆ. ತಮಗಾಗಿ ಶ್ರಮಿಸಿದವರನ್ನು ಮರೆಯದೆ ನೆನಪಿನಲ್ಲಿಟ್ಟುಕೊಳ್ಳಲಿ ಜನತೆ ಎಂಬುದು ಮುಖ್ಯ ಉದ್ದೇಶ. ಆ ಮಹನೀಯರ ಬದುಕಿನಲ್ಲಿ ಅನುಕರಣೀಯ ಆದರ್ಶ ಗುಣ ಗಳಿದ್ದರೆ ಅವುಗಳನ್ನು ಮೈಗೂಡಿಸಿಕೊಳ್ಳಲಿ ಎಂಬುದೇ ಆಶಯ. ದೆಹಲಿ ಸಾಹಿತ್ಯ ಅಕಾಡೆಮಿಯ ಮೂರು ಕೃತಿಗಳು 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿವೆ. ನಮಗೆ ಇಂಗ್ಲಿಷ್ ಭಾಷೆಯ ಉತ್ತಮೋತ್ತಮ ಕೃತಿಗಳ ಅಧ್ಯಯನ ಅಸಾಧ್ಯವೇನಲ್ಲ. ಆದರೆ ನೆರೆಹೊರೆಯ ಸೋದರ ಭಾಷೆಯ ಅಧ್ಯಯನ, ಆ ಭಾಷೆಯ ಮಹಾನ್ ಲೇಖಕರ ಯುಗ ಪ್ರವರ್ತಕರ ಪರಿಚಯ ಕಷ್ಟಸಾಧ್ಯ. ಈ ಕಷ್ಟಸಾಧ್ಯವಾದ ಕೆಲಸವನ್ನು ದೆಹಲಿ ಸಾಹಿತ್ಯ ಅಕಾಡೆಮಿ ಸುಲಭ ಮಾಡಿಕೊಡುತ್ತಿದೆ ತನ್ನ ಪ್ರಕಟಣೆಗಳ ಮೂಲಕ. ಈ ಸೋದರ ಭಾಷಾ ಸಾಹಿತ್ಯ ಮತ್ತು ಲೇಖಕರ ವಿಚಾರವನ್ನು ಪರಸ್ಪರ ಅರಿತು ಭಾರತೀಯ ಭಾಷೆಗಳು ಇನ್ನೂ ಪರಿಪುಷ್ಟವಾಗುವುದರಲ್ಲಿ ಸಂದೇಹವಿಲ್ಲ. ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ದವರು ಚಾರಿತ್ರಿಕ ಮಾಲೆಯಲ್ಲಿ ನಾಡಿನ ಚಾರಿತ್ರಿಕ ವ್ಯಕ್ತಿಗಳ, ಸ್ವಾತಂತ್ರ್ಯ ಹೋರಾಟ ಗಾರರ, ಆದರ್ಶ ಬಾಳನ್ನು ಬಾಳಿದ ಮಹನೀಯರ ಚರಿತ್ರೆಗಳನ್ನು ಕೊಡುತ್ತಿದ್ದಾರೆ. ಅಂತಹ ಒಂದು ಕೃತಿ 'ರಾಣಿ ಚೆನ್ನಮ್ಮ'. ಇಂತಹ ಆದರ್ಶ ಪುರುಷರ, ಮಹಿಳೆಯರ ಚರಿತ್ರೆ ಹಿಂದೆಂದಿಗಿಂತಲೂ ಈಗ ಹೆಚ್ಚಾಗಿದೆ ಎಂಬ ವಿಷಯದಲ್ಲಿ ಎರಡು ಮಾತಿಲ್ಲ. ವೈಯಕ್ತಿಕವಾದ ಆದರ ಗೌರವ, ಅಭಿಮಾನಗಳಿಂದ ತಮಗೆ ಪ್ರಿಯರಾದ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಬರೆಯುವುದು ಸಹಜ. ಅಂತಹ ಎರಡು ಜೀವನ ಚರಿತ್ರೆಗಳು ನಮ್ಮ ಮುಂದಿವೆ. ಆದರಲ್ಲಿ 'ಆಲ್ಬರ್ಟ್ ಐನ್‌ಸ್ಟೈನರ ಮಾನವೀಯ ಮುಖ' ಐನ್‌ಸ್ಟೈನರು ಬರೆದಿರುವ ಪತ್ರಗಳಿಂದಲೇ ಅವರ ಮಾನವೀಯ ಮುಖವನ್ನು ತೋರಿಸುವ ಒಂದು ವಿಶಿಷ್ಟ ಪ್ರಯೋಗ. ತಮ್ಮ ಸಮೃದ್ಧವಾದ ಬದುಕಿನಿಂದ, ಶ್ರೀಮಂತವಾದ ಅನುಭವ

ಗಳಿಂದ ಮಹಾನ್ ವ್ಯಕ್ತಿಗಳು ತಮ್ಮ ಆತ್ಮ ಕಥೆಯಿಂದ ಸಾಹಿತ್ಯವನ್ನು ಮತ್ತಷ್ಟು ಶ್ರೀಮಂತಗೊಳಿಸುತ್ತಾರೆ. ಬಸವರಾಜ ಕಟ್ಟೀಮನಿ ಅವರ 'ಕಾದಂಬರಿಕಾರನ ಆತ್ಮ ಕತೆ' ಅಂತಹ ಒಂದು ಆತ್ಮಚರಿತ್ರೆ. ಇವರು ಶತಾಯುಷಿಗಳಾಗಿ ತಮ್ಮ ಉಳಿದ ಬಾಳಿನ ಚಿತ್ರಣವನ್ನೂ ನಮ್ಮ ಮುಂದಿಡಲಿ ಎಂದು ಆಶಿಸೋಣ.

'ಆಲ್ಬರ್ಟ್ ಐನ್‌ಸ್ಟೈನರ ಮಾನವೀಯ ಮುಖ'—ಜೀವನ ಚರಿತ್ರೆಯೂ ಅಲ್ಲ ಆತ್ಮ ಚರಿತ್ರೆಯೂ ಅಲ್ಲ. ಆದರೆ ಈ ಎರಡೂ ಕೆಲಸಗಳನ್ನು ಮಾಡುವಂಥ ವಿಶಿಷ್ಟ ವಾದ ಕೃತಿ. ಮಹಾ ಪ್ರತಿಭಾವಂತ ವಿಜ್ಞಾನಿಯಾಗಿದ್ದ ಐನ್‌ಸ್ಟೈನ್ ವಿಜ್ಞಾನೇತರ ವಿಷಯಗಳಲ್ಲೂ ಆಸಕ್ತನಾಗಿದ್ದ. ಸ್ವತಃ ಸಂಗೀತ ಪ್ರೇಮಿಯೂ ಪಿಟೀಲು ವಾದಕನೂ ಆಗಿದ್ದ. ಇಂತಹ ವ್ಯಕ್ತಿ ಗಣ್ಯರು ಮತ್ತು ಸಾಮಾನ್ಯರ ಜೊತೆ ಸಮನಾಗಿಯೆ ಪತ್ರ ವ್ಯವಹಾರ ಮಾಡಿದ. ಆ ಪತ್ರಗಳಲ್ಲಿ ಐನ್‌ಸ್ಟೈನರ ವೈಶಿಷ್ಟ್ಯ ಮತ್ತು ವ್ಯಕ್ತಿತ್ವಗಳು ಎದ್ದು ಕಾಣುತ್ತವೆ. ಅಂತಹ ಹಲವಾರು ಪತ್ರಗಳನ್ನು ಮತ್ತು ಬರವಣಿಗೆಗಳನ್ನು ಇಲ್ಲಿ ಕೊಟ್ಟಿದೆ. ಪತ್ರಗಳನ್ನು ಕೊಡುವುದರಲ್ಲಾಗಲಿ ಬರವಣಿಗೆಗಳನ್ನು ಕೊಡುವುದ ರಲ್ಲಾಗಲಿ ಯಾವುದೇ ರೀತಿಯ ಕಾಲಾನುಕ್ರಮಣಿಕೆಯನ್ನು ಕೊಟ್ಟಿಲ್ಲ. ಒಂದೊಂದು ಪ್ರಸಂಗವನ್ನೇ ಪ್ರತ್ಯೇಕವಾಗಿ ಓದಬಹುದು. ಇದನ್ನು ಸಂಕಲಿಸಿದವರು ಹೆಲನ್ ಡ್ಯೂಕಾಸ್ ಮತ್ತು ಬನೇಶ್ ಹಾಪ್‌ಮನ್. ಕನ್ನಡಿಸಿದವರು ಜಿ. ಟಿ. ನಾರಾಯಣ ರಾವ್. ಜಿ. ಟಿ. ನಾರಾಯಣ ರಾಯರು ಮೂಲದಲ್ಲಿಲ್ಲದ ಎರಡು ಪ್ರಸಂಗಗಳನ್ನು ಅರಿಕೆಯಲ್ಲಿ ಸೇರಿಸಿದ್ದಾರೆ. ಮೊದಲನೆಯದು ಹತ್ತುವರ್ಷ ವಯಸ್ಸಿನ ಚಿಕ್ಕ ಹುಡುಗಿಗೆ ಲೆಕ್ಕವನ್ನು ಐನ್‌ಸ್ಟೈನ್ ಹೇಳಿಕೊಡುವುದು. ಎರಡನೆಯದು ಸಂಗೀತದ ಬಗ್ಗೆ ನಿರಾಸಕ್ತನಾದ ಜೆರೊಮ್ ವೈಡಮನ್ ಎನ್ನುವ ಹದಿಹರೆಯದ ಹುಡುಗನಿಗೆ ಸಂಗೀತದಲ್ಲಿ ಆಸಕ್ತಿಯನ್ನು ಜಾಗ್ರತಗೊಳಿಸಿ ಸಂಗೀತ ಪ್ರೇಮಿಯನ್ನಾಗಿಸುವುದು. ಈ ಎರಡು ಪ್ರಸಂಗಗಳಿಂದಲೂ ಐನ್‌ಸ್ಟೈನರ ಮಾನವೀಯ ಮುಖ ಸ್ಪಷ್ಟವಾಗು ತ್ತದೆ. ಇಂತಹುದೇ ಹಲವಾರು ಪ್ರಸಂಗಗಳು ಕೃತಿಯ ಉಳಿದ ಭಾಗದಲ್ಲಿಯೂ ಇವೆ. ಅಂತಹವುಗಳಲ್ಲಿ ಜಿನೀವಾ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿಯನ್ನು ಕೊಟ್ಟಾಗ ಕೊನೆಯ ಘಳಿಗೆಯವರೆಗೂ ಐನ್‌ಸ್ಟೈನರಿಗೆ ಪದವಿ ಪ್ರದಾನವಾಗುವ ವಿಷಯವೇ ತಿಳಿದಿರಲಿಲ್ಲ ! ಬೆಲ್ಜಿಯಮ್ಮಿನ ರಾಣಿಯೊಡನೆ ಅವರು ನಡೆಸಿದ ಪತ್ರ ವ್ಯವಹಾರಗಳು ಆಸಕ್ತಿದಾಯವಾಗಿದೆ. ಈ ಪತ್ರಗಳ ಮತ್ತು ಇನ್ನೂ ಕೆಲವಾರು ಪತ್ರಗಳಲ್ಲಿ ಐನ್‌ಸ್ಟೈನರು ಪದ್ಯಗಳನ್ನೂ ಬರೆದಿದ್ದಾರೆ ! ಇವಲ್ಲದೆ ವಿದ್ಯಾರ್ಥಿಗಳಿಗೆ ಮತ್ತು ಸಾರ್ವಜನಿಕ ರಂಗದ ಇತರ ವ್ಯಕ್ತಿಗಳಿಗೆ ವಿದ್ಯಾಭ್ಯಾಸದಿಂದ ಅಧ್ಯಾತ್ಮದವರೆಗಿನ ವಿವಿಧ ವಿಷಯಗಳ ಮೇಲೆ ಪತ್ರ ಬರೆ ದಿದ್ದಾರೆ. ಅಲ್ಲೆಲ್ಲೂ ಅವರು ತಾವು ನಂಬಿದ ಸಿದ್ಧಾಂತಗಳಿಂದ ತತ್ವಗಳಿಂದ ದೂರ ಸರಿದಿಲ್ಲ. ಈ ಕೃತಿಯಲ್ಲಿನ ಅವರ ಪತ್ರಗಳನ್ನೆಲ್ಲಾ ಓದಿದಾಗ

'ಐನ್‌ಸ್ಟೈನರ ಬಗೆಗೆ ಇನ್ನೂ ಆಳವಾದ ಮತ್ತು ಶ್ರೀಮಂತವಾದ ಪರಿಚಯ' ಲಭಿಸುತ್ತದೆ. ಅನುವಾದ ಚೆನ್ನಾಗಿದೆ. ಅಲ್ಲಲ್ಲಿ ಕಾವ್ಯಮಯವಾಗಿದೆ. ಉದಾಹರಣೆಗೆ 'ಬರ್ನ್ ಸೈಂಟಿಫಿಕ್ ಸೊಸೈಟಿ ನನ್ನನ್ನು ಅಷ್ಟೊಂದು ಅಕ್ಕರೆಯಿಂದ ನೆನೆಸಿಕೊಂಡಿತೆಂಬುದು ನನಗೆಷ್ಟು ಮುದವಿತ್ತಿತು, ಮುದವಿತ್ತಿದೆ ಎಂಬುದನ್ನು ನೀವು ಊಹಿಸಲಾರಿರಿ. ಎಂದೋ ಮಾಯವಾಗಿ ಹೋದ ನನ್ನ ತಾರುಣ್ಯದ ದಿನಗಳಿಂದ ಹೊಮ್ಮಿಬಂದ ವಾಣಿಯೊ ಇದು ಎಂಬ ಭಾವ ಮೂಡಿತು. ಅಂದಿನ ಹಿತಕರವೂ ಉಲ್ಲಾಸದಾಯಕವೂ ಆದ ಸಂಜೆಗಳು ಮಗುದೊಮ್ಮೆ ನನ್ನ ಮನಕ್ಕೆ ಮರಳುತ್ತಿವೆ...' (ಪು. 8) ಹಾಗೆಯೇ ಕೆಲವು ಕಡೆ ಅನುವಾದ ಸರಳವಾಗಿದೆ. ಉದಾಹರಣೆಗೆ '...ನನ್ನನ್ನು ಕುರಿತಂತೆ ಈಗಾಗಲೆ ರಾಶಿರಾಶಿ ಸುಳ್ಳು ಕಂತೆಗಳೂ ಕುಹಕ ಕೊಂಕುಗಳೂ ಪ್ರಕಟವಾಗಿವೆ. ಕವಡೆ ಕಿಮ್ಮತ್ತನ್ನಾದರೂ ಅವುಗಳಿಗೆ ನಾನು ಕೊಟ್ಟಿದ್ದಾಗಿದ್ದರೆ ಎಂದೊ ಮಸಣಪಾಲಾಗಿ ಹೋಗಿರುತ್ತಿದ್ದೆ. ಕಾಲವೆಂಬ ಒಂದರಿ ಮೂಲಕ ಜರಡಿಸಿದಾಗ ಹೆಚ್ಚಿನ ಈ ಮುಖ್ಯ ಸಂಗತಿಗಳು ಕೆಳಸೋರಿ ಕಡಲಿನಾಳದಲ್ಲಿ ಮರೆಯಾಗಿ ಹೋಗುತ್ತವೆ. ಈ ಆಯ್ಕೆಯ ನಂತರವಾದರೂ ಉಳಿಯುವುದು ಬಹುತೇಕ ಸವಕಲು ನಾಣ್ಯ ಮತ್ತು ಹಳಸಲು ವಸ್ತು' (ಪು. 23–24) ಇದಕ್ಕೆ ಅಪವಾದವಾಗಿ ಒಂದೆರಡು ಕಡೆ ಕನ್ನಡಕ್ಕೆ ಸಹಜವಲ್ಲದ '...ಇವು ಅಗೆತನದ ಕಟ್ಟೆಬಿರಿವ ಕಾವಿನಿಂದ ಅರ್ಥರಹಿತವಾಗಿದ್ದುವಾದರೂ...' (ಪು. 123) ಎಂಬಂಥ ಅನುವಾದ ಸಿಗುತ್ತದೆ. ಜಿ. ಟಿ. ನಾರಾಯಣರಾಯರು ಈಗಾಗಲೆ ಅನೇಕ ವಿಜ್ಞಾನ ಪುಸ್ತಕಗಳನ್ನು ಕನ್ನಡಕ್ಕೆ ಕೊಟ್ಟು ಕೈಯನ್ನು ಪಳಗಿಸಿಕೊಂಡಿದ್ದಾರೆ. ಆದರೂ ಅವರಿಗೆ ಸಂಸ್ಕೃತ ಪದಗಳ ಮೇಲಿನ ಮತ್ತು ಹಳಗನ್ನಡದ ಮೇಲಿನ ಮೋಹ ಕಡಿಮೆಯಾಗಿಲ್ಲ. ಗಾನಬಧಿರ, ದ್ಯುಶಕಲ, ಕರ್ಷಣ. ಅಭಿಪ್ರೇರಣೆ, ವ್ಯಾಘಾತ, ಕುಠಾರ. ಅಭಿವರ್ಧನೆ–ಮುಂತಾದ ಸಂಸ್ಕೃತ ಪದಗಳನ್ನೂ. ಹೊನ್ನಹೆಗ್ಗೆ, ಕುತ್ತಿ, ಮಟ್ಟಾಳೆ, ಪರಡು, ಗೊಸರಿನಲ್ಲಿ, ಕುಡ್ತದ, ತಿರುಕುಳಿ, ಪೇರಿಕೊಂಡು–ಮೊದಲಾದ ಕನ್ನಡ ಪದಗಳನ್ನು ನೋಡಬಹುದು. ಈ ಒಂದೆರಡು ಕುಂದುಕೊರತೆಗಳನ್ನು ಬಿಟ್ಟು ಒಟ್ಟಿನಲ್ಲಿ ಜಿ. ಟಿ. ನಾರಾಯಣರಾಯರ ಶ್ರಮ ಸಾರ್ಥಕವಾಗಿದೆ ಎನ್ನಬಹುದು. ಈ ಕೃತಿಯ ಓದಿನಿಂದ ಐನ್‌ಸ್ಟೈನರ ಆಳವಾದ ಮತ್ತು ಶ್ರೀಮಂತವೂ ಮಾನವೀಯವೂ ಆದ ಮುಖ ಪರಿಚಯವಾಗುತ್ತದೆಂಬುದರಲ್ಲಿ ಎರಡು ಮಾತಿಲ್ಲ.

'ರಾಣಿ ಚೆನ್ನಮ್ಮ' ಸದಾಶಿವ ಒಡೆಯರರ ಕೃತಿ. ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ ಇಂದ ಪ್ರಕಟವಾಗಿದೆ. 'ರಾಷ್ಟ್ರೀಯ ಜೀವನ ಚರಿತ್ರೆಮಾಲೆ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದ್ದಾರೆ. ಇದು ರಾಣಿ ಚೆನ್ನಮ್ಮನ ಜೀವನ ಚರಿತ್ರೆ ಅಲ್ಲ. ಆತ್ಮಚರಿತ್ರೆಯೂ ಆಗುವುದಿಲ್ಲ. ಏಕೆಂದರೆ ಸದಾಶಿವ ಒಡೆಯರರು ತಾವು ಅನೇಕ ಮೂಲಗಳಿಂದ ಸಂಗ್ರಹಿಸಿದ ಆಕರಗಳನ್ನು ಹಾಗೆ ಹಾಗೆಯೆ ಇಡಿ ಇಡಿಯಾಗಿ ಕೃತಿಯಲ್ಲಿ ಕೊಟ್ಟಿದ್ದಾರೆ. ಉದಾಹರಣೆಗೆ ಧಾರವಾಡದಲ್ಲಿದ್ದ ಬ್ರಿಟಿಷ್ ಪೊಲಿಟಿಕಲ್ ಏಜೆಂಟ್

ಥ್ಯಾಕರೆ ಡೆಕ್ಕನ್ನದ ಕಮಿಷನರ್ ಚಾಪ್ಲಿನ್‌ಗೆ ಬರೆದ ಪತ್ರ ಸುಮಾರು 8 ಪುಟಗಳಷ್ಟಿದೆ (ಪು. 43–51). ಹಾಗೆಯೇ 'ಕಿತ್ತೂರಿನ ಎರಡನೆಯ ಯುದ್ಧ ಹಾಗೂ ಸೋಲು' ಎಂಬ ಅಧ್ಯಾಯ ಸುಮಾರು 72 ಪುಟಗಳಿದ್ದು ಇದರ ತುಂಬ ಬ್ರಿಟಿಷ್ ಅಧಿಕಾರಿಗಳ ಪತ್ರಗಳೇ ತುಂಬಿವೆ. ಈ ಪತ್ರಗಳನ್ನು ಹಾಗೆ ಹಾಗೆಯೆ ಕೊಟ್ಟಿರುವುದರಲ್ಲಿ ಔಚಿತ್ಯ ಕಂಡುಬರುವುದಿಲ್ಲ. ಉತ್ತರ ಕರ್ನಾಟಕದಲ್ಲಿ ಧಾರವಾಡಕ್ಕೆ ಕೇವಲ 80 ಕಿ.ಮೀ ದೂರದಲ್ಲಿದ್ದ ಕಿತ್ತೂರು ರಾಜ್ಯದ ಕೊನೆಯ ದಿನಗಳ ಚಿತ್ರಣ ಇಲ್ಲಿ ಬರುತ್ತದೆ. ಕ್ರಿ.ಶ. 1782 ರಿಂದ 1816ರ ವರೆಗೆ 34 ವರ್ಷಗಳ ಕಾಲ ಆಳಿದ ಮಲ್ಲಸರ್ಜ ಮತ್ತು ಅವನ ನಂತರದ ಹತ್ತಾರು ವರ್ಷಗಳ ಚಿತ್ರಣವೇ ಇಲ್ಲಿ ಪ್ರಾಮುಖ್ಯ ಪಡೆದಿದೆ. ಮಲ್ಲಸರ್ಜನ ನಂತರ ಅವನ ಹಿರಿಯ ರಾಣಿ ರುದ್ರಮ್ಮಳ ಮಗ ಶಿವಲಿಂಗ ರುದ್ರ ಸರ್ಜ ಪಟ್ಟಕ್ಕೆ ಬಂದರೂ ಅವನ ಅನಾರೋಗ್ಯ ಮತ್ತು ಚಿಕ್ಕವಯಸ್ಸಿನ ಕಾರಣ ಅವನ ಮಲತಾಯಿ, ಮಲ್ಲಸರ್ಜನನ ಕಿರಿಯರಾಣಿ, ಚೆನ್ನಮ್ಮ ರಾಜ್ಯಾಡಳಿತ ದಲ್ಲಿ ವಿಶೇಷವಾದ ಆಸಕ್ತಿಯನ್ನು ತಳೆಯುತ್ತಾಳೆ. ಆತ ಅಪುತ್ರಕನಾಗಿ 12ನೇ ಸೆಪ್ಟಂಬರ್ 1824ರಂದು ಮರಣ ಹೊಂದಿದ ಮೇಲೆ ಆಗಿನ ಸನ್ನಿವೇಶಗಳ ಪರಿಸ್ಥಿತಿ ಯಿಂದಾಗಿ ನೇರವಾಗಿ ರಾಜ್ಯಾಡಳಿತ ವಹಿಸಿಕೊಳ್ಳುತ್ತಾಳೆ. ಇಂತಹ ಸಮಯವನ್ನೇ ಕಾಯುತ್ತಿದ್ದ ಬ್ರಿಟಿಷ್ ಅಧಿಕಾರಿ ಥ್ಯಾಕರೆ ಸಣ್ಣ ರಾಜ್ಯವಾದ ಕಿತ್ತೂರನ್ನು ಬ್ರಿಟಿಷ್ ಆಡಳಿತಕ್ಕೆ ಸೇರಿಸಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಶಿವಲಿಂಗ ರುದ್ರಸರ್ಜ ಸಾಯುವ ಮುನ್ನ ದತ್ತು ತೆಗೆದುಕೊಂಡ ಸವಾಯಿ ಮಲ್ಲಸರ್ಜನ ದತ್ತಕವನ್ನು ಅಮಾನ್ಯಗೊಳಿಸುತ್ತಾನೆ. ಮತ್ತು ಕಿತ್ತೂರನ್ನು ವಶಪಡಿಸಿಕೊಳ್ಳುವ ಪ್ರಯತ್ನದಲ್ಲಿ ಸಾಯುತ್ತಾನೆ. ಕೊನೆಗೂ ಕಿತ್ತೂರು ಬ್ರಿಟಿಷರ ವಶವಾಗಿ ರಾಣಿ ಚೆನ್ನಮ್ಮ ಬೈಲ ಹೊಂಗಲದಲ್ಲಿ ಸೆರೆಮನೆಯಲ್ಲಿಯೆ 1829ರಲ್ಲಿ ಮರಣಹೊಂದುತ್ತಾಳೆ. ರಾಣಿ ಚೆನ್ನಮ್ಮ ತನ್ನ ಚಿಕ್ಕ ರಾಜ್ಯವಾದ ಕಿತ್ತೂರಿನ ಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳಲು ಮಾಡಿದ ಧೀರೋದಾತ್ತ ಪ್ರಯತ್ನ ಕರ್ನಾಟಕದ ಮನೆಮಾತು. ಇಂತಹ 'ಚೆನ್ನಮ್ಮನ ಜೀವನವನ್ನು ಚಿತ್ರಿಸುವ ಒಂದು ಸಮಗ್ರವಾದ ಐತಿಹಾಸಿಕ ಕಾದಂಬರಿಯನ್ನಾಗಲಿ ನಾಟಕವನ್ನಾಗಲಿ ಬರೆಯಬೇಕೆಂಬ' ಹಂಬಲ ಒಡೆಯರಿಗೆ ಚಿಕ್ಕನಿಂದಲೂ ತೀವ್ರ ವಾಗಿತ್ತು. ಅದಕ್ಕಾಗಿ ಅನೇಕ ಅಪ್ರಕಟಿತ ಬ್ರಿಟಿಷ್ ಅಧಿಕಾರಿಗಳ ಪತ್ರಗಳನ್ನು ಸಂಗ್ರಹಿ ಸಿದ್ದಾರೆ. ಕಿತ್ತೂರಿನ ಅರಸು ಮನೆತನದ ಹಲವಾರು ವಂಶಸ್ಥರನ್ನು ಕಂಡು ವಿಷಯ ವನ್ನು ಕಲಿಹಾಕಿದ್ದಾರೆ. 'ಸಾಧ್ಯವಿರುವ ಎಲ್ಲ ಮೂಲೆಗಳಿಂದ ಜನಪದ ಹಾಡು, ಕವಿತೆಗಳನ್ನು' ಸಂಗ್ರಹಿಸಿದ್ದಾರೆ. ಇಷ್ಟೆಲ್ಲ ವಿಷಯಗಳನ್ನು ಸಂಗ್ರಹಿಸಿಯೂ, ಆಕರ ಗಳನ್ನು ಕಲೆ ಹಾಕಿಯೂ ಅವರ ಕೃತಿ ಅತೃಪ್ತಿಯನ್ನುಂಟುಮಾಡುತ್ತದೆ. ಬಹುಶಃ ಅವರಿಗೆ ರಾಣಿ ಚೆನ್ನಮ್ಮನ ವ್ಯಕ್ತಿತ್ವದೊಂದಿಗೆ ತಾದಾತ್ಮ್ಯ ಹೊಂದಲಾಗಿಲ್ಲ ಎಂದರೆ ತಪ್ಪಾಗಲಾರದು. ಬ್ರಿಟಿಷರ ವಿರುದ್ಧ ಕಿತ್ತೂರಿನ ಪ್ರಥಮ ವಿಜಯವನ್ನು 'ಅದು ಕರ್ನಾಟಕದಲ್ಲಿ ಮಾತ್ರವಲ್ಲ, ಇಡೀ ಭಾರತದ ಸ್ವಾತಂತ್ರ್ಯದ ಇತಿಹಾಸದಲ್ಲಿ– ಅತ್ಯಂತ ಜ್ವಾಜ್ವಲ್ಯಮಾನವಾದ ಒಂದು ಅಧ್ಯಾಯ' (ಪು. 83)ಎಂದು ಹೇಳುವುದಾಗಲಿ ಅನಂತರ ಎರಡನೆಯ ಯುದ್ಧದಲ್ಲಿ ಸೋತನಂತರ 'ಕಿತ್ತೂರಿನ ಯುದ್ಧವು ಬ್ರಿಟಿಷ

ರೊಂದಿಗೆ ಮಾಡಿದ ಪ್ರಪ್ರಥಮ ಸ್ವಾತಂತ್ರ್ಯ ಯುದ್ಧವಾಗಿದೆ' (ಪು. 176) ಎನ್ನುವುದಾಗಲಿ—ಕಿತ್ತೂರಿನ ಹೋರಾಟವನ್ನು 'ಭಾರತ ಸ್ವಾತಂತ್ರ್ಯ ಹೋರಾಟದ ಬೆಳ್ಳಿಯ ಚಿಕ್ಕಿ' (ಪು. 164) ಎನ್ನುವುದಾಗಲಿ—ತೀರ ಅತಿಶಯೋಕ್ತಿಯ ಮಾತುಗಳು ಎನ್ನುವುದು ನಿರ್ವಿಕಾರ ಮನಸ್ಸಿನಿಂದ ನೋಡುವವರಿಗೆ ಹೊಳೆಯದಿರದು. ಬ್ರಿಟಿಷರನ್ನು ಭಾರತದಿಂದೋಡಿಸಬೇಕೆಂಬ ಭಾವನೆ ರಾಣಿ ಚೆನ್ನಮ್ಮನಿಗೆ ಎಂದೂ ಬಂದಿರಲಿಲ್ಲ. ತನ್ನ ರಾಜ್ಯದ ಆಂತರಿಕ ವಿಷಯಗಳಲ್ಲಿ ಸ್ವಾತಂತ್ರ್ಯವನ್ನಷ್ಟೆ ಆಕೆ ಅಪೇಕ್ಷಿಸಿದ್ದುದು. ಅದು ದೊರೆಯದಾದಾಗ ನಿರ್ವಾಹವಿಲ್ಲದೆ ತನ್ನ ಅಸ್ತಿತ್ವಕ್ಕಾಗಿ ಹೋರಾಡಿದಳು. ಹೀಗೆ ಹೇಳುವುದರಿಂದ ರಾಣಿ ಚೆನ್ನಮ್ಮನ ವ್ಯಕಿತ್ವಕ್ಕೇನೂ ಕುಂದು ಬರುವುದಿಲ್ಲ. ಅವಳ ಆ ಸೀಮಿತ ಪ್ರಯತ್ನದಲ್ಲಿಯೆ. ಅವಳು ತೋರಿಸಿದ ಪ್ರಸಂಗಾವಧಾನತೆ, ಮುತ್ಸದ್ದಿತನ, ಸೆರೆಸಿಕ್ಕ ಶತ್ರುಗಳ ಬಗೆಗಿನ ಔದಾರ್ಯ, ರಣರಂಗದಲ್ಲಿ ತೋರಿದ ಕೆಚ್ಚು—ಇವು ಕರ್ಣಾಟಕ ಇರುವವರೆಗೂ ಜನಮನದಲ್ಲಿ ಇರುವಂಥವು.

'ಭಾರತದ ಸಂವಿಧಾನ ಕರ್ತೃ, ಮಂತ್ರಿಮಂಡಲದ ಸದಸ್ಯ, ರಾಜ್ಯಸಭೆಯ ಗಣ್ಯ, ಭಾರತದ ಹಿರಿಯ ನಾಗರಿಕ, ಶ್ರೇಷ್ಠ ಸಮಾಜ ಸುಧಾರಕ, ಮಾನವೀಯ ಹಕ್ಕುಗಳ ವೀರ ಪುರಸ್ಕರ್ತ'ರಾಗಿದ್ದ ಡಾ॥ ಅಂಬೇಡ್ಕರರ ಜೀವನ ಚರಿತ್ರೆ ವಿ. ಎಂ ಇನಾಂದಾರರು 'ಡಾ॥ ಅಂಬೇಡ್ಕರ್'. ಧನಂಜಯ ಕೀರ್ ಅವರು ಇಂಗ್ಲಿಷಿನಲ್ಲಿ ಬರೆದಿರುವ ಡಾ॥ ಅಂಬೇಡ್ಕರರ ಜೀವನ ಚರಿತ್ರೆಯೆ ಇದಕ್ಕೆ ಮುಖ್ಯ ಆಧಾರವಾಗಿದೆ. ಅಸ್ಪೃಶ್ಯರಾಗಿ ಹುಟ್ಟಿ ಸ್ವಂತ ಪರಿಶ್ರಮದಿಂದ ಮೇಲೆ ಬಂದ ಧೀಮಂತನೊಬ್ಬನ ಜೀವನ ಚಿತ್ರಣವನ್ನು ಬಾಲ್ಯದಿಂದ ಕೊನೆಯವರೆಗೆ ನಿರೂಪಿಸಿದ್ದಾರೆ. 'ಎಳೆಯ ಮರದ ಮೇಲೆ ಹಾಕಿದ ಗುರುತು ದಿನ ಕಳೆದ ಹಾಗೆ ದೊಡ್ಡದಾಗುತ್ತ ಹೋಗುವಂತೆ' ಅಂಬೇಡ್ಕರರು ಬಾಲ್ಯದಲ್ಲಿ ಅನುಭವಿಸಿದ ಅಪಮಾನ, ನೋವು, ತಿರಸ್ಕಾರಗಳು, ಅವರ ಮನಸ್ಸಿನ ಮೇಲೆ ಗಾಢವಾದ ಪರಿಣಾಮವನ್ನು ಬೀರಿ ತಮ್ಮ ಜನಗಳ ದಾಸ್ಯ ವಿಮೋಚನೆ ನಾಡಿನ ದಾಸ್ಯ ವಿಮೋಚನೆಗಿಂತ ಕಡಿಮೆಯ ಕೆಲಸವಲ್ಲವೆಂಬ ದೃಢ ನಿರ್ಧಾರವನ್ನು ತಳೆಯುವಂತಾಯಿತು. ಯಾವುದೇ ಸಂದರ್ಭದಲ್ಲಿಯೂ ತಮ್ಮ ಈ ನಿಲುವಿನಿಂದ ಹಿಂದೆ ಸರಿಯಲಿಲ್ಲ. 'ಧರ್ಮ ಮನುಷ್ಯನಿಗಾಗಿಯೋ, ಧರ್ಮಕ್ಕಾಗಿ ಮನುಷ್ಯನೋ' (ಪು. 48) ಎಂದು ಪ್ರಶ್ನಿಸಿ 'ನೊಂದವನು ತಿರುಗಿ ಬೀಳದ ಹೊರತು ನೋವಿಗೆ ಪರಿಹಾರವಿಲ್ಲ' (ಪು. 41) 'ಯಜ್ಞಪಶುವನ್ನಾಗಿಸುವುದು ಕುರಿಯನ್ನು, ಸಿಂಹವನ್ನಲ್ಲ' (ಪು. 46) ಎಂಬಂತಹ ಹಲವಾರು ಮಾತುಗಳಿಂದ ತಮ್ಮ ಜನರನ್ನು ಎಚ್ಚರಿಸಿದರು. ಅದರಿಂದಾಗಿ 'ರಾಜಕೀಯದಲ್ಲಿ ಯಾರು ಯಾರಿಗೂ ಸ್ನೇಹಿತರೂ ಅಲ್ಲ, ವೈರಿಗಳೂ ಅಲ್ಲ; ಅಲ್ಲಿರುವುದು ಸ್ವಹಿತಾಸಕ್ತಿಯೊಂದೇ' (ಪು. 98) ಎಂಬ ಮಾತಿನಂತೆ ತಮ್ಮ ಕಾಲದ ರಾಜಕೀಯ ಮಹಾಧುರೀಣರೆಲ್ಲರ ವಿರೋಧವನ್ನು ಕಟ್ಟಿಕೊಳ್ಳಬೇಕಾಯಿತು. ಈ ಕಾರಣದಿಂದಲೇ ಕೇಂದ್ರ ಸರ್ಕಾರಕ್ಕೆ ರಾಜೀನಾಮೆಯಿತ್ತಿದ್ದರು. ಅವರು ಅಧಿಕಾರದಲ್ಲಿದ್ದು ಮಾಡಬಹುದಾದ ಸೇವೆಗಿಂತಲೂ ಅಧಿಕಾರದಿಂದ ದೂರವಿದ್ದುಕೊಂಡೇ ಹೆಚ್ಚಿನ ಸೇವೆಯನ್ನು ಮಾಡಿದರು.

ತಮ್ಮ ಜನಾಂಗದ ಏಳಿಗೆಗಾಗಿ ಪತ್ರಿಕೆಗಳ ಅಗತ್ಯವನ್ನು ಮನಗಂಡು 'ಮೂಕನಾಯಕ', 'ಬಹಿಷ್ಕೃತಭಾರತ' ಮೊದಲಾದ ಪತ್ರಿಕೆಗಳನ್ನೂ ಶಾಲಾಕಾಲೇಜುಗಳನ್ನೂ ಪ್ರಾರಂಭಿಸಿದರು. ಹಿಂದೂ ಸವರ್ಣೀಯರ ಶಠತನದಿಂದಾಗಿ ಭ್ರಮನಿರಸನಹೊಂದಿ ತಮ್ಮ ಬದುಕಿನ ಕೊನೆಯ ದಿನಗಳಲ್ಲಿ ಬೌದ್ಧ ಧರ್ಮದತ್ತ ವಾಲಿ ಕೊನೆಗೆ ಆ ಧರ್ಮವನ್ನೇ ಸ್ವೀಕರಿಸಿದರು. ಈ ಎಲ್ಲವೂ ವಿ. ಎಂ. ಇನಾಂದಾರರ ಕೃತಿಯಲ್ಲಿ ವಿವರವಾಗಿ ಮೂಡಿ ಬಂದಿದೆ. ಡಾ॥ ಅಂಬೇಡ್ಕರರ ಜೀವನ ಚರಿತ್ರೆ ಕಾದಂಬರಿಕಾರರಾದ ವಿ. ಎಂ. ಇನಾಂದಾರರ ಪಳಗಿದ ಲೇಖನಿಯಿಂದ ಮೂಡಿಬಂದಿದ್ದರೂ ಏನೊ ಅರೆಕೊರೆಯ ಭಾವ ಕೃತಿಯನ್ನು ಓದಿದ ಮೇಲೆ ಉಳಿಯುತ್ತದೆ. ಬಹುಶಃ ಡಾ॥ ಅಂಬೇಡ್ಕರರ ಜೀವನದೊಡನೆ ಲೇಖಕರಿಗೆ ತದಾತ್ಮ್ಯ ಸಾಧ್ಯವಾಗಿಲ್ಲವೇನೊ. ಏನೇ ಆದರೂ ಒಮ್ಮೆ ಓದಬೇಕಾದ ಕೃತಿಯಿದು.

ದೆಹಲಿಯ ಸಾಹಿತ್ಯ ಅಕಾಡೆಮಿ ಅವರು 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಶೀರ್ಷಿಕೆಯಲ್ಲಿ ಹೊರತಂದಿರುವ ಕೃತಿ 'ಶ್ರೀ ಅರವಿಂದರು.' ಮೂಲ ಲೇಖಕರು ಮನೋಜ್ ದಾಸ್. ಅನುವಾದಕರು ಸ.ಸ. ಮಾಳವಾಡ. 'ನನ್ನ ಬದುಕಿನ ಬಗೆಗೆ ಯಾರೂ ಬರೆಯಲಾರರು. ಏಕೆಂದರೆ ಅದು ಮಾನವರ ದೃಷ್ಟಿಗೆ ಗೋಚರವಾಗುವಂತೆ ಹೊರಮುಖವಾಗಿ ಸಾಗಿಲ್ಲ' (ಪು. 1) ಎಂಬ ಎಚ್ಚರಿಕೆಯನ್ನು ಅರವಿಂದರೇ ಒಮ್ಮೆ ತಮ್ಮ ಶಿಷ್ಯರೊಬ್ಬರಿಗೆ ಹೇಳಿದ್ದರೂ ಅವರ ಸಾಹಿತ್ಯ ಸಾಧನೆಯ ಬಗ್ಗೆ ಬರೆಯುವಾಗ ಅವರ ಬಾಳಿನ ಬಗ್ಗೆ ಬರೆಯದೆ ಇರಲಾಗದುದರಿಂದ ಅರವಿಂದರ ಬಾಳಿನ ಸ್ಥೂಲ ಚಿತ್ರ ಇಲ್ಲಿ ಬರುತ್ತದೆ. 'ಆದರೆ ಅವರ ಬಾಳಿನ ನಿಜವಾದ ಕುರುಕ್ಷೇತ್ರ-ಅವರ ಪರಮ ಶ್ರೇಷ್ಠಭೂಮಿ-ಪ್ರಜ್ಞಾವಲಯದ್ದಾಗಿದೆ. ಅದರ ವೃತ್ತಾಂತವು ದಾಖಲೆಗಳಿಗೆ ಒಳಪಡುವಂತಹದಲ್ಲ. ಆದರೂ ಅವರ ಸಾಹಿತ್ಯ ನಿರ್ಮಿತಿಯ ಬಹುಭಾಗವು ಅವರ ಪ್ರಜ್ಞಾಸಾಹಸದೊಂದಿಗೆ ಸುಸಂಬದ್ಧವಾಗಿದೆ.' (ಪು. 2) ಆದ್ದರಿಂದ ಅವರ ಪ್ರಜ್ಞಾವಲಯದೊಳಕ್ಕೆ ಪ್ರವೇಶಿಸುವ ಸಾಹಸವನ್ನು ಲೇಖಕರು ಮಾಡಿದ್ದಾರೆ. ಆದರೆ ಅದು ಅಷ್ಟೊಂದು ಯಶಸ್ವಿಯಾದ ಪ್ರಯತ್ನವಲ್ಲ. ಬಹುಶಃ ಭಾರತೀಯ ಸಾಹಿತ್ಯ ನಿರ್ಮಾಣಕಾರರಾಗಿ ಅರವಿಂದರನ್ನು ನೋಡುವಾಗ ಅವರ ಬಾಳಿನ ಬಗ್ಗೆ ಹೆಚ್ಚು ಒತ್ತು ಕೊಡಬೇಕೊ ಸಾಹಿತ್ಯದ ಬಗ್ಗೆ ಹೆಚ್ಚು ಒತ್ತು ಕೊಡಬೇಕೊ ಎಂಬ ದ್ವಂದದಿಂದ ಲೇಖಕರು ಮುಕ್ತರಾದಂತಿಲ್ಲ. 15ನೇ ಆಗಸ್ಟ್ 1872ರಲ್ಲಿ ಅರವಿಂದರು ಜನಿಸಿದಾಗಲಿಂದ ಡಾರ್ಜಿಲಿಂಗ್‌ನ ಲೊರೆಟ್ಟೊ ಕಾನ್ವೆಂಟ್‌ಗೆ ಸೇರಿ ಅಲ್ಲಿಂದ ಇಂಗ್ಲೆಂಡ್‌ಗೆ ತೆರಳಿ ವಿದ್ಯಾಭ್ಯಾಸವನ್ನು ಪೂರ್ಣಗೊಳಿಸಿ 1893ರಲ್ಲಿ ಭಾರತಕ್ಕೆ ಹಿಂದಿರುಗುವವರೆಗಿನ ಬಹು ಸ್ಥೂಲವಾದ ಜೀವನ ಚಿತ್ರ ಇಲ್ಲಿದೆ. ಅಲ್ಲಿಂದ ಬಂದಮೇಲೆ ಬಡೋದೆಯಲ್ಲಿ, ಕಲಕತ್ತೆಯಲ್ಲಿ ಕೆಲಸ ಮಾಡಿದ್ದು ಇತ್ಯಾದಿ ವಿವರಗಳೊಂದಿಗೆ ಯೋಗಸಾಧನೆ ಅಧ್ಯಾತ್ಮಿಕ ಅನುಭವಗಳ ಸ್ಥೂಲ ಚಿತ್ರಣ ಸಿಗುತ್ತದೆ. ಅದಾದಮೇಲೆ ಅರವಿಂದರ ಕೃತಿಗಳ ಬಗ್ಗೆಯೆ ಕೃತಿ ಮಗ್ನವಾಗಿದೆ. ಅಲ್ಲೂ ಅವರು ತಮ್ಮ ಕೃತಿಗಳ ಮೂಲಕ ದೇಶಭಕ್ತಿಯನ್ನು

ಉದ್ದೀಪಿಸಿದ್ದು ಅನಂತರ ಪಾಂಡಿಚೆರಿಯನ್ನೇ ತಮ್ಮ ವಾಸ್ತವ್ಯಮಾಡಿಕೊಂಡ ಮೇಲೆ ಸಂಪೂರ್ಣ ಅಧ್ಯಾತ್ಮಸಾಧನೆ ಮತ್ತು ಸಾಹಿತ್ಯ ನಿರ್ಮಿತಿಯಲ್ಲಿ ತೊಡಗಿದ ಚಿತ್ರಣವಿದೆ. ಒಂದೊಂದು ಕೃತಿಯನ್ನೂ ವಿವರವಾಗಿ ಪರಿಚಯಿಸಿ ಅದರ ಉದ್ದೇಶ ಇತ್ಯಾದಿಗಳನ್ನು ಲೇಖಕರು ವಿವರಿಸಿದ್ದಾರೆ. ಕೃತಿಯ ಆರಂಭದಿಂದಲೂ ಅಂತ್ಯದ ವರೆಗೆ ಅಲ್ಲಲ್ಲಿ ಕೊಟ್ಟಿರುವ ಅರವಿಂದರ ಕವನಗಳ ಕನ್ನಡ ಅನುವಾದ ತೃಪ್ತಿಕರವಾಗಿಲ್ಲ. ಕನ್ನಡ ಭಾಷೆಯ ಸಹಜ ಲಯ ಅಲ್ಲಿ ಕಂಡುಬರುವುದಿಲ್ಲ. ಇದೇ ಮಾತನ್ನು ಸ್ವಲ್ಪ ಮಟ್ಟಿಗೆ ಗದ್ಯಕ್ಕೂ ಹೇಳಬಹುದಾದರೂ ಪ್ರಜ್ಞಾವಲಯವನ್ನು ಕುರಿತಂತೆ ವಿವರಿಸು ವಾಗ ಈ ಕ್ಲಿಷ್ಟತೆ ಸಹಜ ಎಂದುಕೊಳ್ಳಬಹುದು. ಆಗಸ್ಟ್ 15ಕ್ಕೂ ಅರವಿಂದರಿಗೂ ಯಾವುದೋ ನಂಟು ಇರುವಂತೆ ಕಂಡುಬರುತ್ತದೆ. ಅವರ ಜನ್ಮದಿನ ಆಗಸ್ಟ್ 15. ಅವರು ಪಾಂಡಿಚೆರಿಯಿಂದ 'ಆರ್ಯ' ಪತ್ರಿಕೆ ಹೊರಡಿಸಿದ್ದು ಆಗಸ್ಟ್ 15, 1914. ಭಾರತಕ್ಕೆ ಸ್ವಾತಂತ್ರ್ಯ ಲಭ್ಯವಾದುದೂ ಆಗಸ್ಟ್ 15, 1947!

ಪ್ರೇಮಾ ನಂದಕುಮಾರ್ ಅವರ 'ಭಾರತಿ' ತಮಿಳು ಕವಿ ಸುಬ್ರಹ್ಮಣ್ಯ ಭಾರತಿ ಅವರನ್ನು ಕುರಿತ ಕೃತಿ. ಇದು ದೆಹಲಿ ಸಾಹಿತ್ಯ ಅಕಾಡೆಮಿ ಇವರಿಂದ 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಎಂಬ ಶೀರ್ಷಿಕೆಯಲ್ಲಿ ಪ್ರಕಟವಾಗಿದೆ. ಕನ್ನಡ ಅನುವಾದವನ್ನು ಎಲ್. ಗುಂಡಪ್ಪನವರು ಮಾಡಿದ್ದಾರೆ. ಸುಬ್ರಹ್ಮಣ್ಯ ಭಾರತಿ (1882–1921) ತಮಿಳು ನಾಡಿನ ಕಾವ್ಯದಲ್ಲಿ ಹೊಸ ಶಕೆಯೊಂದರ ಪ್ರವರ್ತಕರೂ ಆಧುನಿಕ ತಮಿಳು ಗದ್ಯದ ಜನಕರೂ ಆಗಿದ್ದಾರೆ. ಇಂದಿಗೂ ತಮಿಳು ಸಾಹಿತ್ಯ ಭಾರತಿಯವರ ಪ್ರಭಾವಕ್ಕೊಳಗಾಗಿ ಭಾರತೀಯುಗವೆಂದು ಕರೆಯಲ್ಪಡುತ್ತಿದೆ. ಮೂಲತಃ ಭಾವಗೀತ ಕವಿಯಾದ ಭಾರತಿ ಅವರು ದೇಶಭಕ್ತ ಕವಿಯಾಗಿ ಪ್ರಸಿದ್ಧಿ ಹೊಂದಿ ಕಡೆಗಾಲದಲ್ಲಿ ಶುದ್ಧ ಜ್ಞಾನಾನ್ವೇಷಕರಾದರು. ಅವರ ಕವಿತೆ ಕ್ರಮ ಕ್ರಮವಾಗಿ ಪರಿಪಕ್ವವಾಗುತ್ತಾ ಬಂದು ವೇದಾಂತದಲ್ಲಿ ಆಧರಿಸಿದ ಮಾನವತಾವಾದದಲ್ಲಿ ಪರ್ಯವ ಸಾನವಾಯಿತು. ಜನ ಸಾಮಾನ್ಯರ ಶಬ್ದಗಳಲ್ಲಿ ಅಡಗಿರುವ ಶಕ್ತಿಯನ್ನು ಕಂಡು ಕೊಂಡು ಅದನ್ನು ಬಳಕೆಗೆ ತಂದು ತಮಿಳು ಗದ್ಯ ಸಶಕ್ತವಾಗಲು ಕಾರಣರಾದರು. ಹೀಗಾಗಿ ಅದುವರೆಗೂ ಮಡುಗಟ್ಟಿ ನಿಂತ ನೀರಾಗಿದ್ದ ತಮಿಳು ಸರಳವೂ, ನೇರವೂ ಶಕ್ತಿಯುತವೂ ಆಯಿತು. ಹೀಗೆ ತಮಿಳಿನ ಹೊರಮೈ ಮಾತ್ರವನ್ನಲ್ಲದೆ ಅಂತರಂಗ ವನ್ನೂ ಪರಿವರ್ತಿಸಿದರು. ಅವರ ಬರವಣಿಗೆಗಳಲ್ಲಿ ಸಮಾನತೆ, ಸ್ತ್ರೀಯರ ಸ್ಥಾನಮಾನ ಮೊದಲಾದುವು ಪ್ರಾಮುಖ್ಯವನ್ನು ಪಡೆದುಕೊಂಡಿದ್ದುವು. ಆದ್ದರಿಂದ 'ಆಧುನಿಕ ತಮಿಳು ಸಾಹಿತ್ಯದ ನವೋದಯ ಸೂಚಕವಾದ ಶುಕ್ರ ನಕ್ಷತ್ರ'ವೆಂದು ಅವರನ್ನು ಹೊಗಳಿರುವುದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಭಾರತಿಯವರ ಸಾಹಿತ್ಯ ಪರಿಚಯಕ್ಕೆ ಮೊದಲು ಅದುವರೆಗಿನ ತಮಿಳು ಸಾಹಿತ್ಯವನ್ನು 'ಸಂಘ ಸಾಹಿತ್ಯ'ದಿಂದ ಮೊದಲು ಮಾಡಿ. ಮಹಾಕಾವ್ಯಗಳ ಕಾಲ, ಆಳ್ವಾರರು ಮತ್ತು ನಾಯನ್ಮಾರರುಗಳ ಭಕ್ತಿ ಯುಗಗಳಲ್ಲಿ ಆದ ಬೆಳವಣಿಗೆ ಅಥವಾ ಸ್ಥಿತ್ಯಂತರಗಳನ್ನು ವಿವರಿಸಿ ಕಂಬನಿಂದ ಅದು ಬೆಳವಣಿಗೆಯನ್ನು ಕಳೆದುಕೊಂಡು ನಿಂತ ನೀರಾದದ್ದನ್ನು ಸಂಕ್ಷೇಪವಾಗಿ

ವಿವರಿಸಿದ್ದಾರೆ. ಇಂತಹ ಸಾಹಿತ್ಯ ಭಾರತಿಯವರ ಮಂತ್ರದಂಡ ಸ್ಪರ್ಶದಿಂದ 'ಫೀನಿಕ್ಸ್'ನಂತೆ ಮೇಲೆದ್ದು ಗರಿಗೆದರಿ ತಮಿಳು ಸಾಹಿತ್ಯ ವಿಶಾಲಾಕಾಶದಲ್ಲಿ ವಿಹರಿಸಿದ್ದನ್ನು ವಿವರ ವಿವರವಾಗಿ ನಿರೂಪಿಸಿದ್ದಾರೆ. ಇವುಗಳ ನಡುನಡುವೆಯೆ ಭಾರತಿಯವರ ಜೀವನ ಚಿತ್ರದ ಇಣುಕುನೋಟ ದೊರಕುತ್ತದೆ. 1882ರಲ್ಲಿ ಜನಿಸಿದ ಸುಬ್ರಹ್ಮಣ್ಯ ಮೆಟ್ರಿಕ್ಯುಲೇಷನ್ ಕೂಡ ಪಾಸುಮಾಡದೆ ಅಂತರ್ಗತವಾಗಿದ್ದ ಪ್ರತಿಭೆಯಿಂದಲೆ 'ಭಾರತಿ' ಬಿರುದನ್ನು ಸಂಪಾದಿಸಿದ್ದು - ವಾರಣಾಶಿಯಲ್ಲಿ ಮತ್ತೆ ವಿದ್ಯಾಭ್ಯಾಸವನ್ನು ಮಾಡಿ ಹಿಂದಿರುಗಿದ್ದು ಅನಂತರ ಅನೇಕ ಪತ್ರಿಕೆಗಳಲ್ಲಿ ಉಪಸಂಪಾದಕ, ಸಂಪಾದಕರಾಗಿ ಕೆಲಸ ಮಾಡಿದ್ದು ಈ ಕೆಲಸಗಳ ನಡುವೆ ರಾಷ್ಟ್ರೀಯ ನಾಯಕರ ಸಂಪರ್ಕವುಂಟಾದದ್ದು, ಪಾಂಡಿಚೆರಿಯಲ್ಲಿ ತಲೆಮರೆಸಿಕೊಂಡಿದ್ದಾಗ ಅರಬಿಂದೊ ಅವರ ಸಹವಾಸ ಲಭ್ಯವಾದದ್ದು ಹೀಗೆ ಅವರ ಬಾಳಿನ ಪ್ರಮುಖ ಘಟನೆಗಳ ವಿವರಗಳು ನಿರೂಪಿಸಲ್ಪಟ್ಟಿವೆ. ಸುಮಾರು ನಲವತ್ತು ವರ್ಷಗಳ ತಮ್ಮ ಬದುಕಿನ ಇಪ್ಪತ್ತು ವರ್ಷಗಳ ಸಾಹಿತ್ಯ ಸೇವೆಯಲ್ಲಿ ತಮಿಳು ಸಾಹಿತ್ಯದ ಮೇಲೆ ಗಾಢವಾದ ಪ್ರಭಾವವನ್ನು ಬೀರಿ ಯುಗ ಪ್ರವರ್ತಕರಾದ ಭಾರತಿ ಆನೆಯ ಹೊಡೆತಕ್ಕೆ ಸಿಕ್ಕಿ ಅಕಾಲಮರಣಕ್ಕೆ ಗುರಿಯಾದರು. ಅವರ ಕೃತಿಗಳಲ್ಲಿ ಪ್ರಮುಖವಾದ್ದ ಕಣ್ಣನ್ ಪಾಟ್ಟು, ಪಾಂಚಾಲೀ ಶಪಥಮ್ ಮತ್ತು ಕುಯಿಲ್ ಪಾಟ್ಟುಗಳ ವಿವರವಾದ ನಿರೂಪಣೆಯಿದೆ. ಅನುವಾದ ಸಹಜವಾಗಿ ಸರಳವಾಗಿದೆ. ಪದ್ಯಗಳ ಅನುವಾದವೂ ಚೆನ್ನಾಗಿದೆ.

'ಫಕೀರ ಮೋಹನ ಸೇನಾಪತಿ' ಒರಿಯಾ ದೇಶದ ಮಹಾನ್ ಲೇಖಕ, ಯುಗ ಪ್ರವರ್ತಕ. "ಮನುಷ್ಯ ದ್ವೇಷಿಯಾಗಲು ಮತ್ತು ಜಿಗುಪ್ಸೆ ವಿಷಣ್ಣತೆಗಳಲ್ಲಿ ಮುಳುಗಲು ಸಾಕಷ್ಟು ಕಾರಣಗಳಿದ್ದರೂ, ಉತ್ಸಾಹದಿಂದ ಸ್ಪಂದಿಸುವ ಉತ್ತಮ ಹರಿಕಾರನಂತೆ ಬದುಕನ್ನು ಒಪ್ಪಿಕೊಂಡು" (ಪು. 41) ಅವರ ಜನ್ಮಸಿದ್ಧವಾದ ಧೀರತೆ, ಅದಮ್ಯವಾದ ಕರ್ತೃತ್ವ ಶಕ್ತಿಯಿಂದ '...ಮೊದಲಿನ ಚಿರಪರಿಚಿತವಾದ ಸಾಹಿತ್ಯ ಮಾರ್ಗಗಳನ್ನು ಬಿಟ್ಟು ... ತಮ್ಮದೇ ಆದೊಂದು ಹೆದ್ದಾರಿಯನ್ನು ತೆರೆಯುವುದರ ಮೂಲಕ ಒರಿಯಾ ಸಾಹಿತ್ಯದಲ್ಲಿ–ವಸ್ತು ಹಾಗೂ ಉದ್ದೇಶಗಳಲ್ಲಿ ಅತ್ಯಂತ ಸ್ವೋಪಜ್ಞತೆಯನ್ನು ಪ್ರಕಟಿಸಿದ ಲೇಖಕರಾಗಿದ್ದಾರೆ' (ಪು. 57) ಫಕೀರ ಮೋಹನ ಸೇನಾಪತಿ. 'ಅವರ ಕೃತಿಗಳು ಅಕೃತಕವೂ ಸರಳವೂ ಆದ ಗುಣಗಳಿಂದ ನಗರದ ಹಾಗೂ ಗ್ರಾಮಗಳ ಸಾಮಾನ್ಯ ಗಂಡು ಹೆಣ್ಣುಗಳ ಸಾಚಾ ಹಾಗೂ ಅನನುಕರಣೀಯವಾದ, ಆಡುಮಾತಿನ ಸೊಗಡಿನಿಂದ, ಅವರ ಅಂತರಂಗಗಳನ್ನು ಸೂಕ್ಷ್ಮವಾಗಿ ಒಳಹೊಕ್ಕು ನೋಡುವ ಶಕ್ತಿ ವಿಶೇಷದಿಂದ, ಅರ್ಥಪೂರ್ಣವಾಗಿರುತ್ತ, ಫಕೀರ ಮೋಹನರು ಹುಟ್ಟು ಕಲೆಗಾರರೆಂಬುದನ್ನೂ ಮಹಾಕಲೆಗಾರರಾಗಿದ್ದರೆಂಬುದನ್ನೂ ದೃಢಪಡಿಸುತ್ತದೆ." (ಪು. 66) "ತಮ್ಮ ಕಾಲದ ಜನತೆಯ ನಿಜವಾದ ಬದುಕನ್ನು, ಅವರ ಆಡುಮಾತಿನಲ್ಲಿ ಅವರ ಸಲುವಾಗಿಯೆ ಬರೆದು ತೋರಿಸಿದರು" (ಪು 57) ಅವರ ಬಹುತೇಕ ಕಾದಂಬರಿಗಳು ನಿಂತಿರುವುದು ಸಾಮಾನ್ಯವಾಗಿ ಎಲ್ಲರಿಗೂ ಗೋಚರಿಸದ ಆದರೆ ವಾಸ್ತವವಾದ ಘಟನೆಗಳ ತಳಹದಿಯ ಮೇಲೆ. ಅವರು "...ತಮ್ಮ ಸಮಕಾಲೀನ

ಸಂಗತಿಗಳೊಂದಿಗೆ ಸಂವಾದವನ್ನಿರಿಸಿಕೊಂಡು, ತೀರಾ ಇತ್ತೀಚಿನ ವೈಜ್ಞಾನಿಕ ಸಿದ್ಧಾಂತಗಳನ್ನೂ ರಾಜಕೀಯ ನಡವಳಿಕೆಗಳನ್ನೂ ತಮ್ಮ ಸೃಜನಾತ್ಮಕ ಉದ್ದೇಶಗಳಿಗೆ ಬಳಸಿಕೊಳ್ಳಬಲ್ಲವರಾಗಿದ್ದರು" (ಪು. 77) 'ಅವರ ಕೃತಿಗಳಲ್ಲಿನ ವಾಸ್ತವ ಮತ್ತು ಆದರ್ಶಗಳು ಸಾಮರಸ್ಯದಿಂದ ಬೆಸೆದುಕೊಂಡಿವೆ. ತಮ್ಮ ಕೃತಿಗಳಲ್ಲಿ ಎಲ್ಲಿ ಅಗತ್ಯವೊ ಅಲ್ಲಿ ಚಮತ್ಕಾರವುಳ್ಳ ಮಹಾಶೈಲಿಯನ್ನು ಹಾಗೆಯೆ ಜನಸಾಮಾನ್ಯರು ಆಡುವ ಪ್ರಾದೇಶಿಕ ಶೈಲಿಯನ್ನು ಪ್ರಯೋಗಿಸಿದ್ದಾರೆ" (ಪು 58). ಬಾಲ್ಯದಲ್ಲಿಯೇ ತಂದೆ ತಾಯಿಯರನ್ನು ಕಳೆದುಕೊಂಡು ದೊಡ್ಡಪ್ಪ ಮತ್ತು ದೊಡ್ಡಮ್ಮನ ಮಾತ್ಸರ್ಯ ದಿಂದಾಗಿ ಕೇವಲ ಒಂದೂವರೆ ವರ್ಷದ ಶಾಲೆಯ ಕಲಿಕೆಗೆ ಕೈಮುಗಿದು, ಕೂಲಿಯಾಗಿ ತನ್ನ ಅಸ್ತಿತ್ವಕ್ಕಾಗಿ ನಿರಂತರ ಹೋರಾಡುತ್ತ ಸ್ವಪ್ರಯತ್ನದಿಂದ ಪರ್ಷಿಯನ್, ಬಂಗಾಳಿ· ತೆಲುಗು, ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳನ್ನು ಅಧ್ಯಯನ ಮಾಡಿ ಉಜ್ವಲ ಅಧ್ಯಾಪಕನಾಗಿ ಭಾಷಾಶಾಸ್ತ್ರಜ್ಞನಾಗಿ, ದಕ್ಷನಾದ ಆಡಳಿತಗಾರನಾಗಿ ಈ ಎಲ್ಲ ಅನು ಭವಗಳ ಸಾರರೂಪವಾಗಿ ಉದಾರವಾದಿಯೂ, ಮಾನವತಾವಾದಿಯೂ ಆಗಿ ಸತ್ವಪೂರ್ಣವಾದ ಸಾಹಿತ್ಯವನ್ನು ಒರಿಯ ಭಾಷೆಗೆ ನೀಡಿದರು. ಇಂತಹ ವ್ಯಕ್ತಿಯ ಜೀವನ ಚಿತ್ರ ಮತ್ತು ಸಾಹಿತ್ಯ ನಿರ್ಮಾಣವನ್ನು ಕುರಿತಂತ ಕೃತಿ 'ಫಕೀರ ಮೋಹನ ಸೇನಾಪತಿ' 'ಭಾರತೀಯ ಸಾಹಿತ್ಯ ನಿರ್ಮಾಣಕಾರರು' ಶೀರ್ಷಿಕೆಯಲ್ಲಿ ಪ್ರಕಟವಾಗಲು ಅರ್ಹವಾದ ಕೆಲವೇ ಕೃತಿಗಳಲ್ಲಿ ಒಂದು. ಇದರ ಲೇಖಕ ಮಾಯಾಧರ್ ಮಾನ್ ಸಿನ್ಹಾ· ಸೇನಾಪತಿಯವರ ಪೂರ್ವಜರಿಂದ ಆರಂಭಿಸಿ ಸೇನಾಪತಿಯವರ ಅಂತ್ಯದ ವರೆಗೂ ನಡುನಡುವೆ ಸೇನಾಪತಿಯವರ ಆತ್ಮಚರಿತ್ರೆಯಿಂದ ಉದ್ಧೃತಗಳನ್ನು ಕೊಡುತ್ತಾ ಅವರ ಜೀವನ ಮತ್ತು ಸಾಹಿತ್ಯ ನಿರ್ಮಾಣ ಹೇಗೆ ಒಂದರೊಂಡನೊಂದು ಹಾಸುಹೊಕ್ಕಾಗಿದ್ದುವೆಂಬುದನ್ನು ತುಂಬ ಪರಿಣಾಮಕಾರಿಯಾದ ರೀತಿಯಲ್ಲಿ ರೂಪಿಸಿದ್ದಾರೆ. ಈ ಕೃತಿಯನ್ನು ಓದುವಾಗ ಯಾವುದೋ ಜೀವನ ಚರಿತ್ರೆಯನ್ನು ಓದುತ್ತಿರುವೆವೆಂಬ ಭಾವನೆ ಓದುಗರಿಗೆ ಎಲ್ಲಿಯೂ ಬಾರದೆ ತುಂಬ ರಸಾರ್ದ್ರವಾದ ಕಾದಂಬರಿಯೊಂದನ್ನು ಓದುತ್ತಿರುವ ಅನುಭವ ಉಂಟಾಗುತ್ತದೆ. ಇಂಗ್ಲಿಷಿನಲ್ಲಿರುವ ಈ ಕೃತಿಯನ್ನು ಅಷ್ಟೇ ಸಮರ್ಥವಾಗಿ ಕನ್ನಡಿಸಿದ್ದಾರೆ. ಜಿ. ಎಸ್. ಶಿವರುದ್ರಪ್ಪ ನವರು. ಉದಾಹರಣೆಗೆ ಅವರು ಕನ್ನಡಿಸಿರುವ ಒಂದು ಸಂಸ್ಕೃತ ಶ್ಲೋಕ ಮತ್ತು ಒಂದು ಪದ್ಯವನ್ನು ನೋಡೋಣ—

ಮನೆಯಲ್ಲಿ ಯಾರಿಗಿಲ್ಲವೊ ತಾಯಿ,  
ಮತ್ತೆ ಇರುವಳೊ ಸದಾ ಪೀಡಿಸುವ ಗಯ್ಯಾಳಿ ಮಡದಿ;  
ಅಂಥವನು ತೆರಳುವುದು ಲೇಸು ಕಾಡಿಗೆ,  
ಕಾಡೇನು ಮನೆಯೇನು ಅಂಥವನ ಪಾಲಿಗೆ. (ಪು 42)

ಎಲ್ಲಿದೆ ಆ ಮಥುರಾ
ಯಾದವ ಪ್ರಭು ನಿರ್ಗಮಿಸಿದ ಬಳಿಕ?
ಎಲ್ಲಿದೆ ಉತ್ತರ ಕೋಸಲ ವೈಭವ
ರಘುರಾಮನ ಅವಸಾನದ ಬಳಿಕ?
ಸಮಚಿತ್ತದೊಳಿದ ಪರಿಭಾವಿಸು ಓ ಮಾನವ (ಪು 85)
ಈ ಲೋಕದೊಳೇನಂಥದು ಶಾಶ್ವತವಲ್ಲ!

ಮೇಲಿನ ಎರಡು ಅನುವಾದಗಳನ್ನು ಸ್ವತಂತ್ರವಾಗಿ ಓದಿದರೆ ಅವು ಅನುವಾದ ಗಳೆಂದು ತಿಳಿಯುವುದೇ ಇಲ್ಲ. ಕನ್ನಡದ ಪ್ರತಿಭಾವಂತ ಕವಿಯೊಬ್ಬನ ಲೇಖನಿಯಿಂದ ಮೂಡಿಬಂದಂತಿವೆ ಅವು. ಈ ಕವಿತಾ ಮಾಯಾ ದಂಡ ಸ್ಪರ್ಶವೇ ಗದ್ಯಕ್ಕೂ ಆಗಿ ಅದು ಕಾವ್ಯಮಯವಾದ ಗದ್ಯ (Poetic Prose) ಆಗಿದೆ! ಆದ್ದರಿಂದ ಸಾಹಿತ್ಯಾಭ್ಯಾಸಿಗಳಿಗೂ ಸಾಹಿತ್ಯಾಸಕ್ತರಿಗೂ ಸಮಾನವಾಗಿ ಪ್ರಿಯವಾಗುವ ಈ ಕೃತಿ ಪಠನ ಯೋಗ್ಯವೂ ಸಂಗ್ರಹ ಯೋಗ್ಯವೂ ಆಗಿದೆ.

'ಶ್ರೀ ಅರವಿಂದರು' - 'ಭಾರತಿ' ಮತ್ತು 'ಫಕೀರ ಮೋಹನ ಸೇನಾಪತಿ'ಗಳು ಈ ಮೂರರಲ್ಲಿ 'ಫಕೀರ ಮೋಹನ ಸೇನಾಪತಿ' ಅತ್ಯುತ್ಕೃಷ್ಟವಾದದ್ದು.

'ಕಾದಂಬರಿಕಾರನ ಆತ್ಮಕತೆ' ಬಸವರಾಜ ಕಟ್ಟೀಮನಿ ಅವರ ಆತ್ಮಚರಿತ್ರೆ 691 ಪುಟಗಳ ಬೃಹತ್ ಹೊತ್ತಿಗೆ. 431 ಶೀರ್ಷಿಕೆಗಳಿವೆ! ಸಾಹಿತಿಗಳ, ರಾಜಕಾರಣಿ ಗಳ ಮತ್ತು ಕುಟುಂಬದವರ ಜೊತೆಯಲ್ಲಿನ 29 ಛಾಯಾ ಚಿತ್ರಗಳಿವೆ. ಒಟ್ಟು ಕೃತಿ ಯನ್ನು ಐದು ಭಾಗ ಮಾಡಿದ್ದಾರೆ. ಮೊದಲ ಭಾಗ 'ಕುಂದರನಾಡಿನ ಕಂದ' ಅದು ಈ ಹಿಂದೆ ಪ್ರಕಟವಾಗಿತ್ತು. ಆ ಮೊದಲ ಭಾಗವೂ ಮತ್ತು ಉಳಿದ ಭಾಗಗಳೂ 'ಕಾದಂಬರಿಕಾರನ ಆತ್ಮಕಥೆ'ಯಾಗಿ ಈಗ ಮತ್ತೆ ಪ್ರಕಟವಾಗಿವೆ. 287 ಪುಟಗಳನ್ನು ಆಕ್ರಮಿಸಿರುವ ಮೂರನೆಯ ಭಾಗ ಅತಿ ದೊಡ್ಡ ಭಾಗ. 24 ಪುಟಗಳ ಕೊನೆಯ ಭಾಗ ಅತ್ಯಂತ ಚಿಕ್ಕ ಭಾಗ. ಅನಂತರ ಪುಟಗಳ ಸಂಖ್ಯೆಯ ದೃಷ್ಟಿಯಿಂದ ಮೊದಲ ನೆಯ ಭಾಗ (191 ಪುಟಗಳು) ನಾಲ್ಕನೆಯ ಭಾಗ (96 ಪುಟಗಳು) ಮತ್ತು ಎರಡನೆಯ ಭಾಗ (89 ಪುಟಗಳು) ಕ್ರಮವಾಗಿ ಬರುತ್ತವೆ. ಈ ಭಾಗಗಳು ಅಥವಾ ಅಧ್ಯಾಯಗಳಿಗೆ ಖಚಿತವಾದ ಆರಂಭ ಅಂತ್ಯಗಳಿಲ್ಲದಿದ್ದರೂ ಸ್ಥೂಲವಾಗಿ ಹೀಗೆ ಗುರುತಿಸಬಹುದು :

ಮೊದಲನೆಯ ಭಾಗದಲ್ಲಿ ಬೆಳಗಾವಿ ಜಿಲ್ಲೆಯ ಗೋಕಾಕ ತಾಲ್ಲೂಕಿನ ಮಲಾ ಮರಡಿಯಲ್ಲಿ 1919ನೆ ಇಸವಿ ಅಕ್ಟೋಬರ್ ತಿಂಗಳ 5 ರಂದು ಜನ್ಮ ತಳೆದ ಕಟ್ಟೀಮನಿಯವರ ಜನನದಿಂದ ಹಿಡಿದು ಅವರು ಮೆಟ್ರಿಕ್‌ವರೆಗೆ ಓದಿದ ಜೀವನ

ಚಿತ್ರಣವಿದೆ. ಸಶಸ್ತ್ರ ಪೋಲೀಸ್ ಪೇದೆಯ ಎರಡನೆಯ ಮಗನಾಗಿ ಜನಿಸಿ ಬಡತನದ ಬಾಳನ್ನು ಬಾಳಿ ಒಂಬತ್ತನೆಯ ವಯಸ್ಸಿನಲ್ಲೇ ಕಿವುಡಾಗಿ ಆ ಕಾರಣದಿಂದಲೇ ಸಾಹಿತ್ಯದ ಕಡೆಗೆ ವಿಶೇಷ ಒಲವನ್ನು ಹೊಂದಿ ತಂದೆ–ತಾಯಿಯರ, ಅಜ್ಜನ ಅಕ್ಕರೆಯ ವಾತ್ಸಲ್ಯದ ಸವಿಯುಂಡ ಕಟ್ಟೀಮನಿಯವರ ಬಾಲ್ಯದ ಈ ಭಾಗ ಒಂದು ಕಾದಂಬರಿಯಂತೆ ಓದಿಸಿಕೊಂಡು ಹೋಗುತ್ತದೆ.

ಎರಡನೆಯ ಭಾಗದಲ್ಲಿ ವಿದ್ಯಾಭ್ಯಾಸಕ್ಕೆ ಶರಣು ಹೊಡೆದು ಸ್ವತಂತ್ರ ಜೀವನಕ್ಕಾಗಿ ಪತ್ರಿಕೋದ್ಯಮನನ್ನು ಆರಿಸಿಕೊಂಡು ಪತ್ರಿಕೋದ್ಯಮಿಯಾಗಿ ಹುಬ್ಬಳ್ಳಿ, ಧಾರವಾಡ, ಬೆಂಗಳೂರು, ದಾವಣಗೆರೆ ಹೀಗೆ ಕರ್ಣಾಟಕದ ಊರುಗಳಲ್ಲಿ ತಿರುಗಿದ ಕಟ್ಟೀಮನಿಯವರ ಸಂಚಾರೀ ಜೀವನ ಅರ್ಥಾತ್ ಕಾರವಾನ್‍ದ ಚಿತ್ರಣವಿದೆ. ಈ ಅಲೆದಾಟದಲ್ಲಿ 'ತರುಣ ಕರ್ನಾಟಕ', 'ಸಮಾಜ', 'ಲೋಕ ಮತ', ಉಷಾ', 'ಜಯಂತಿ', 'ರಾಜಹಂಸ', 'ಜನಜೀವನ', 'ಕರ್ನಾಟಕ' ಬಂಧು' ಮೊದಲಾದ ಪತ್ರಿಕೆಗಳಲ್ಲಿ ಅವರು ಕೆಲಸ ಮಾಡಿದ್ದು ಮತ್ತು ಆ ಪತ್ರಿಕೆಗಳ ಹುಟ್ಟು ಸಾವುಗಳ ಕಥೆ ಬರುತ್ತದೆ. ಸುಮಾರು 1937ರಿಂದ 1947ರ ವರೆಗಿನ ಕರ್ಣಾಟಕದ ಪತ್ರಿಕೋದ್ಯಮದ ಏಳುಬೀಳುಗಳ ಚಿತ್ರಣ ಇಲ್ಲಿ ನಿರೂಪಿತವಾಗಿದೆ. ಅಂತೆಯೆ ಅನೇಕ ಪತ್ರಿಕೋದ್ಯಮಿಗಳ, ಸಾಹಿತಿಗಳ ಪರಿಚಯವೂ ಇಲ್ಲುಂಟು.

ಮೂರನೆಯ ಭಾಗದಲ್ಲಿ ಕಟ್ಟೀಮನಿಯವರ ಕಾದಂಬರಿಗಳಿಗೆ ಪ್ರಾಮುಖ್ಯ. ಕಟ್ಟೀಮನಿಯವರು ಇಲ್ಲಿ ತಮ್ಮ ಒಂದೊಂದು ಕಾದಂಬರಿಯ ಹಿನ್ನೆಲೆಯನ್ನೂ ಅವುಗಳಿಗೆ ತಾವು ಕಂಡ ಘಟನೆಗಳ, ವ್ಯಕ್ತಿಗಳ ಹಿನ್ನೆಲೆಯಿರುವುದರಿಂದ ಅವು ಗಟ್ಟಿಯಾಗಿರುವುದನ್ನೂ ನಿರೂಪಿಸಿದ್ದಾರೆ. 'ಮಾಡಿ ಮಡಿದವರು', 'ನಾನು ಪೋಲೀಸನಾಗಿದ್ದೆ !', 'ಬಂಗಾರದ ಜಿಂಕೆಯ ಹಿಂದೆ', 'ಜರತಾರಿ ಜಗದ್ಗುರು', 'ಮೋಹದ ಬಲೆಯಲ್ಲಿ', 'ಖಾನಾವಳಿಯ ನೀಲ'-ಮೊದಲಾದ ಕಾದಂಬರಿಗಳಲ್ಲಿ ತಾವು ಕಂಡ ನಿಜ ಜೀವನದ ವ್ಯಕ್ತಿಗಳನ್ನೇ, ಆಧಾರವಾಗಿಟ್ಟುಕೊಂಡು ಕಾದಂಬರಿ ರಚಿಸಿರುವುದರಿಂದ ಅವರಲ್ಲೂ ವಿಶೇಷವಾಗಿ 'ಜರತಾರಿ ಜಗದ್ಗುರು' ಮತ್ತು 'ಮೋಹದ ಬಲೆಯಲ್ಲಿ' ಕಾದಂಬರಿಗಳಲ್ಲಿ ವೀರಶೈವ ಮಠಾಧೀಶರ, ಸ್ವಾಮಿಗಳ ಅನೀತಿಯುತ ಬದುಕನ್ನು ಚಿತ್ರಿಸಿರುವುದರಿಂದ ರೊಚ್ಚಿಗೆದ್ದ ವೀರಶೈವಾಭಿಮಾನಿಗಳಿಂದ ತಮ್ಮ ಕೊಲೆಯ ಪ್ರಯತ್ನವೊಂದು ನಡೆದುದನ್ನು ನಿರೂಪಿಸಿದ್ದಾರೆ. ತಮ್ಮ ಅಪಾರವಾದ ಸಾಹಿತ್ಯ ಕೃಷಿಯಲ್ಲಿ ಕೆಲವಾದರೂ ಉತ್ತಮವಾದುವು ಇವೆ ಎಂಬ ಆತ್ಮವಿಶ್ವಾಸ ಕಟ್ಟೀಮನಿಯವರಿಗಿದೆ. ತಮ್ಮ ಕೃತಿಗಳನ್ನು ಸ್ವವಿಮರ್ಶೆ ಮಾಡಿಕೊಂಡಿದ್ದಾರೆ. ವಿಮರ್ಶಕರ ಅಭಿಪ್ರಾಯಗಳಿಗೂ ಮನ್ನಣೆ ಕೊಡುವ ಸೌಜನ್ಯ ಅವರಲ್ಲಿದೆ. ಅನೇಕ ವಿಮರ್ಶಕರು ಎತ್ತಿ ತೋರಿರುವ ನ್ಯೂನತೆಗಳನ್ನು ತೆರೆದ ಮನಸ್ಸಿನಿಂದ ಸ್ವೀಕರಿಸಿದ್ದಾರೆ. ಆ ಕಾರಣದಿಂದಲೆ ಅಪ್ರಬುದ್ಧವೆಂದು ತೋರಿದ ಕೆಲವು ಕೃತಿಗಳ ಮರು ಮುದ್ರಣಕ್ಕೆ ಬೇಡಿಕೆಯಿದ್ದರೂ ನಿರಾಕರಿಸಿರುವುದಾಗಿ ಹೇಳಿದ್ದಾರೆ.

ನಾಲ್ಕನೆಯ ಭಾಗವನ್ನು ತಮ್ಮ ರಾಜಕೀಯ ಜೀವನಕ್ಕೆ ಮುಡಿಪಾಗಿಟ್ಟಿದ್ದಾರೆ. ಅದರಲ್ಲೂ 1968ರಲ್ಲಿ ತಾವು ವಿಧಾನ ಪರಿಷತ್ತಿನ ಸದಸ್ಯರಾಗಿ 1974ರಲ್ಲಿ ನಿವೃತ್ತಿಯಾಗುವವರೆಗಿನ ಅವಧಿಯ ರಾಜಕೀಯ ಚಟುವಟಿಕೆಗಳನ್ನು ಈ ವಿಭಾಗದಲ್ಲಿ ಚಿತ್ರಿಸಿದ್ದಾರೆ. ತಾವು ವಿಧಾನ ಪರಿಷತ್ತಿನ ಸದಸ್ಯರಾಗಲು ನಡೆಸಿದ ಪ್ರಯತ್ನವನ್ನು ಮುಚ್ಚುಮರೆಯಿಲ್ಲದೆ ಹೇಳಿಕೊಂಡಿದ್ದಾರೆ.

ಕೊನೆಯ ಭಾಗವನ್ನು ಮಲಾಮುರಡಿಯಲ್ಲಿನ ತಮ್ಮ ಜೀವನಕ್ಕೆ. ಸಮಾಜ ಸೇವೆಗೆ, ತಾವು 52ನೇ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದ ವಿಚಾರಕ್ಕೆ ಮುಡುಪಾಗಿಟ್ಟಿದ್ದಾರೆ.

ಕಟ್ಟೀಮನಿಯವರ ವೈವಿಧ್ಯಮಯವಾದ ಸಾಹಸದ ಬದುಕಿನಲ್ಲಿ ಅವರ ಸಂಪರ್ಕಕ್ಕೆ ಬಂದ ಅಪ್ರಸಿದ್ಧರು, ಪ್ರಸಿದ್ಧರು, ರಾಜಕಾರಣಿಗಳು, ಸಾಹಿತಿಗಳು. ಸಾಮಾನ್ಯರು, ಎಲ್ಲರನ್ನೂ ಕೆಲವೇ ಮಾತುಗಳಲ್ಲಿ, ಕುಶಲನಾದ ಚಿತ್ರಕಾರ ಕೆಲವೇ ಗೆರೆಗಳಿಂದ ಸುಂದರವಾದ ಚಿತ್ರವನ್ನು ಬಿಡಿಸುವಂತೆ, ಅವರ ಬಹಿರಂಗ ಅಂತರಂಗಗಳು ಸ್ಫುಟವಾಗುವಂತೆ ಚಿತ್ರಿಸಿದ್ದಾರೆ. ಉದಾಹರಣೆಗೆ :

"ಅವರಿಗಾಗ ಸುಮಾರು ಮೂವತ್ತರ ಹರೆಯ 'ಕಾನೂರು ಸುಬ್ಬಮ್ಮ ಹೆಗ್ಗಡಿತಿ'ಯ ನಾಯಕ ಹೂವಯ್ಯನೇ ಜೀವತಳೆದು ಪ್ರಕಟವಾದಂಥ ರೂಪು. ಸುಂದರವಾದ ಗುಂಗುರು ಗೂದಲು ; ಜಿಂಕೆಯ ಕಣ್ಣಿನಂಥ ಕಣ್ಣು ; ತೆಳ್ಳಗಿನ ಎತ್ತರದ ನಿಲುವು ; ಖಾದಿಯ ನೆಹರೂ ಶರ್ಟು, ಕಚ್ಚೆಪಂಚೆ, ಕೊರಳಸುತ್ತ ಬಿಳಿಯ ವಸ್ತ್ರ ಹಿತಮಿತವಾದ ಮಾತು, ಗಂಭೀರವಾದ ನಡಿಗೆ" (ಪು. 164) ಇದು ಕುವೆಂಪು ಅವರ ಚಿತ್ರ.

"ಆಗ ಅ.ನ.ಕೃ. ಇನ್ನೂ ಯುವಕರು. ಸುಂದರವಾದ ಮುಖಮಂಡಲ. ಮೋಹಕವಾದ ಮುಗುಳು ನಗೆ. ಶಿಸ್ತಿನಿಂದ ಬಾಚಿ ನಡುವೆ ಬೈತಲೆ ತೆಗೆದ ಕಪ್ಪು. ಸರ್ಜ್‌ಸೂಟ್ ಧರಿಸಿ ಟೈ ಸಹ ಕಟ್ಟುತ್ತಿದ್ದರು. ಹ್ಯಾಟು ಹಾಕುತ್ತಿದ್ದುದೂ ಇತ್ತು. ಶೇರ್‌ವಾನಿ -ಪಯಜಾಮುಗಳನ್ನೂ ಧರಿಸುತ್ತಿದ್ದರು. ಒಮ್ಮೊಮ್ಮೆ ಮೈಸೂರು ಲುಂಗಿ, ಉಟ್ಟು, ನೆಹರೂ ಶರ್ಟು ತೊಟ್ಟು ಜರತಾರೀ ಶಲ್ಯ ಧರಿಸುತ್ತಿದ್ದರು" (ಪು. 148) "ಸ್ನೇಹಿತರನ್ನು, ಸಹೋದ್ಯೋಗಿಗಳನ್ನು, ತಮಗಿಂತ ಕಿರಿಯರಾದವರನ್ನೂ ಸಹ ಅ.ನ.ಕೃ. ಅವರಷ್ಟು ಅಕೃತಿಮ ವಿಶ್ವಾಸದಿಂದ ಕಾಣುವವರು ವಿರಳ. ತಾನು ಹಿರಿಯ ಲೇಖಕ, ಜನಪ್ರಿಯ ಕಥೆಗಾರ ಕಾದಂಬರಿಕಾರ, ಪ್ರಸಿದ್ಧವಾಗ್ಮಿ ಎಂಬ ಜಂಬ ಕೃಷ್ಣರಾಯರಲ್ಲಿ ಕೊಂಚವೂ ಇರಲಿಲ್ಲ" (ಪು. 217). "ಕನ್ನಡ ಸಾಹಿತ್ಯದಲ್ಲಿ ಅ.ನ.ಕೃ. ಅವರಂತೆ ಸಾಹಸದಿಂದ ಜೀವಿಸಿದ ಬರಹಗಾರನಿನ್ನೊಬ್ಬನಿಲ್ಲ". ಇದು ಅ.ನ.ಕೃ. ಚಿತ್ರ.

"ಮಾಸ್ತಿಯವರ ಹೃದಯ ತಾಯಿ ಹೃದಯ ; ಕಿರಿಯ ಲೇಖಕರ ಬಗೆಗೆ ಯಾವಾಗಲೂ ವಾತ್ಸಲ್ಯವೇ, ಪ್ರೀತಿಯೇ. ನಾವು ತಿಳಿಯದೆ ಅವರನ್ನು ಬಯ್ದರೂ ಬಯ್ಯಿಸಿಕೊಂಡು ಪುನಃ ವಾತ್ಸಲ್ಯವನ್ನೇ ಪ್ರಕಟಿಸುವ ಉದಾರ ಸ್ವಭಾವ ಮಾಸ್ತಿಯವರದು." (ಪು. 164).

"ತಾಯಿಯ 'ವಾತ್ಸಲ್ಯ', ಸೋದರನ 'ಕಕ್ಕುಲಾತಿ' ಬೇಂದ್ರೆಯವರ ವೈಶಿಷ್ಟ್ಯ." (ಪು. 151) "ಬೇಂದ್ರೆಯವರು ದೊಡ್ಡವರು. ಆದರೂ ಒಮ್ಮೊಮ್ಮೆ ಸಣ್ಣ ಮಕ್ಕಳ ಹಾಗೆ ಸಿಟ್ಟುಮಾಡಿಕೊಳ್ಳುತ್ತಾರೆ. ಆ ಸಿಟ್ಟು ಬಹಳ ಹೊತ್ತು ಇರುವುದಿಲ್ಲ." (ಪು. 154) "ಬೇಂದ್ರೆಯಿದ್ದಲ್ಲಿ ನಗೆಮಾತು, ನಗೆ, ಸಿಟ್ಟು, ಬಿರುಸುಮಾತು, ಮತ್ತೆ ನಗೆ ಇದೆಲ್ಲ ಇದ್ದೇ ಇರುತ್ತದೆ. ಅವರದೆಲ್ಲವೂ ಝಳ ಝಳ. ಒಳಗೊಂದು ಇಟ್ಟು ಕೊಂಡು ಹೊರಗೊಂದು ಮಾತನಾಡುವುದು ಅವರ ಜಾಯಮಾನವೇ ಅಲ್ಲ." (ಪು. 530).

ಹೀಗೆ ಇನ್ನೂ ಅನೇಕ ಸಾಹಿತಿಗಳ ಶಬ್ದರೇಖಾ ಚಿತ್ರಗಳು ಕೃತಿಯುದ್ದಕ್ಕೂ ಇವೆ. ಹಾಗೆಯೆ ರಾಜಕಾರಣಿಗಳ ಚಿತ್ರಣಗಳೂ ಇವೆ. "ತೆಳ್ಳಗಿನ ದೇಹಾಕೃತಿ, ಮಧ್ಯಮ ಎತ್ತರ, ಶಿಸ್ತಿನ ಉಡುಗೆ-ತೊಡುಗೆ. ಮಂತ್ರಿಗೆ ಅವಶ್ಯವಿರುವ ಠೀವಿ ಯಿಂದ ವರ್ತಿಸುವ ಗತ್ತು. ಕನ್ನಡ-ಇಂಗ್ಲಿಷ್ ಹಿಂದೀ ಉರ್ದು ಭಾಷೆಗಳಲ್ಲಿ ಪ್ರಭುತ್ವ ಯಾವ ಸಾಹಿತಿಗೂ ಕಡಿಮೆಯಿಲ್ಲದಷ್ಟು ಸುಂದರವಾದ ಶೈಲಿಯಲ್ಲಿ ಮಾತ ನಾಡುವ ಪ್ರತಿಭೆ. ಬಿಗುಮಾನದ ಆದರೂ ಸ್ನೇಹಮಯದ ವರ್ತನೆ"(ಪು. 571) ಇದು ವೀರೇಂದ್ರ ಪಾಟೀಲರ ಚಿತ್ರ. "ಉತ್ತರ ಕನ್ನಡದ ಕೆಂಬಣ್ಣದ ಸ್ಫುರದ್ರೂಪಿಯುವಕ. ರಾಜಕೀಯಕ್ಕೆ ಪ್ರವೇಶಿಸದಿದ್ದರೆ ಇವರು ವಿದ್ಯಾರ್ಥಿಪ್ರಿಯಅಧ್ಯಾಪಕರಾಗಬಹುದಾಗಿತ್ತು ಕನ್ನಡ-ಇಂಗ್ಲಿಷ್-ಹಿಂದೀ ಸಾಹಿತ್ಯಗಳ ಗಾಢ ವ್ಯಾಸಂಗ. ರಾಜಕೀಯ ಶಾಸ್ತ್ರದಲ್ಲಿ ಎಂ.ಎ. ಪದವಿ. ಅರ್ಥಶಾಸ್ತ್ರದಲ್ಲಿ ವಿಶೇಷ ಅಭ್ಯಾಸ. ಸಚಿವ ಪದವಿಗೆ ಅರ್ಹವಾದ ಅಗತ್ಯವಾದ ದರ್ಪವಿದೆಯಾದರೂ ಸ್ನೇಹಿತರ ಬಳಗದಲ್ಲಿ ಸಲುಗೆಯ ಜೀವಿ, ಸರಸಿ. ರೇಶಿಮೆಯ ಬುಶ್‌ಶರ್ಟ್ ಪ್ಯಾಂಟು, ಸೇದುವುದು ಉಚ್ಚ ವರ್ಗದ 555 ಸಿಗರೇಟು' (ಪು. 582) "ಸಿನಿಮಾ ನಟರಾಗಿ ಯಶಸ್ವಿಯಾಗುವಂತಿದ್ದ ಹೆಗಡೆಯವರು ರಾಜ ಕಾರಣಿಯೂಗಿಯೂ, ಕುಶಲ ನಟನಂತೆಯೇ ಚಮತ್ಕಾರ ತೋರುತ್ತಿದ್ದರು. ಮಾತು ಗಾರಿಕೆಯನ್ನು ಒಂದು ಲಲಿತ ಕಲೆಯಂತೆ ಉಪಯೋಗಿಸಿಕೊಳ್ಳುವ ಹೆಗಡೆಯವರ ಬುದ್ಧಿವಂತಿಕೆ ಮೆಚ್ಚಿಕೊಳ್ಳುವಂಥದು" ಇದು ರಾಮಕೃಷ್ಣ ಹೆಗ್ಗಡೆಯವರ ಚಿತ್ರ. ಅಂತೆಯೆ ಆರ್. ಆರ್. ದಿವಾಕರ್, ಸಿದ್ದವನಹಳ್ಳಿ ನಿಜಲಿಂಗಪ್ಪ, ಕೆ. ವಿ. ಶಂಕರೇಗೌಡ, ಹುಚ್ಚಮಾಸ್ತಿಗೌಡ, ಹಳ್ಳಿಕೇರಿ ಗುದ್ಲೆಪ್ಪ ಮೊದಲಾದವರ ಚಿತ್ರಣಗಳೂ ಇವೆ.

ಕಟ್ಟೀಮನಿಯವರು ಎಲ್ಲರನ್ನು ಮೆಚ್ಚಿಕೊಂಡೇ ಬರೆದಿದ್ದಾರೆಂದಲ್ಲ. ಅವರ ಖಡಕ್ ವ್ಯಕ್ತಿತ್ವಕ್ಕೆ ತಕ್ಕಂತೆ ತಮಗಾದವರನ್ನು ಹಾಗೆಯೆ, ಚಿತ್ರಿಸಿದ್ದಾರೆ. ಅಪ್ರಿಯ ವಾದುದನ್ನೂ ನುಡಿದಿದ್ದಾರೆ. ಆತ್ಮ ಚರಿತ್ರೆಯ ನಾಲ್ಕಾರು ಕಡೆ ಬರುವ ಕುವೆಂಪುವನ್ನು ಅವರು 'ಶ್ರೀ ಕುವೆಂಪು'ವೆಂದಲ್ಲದೆ ಸಂಬೋಧಿಸುವುದೇ ಇಲ್ಲ. ಅವರ ಬಗ್ಗೆ ಅಪಾರ ವಾದ ಗೌರವ. ಅಂತಹ ಕುವೆಂಪು ಅವರ ಸಂದರ್ಶನಕ್ಕೆ ಮೈಸೂರಿಗೆ ಹೋಗಿ ಸಂದರ್ಶನ ಸಿಗದೆ ಬಂದ ಪ್ರಸ್ತಾಪವನ್ನು ಸವಿವರವಾಗಿ ಬರೆದಿದ್ದಾರೆ. ಅ.ನ.ಕೃ. ಬಗ್ಗೆ ಆತ್ಮೀಯತೆ ಗೌರವಗಳಿದ್ದರೂ ಅವರು ಪ್ರಗತಿಶೀಲ ಪಂಥದಿಂದ ದೂರವಾಗು

ತ್ತಿದ್ದಾಗ ಖಂಡಿಸಲು ಹಿಂದೆಮುಂದೆ ನೋಡಲಿಲ್ಲ. ಅ.ನ.ಕೃ. ಅವರ 'ನಟಸಾರ್ವಭೌಮ' ವನ್ನು 'ವಿಟಸಾರ್ವಭೌಮ' ಎಂದು ಕರೆದಿದ್ದಾರೆ. 'ಶನಿಸಂತಾನ'ವೊದಲಾದ ಕಾದಂಬರಿ ಗಳು ಪ್ರಗತಿಶೀಲ ಪಂಥದವಲ್ಲ ಎಂದು ಖಂಡಿಸಿದ್ದಾರೆ. ಸಾಮರ್ಥ್ಯದ ಪ್ರಶ್ನೆ ಬಂದಾಗ ಅ.ನ.ಕೃ. ಅವರಿಗಿಂತ ಮೇಲ್ಮಟ್ಟದ ಕಾದಂಬರಿಕಾರ ತ.ರಾ.ಸು.' (ಪು. 241) ಎಂದ ಹೇಳುತ್ತಾರೆ. ಹೀಗೆ ನಿರ್ಭೀತಿಯಿಂದ ಎಲ್ಲರ ಬಗೆಗೆ ಹೇಳುವರಾದರೂ ಕೆಲವುಕಡೆಗಳಲ್ಲಿ ಕತ್ತಲಲ್ಲಿ ಕತ್ತಿಬೀಸಿದಂತೆ ಹೆಸರನ್ನೇ ಹೇಳದೇ ಕೆಲವು ಸಾಹಿತಿಗಳ, ರಾಜಕರಣಿಗಳ ತೇಜೋಭಂಗ ಮಾಡುತ್ತಾರೆ. ಹೀಗೆ ಕಟ್ಟೀಮನಿಯವರ ಕೋಪಕ್ಕೆ ಗುರಿಯಾದ ಆ ವ್ಯಕ್ತಿಗಳು ಯಾರು ? ಮಿತ್ರರೊ ಶತ್ರುಗಳೊ? ತಿಳಿಯುವುದಿಲ್ಲ. ಈ ಮಸುಕಿನೊಳಗಿವ ಗುದ್ದು ಬೇಕಾಗಿರಲಿಲ್ಲ. ಎಲ್ಲ ಕಡೆ ಸ್ಪಷ್ಟವಾಗಿದ್ದವರಿಗೆ ಇಲ್ಲೇಕೋ ಹಿಂಜರಿಕೆ ತಿಳಿಯುವುದಿಲ್ಲ.

ಈಗಾಗಲೆ ಕುವೆಂಪು ಸಂದರ್ಶನಕ್ಕೆ ಹೋಗಿ ಅಸಮಾಧಾನದಿಂದ ಬಂದ ಪ್ರಸಂಗ ವನ್ನು ಹೇಳಿದೆ. ಆ ವಿಚಾರವಾಗಿ ಖಡಕ್ ಆದ ಪತ್ರವೊಂದನ್ನು ಕುವೆಂಪು ಅವರಿಗೆ ಬರೆದು ಅದಕ್ಕೆ ಉತ್ತರ ರೂಪವಾಗಿ ಕುವೆಂಪು ಬರೆದ ಪತ್ರವನ್ನು ಆತ್ಮಚರಿತ್ರೆಯಲ್ಲಿ ಕಟ್ಟೀಮನಿಯವರು ಪ್ರಕಟಿಸಿದ್ದಾರೆ. ಕುವೆಂಪು ಅವರ ಪತ್ರವಲ್ಲದೆ ಅ.ನ.ಕೃ., ಗೊಪಾಲಕೃಷ್ಣ ಅಡಿಗ, ಎ. ಸೀತಾರಾಂ, ಎಲ್. ಎಸ್. ಶೇಷಗಿರಿರಾವ್ ಮೊದಲಾದ ವರ ಪತ್ರಗಳನ್ನೂ ಕೊಟ್ಟಿದ್ದಾರೆ. ಗೋಪಾಲಕೃಷ್ಣ ಅಡಿಗರು ಬರೆದಿರುವ ಪತ್ರಗಳು 365ನೇ ಪುಟದಿಂದ 398ನೆ ಪುಟಗಳವರೆಗೆ ಇವೆ. ಇವುಗಳಲ್ಲಿ ಬಸವರಾಜ ಕಟ್ಟೀಮನಿ ಅವರ ಕಾದಂಬರಿಗಳ ವಿಮರ್ಶೆಯಿರುವಂತೆಯೆ ನವ್ಯಕವಿತೆಯ ವಿಚಾರವಾಗಿ ಗೋಪಾಪಾಲಕೃಷ್ಣ ಅಡಿಗರು ಬರೆದಿರುವ ಸಾಹಿತ್ಯಕ ಚರ್ಚೆಯಿದೆ, ಸಮರ್ಥನೆಯಿದೆ. ಅದು ಬಹು ಉಪಯುಕ್ತವಾದ ಚರ್ಚೆ. ಹಾಗೆಯೆ ಶೇಷಗಿರಿರಾಯರ ಪತ್ರಗಳು ಪ್ರಗತಿಶೀಲ ಸಾಹಿತ್ಯದ ದೃಷ್ಟಿಯಿಂದ ಉಪಯುಕ್ತವಾದುವು.

ಆತ್ಮ ಚರಿತ್ರೆಗಾರನಿಗಿರಬೇಕಾದ ತೆರದ ಮನಸ್ಸು ಕಟ್ಟೀಮನಿ ಅವರಿಗಿದೆ. ತಮ್ಮ ಬದುಕಿನ ಎಲ್ಲ ವಿವರಗಳನ್ನು ನಮ್ಮ ಮುಂದೆ ಇಡುವ ಕಟ್ಟೀಮನಿ ಅವರು ಏಕೋ ಏನೊ ತಮ್ಮ ಕೌಟುಂಬಿಕ ಜೀವನದ ಬಗ್ಗೆ ಹೆಚ್ಚು ವಿವರಗಳನ್ನು ಕೊಟ್ಟಿಲ್ಲ. ತಮ್ಮ ತಮ್ಮಂದಿರ ಬಗ್ಗೆ ಹೆಚ್ಚಿಗೆ ಹೇಳಿಲ್ಲ. ತಮ್ಮ ಮಗ ತಾವು ಹಾಕಿಕೊಟ್ಟ ಪ್ರೆಸ್ಸನ್ನು ಸರಿಯಾಗಿ ನಡಸದೆ ಉಡಾಳತನದಿಂದ ವರ್ತಿಸಿ ಕೇಳಿದಾಗ ಉಢಾಫೆಯ ಉತ್ತರ ಗಳನ್ನು ಕೊಟ್ಟರೂ ರೈತ ರಕ್ತದ ಖಡಕ್ ಮನೋವೃತ್ತಿಯ ಕಟ್ಟೀಮನಿ ಸುಮ್ಮನಾಗು ತ್ತಾರೆ. ತಮ್ಮ ಪ್ರೀತಿಯ ಮಗಳು ಮಂಜುಳಾ ಅವರ ಬಗೆಗೂ ಹೆಚ್ಚಿನ ವಿವರಗಳಿಲ್ಲ. ರಾಜಕೀಯದ ವಿಚಾರಕ್ಕೆ ಒಂದು ಅಧ್ಯಾಯವನ್ನೇ ಮೀಸಲಾಗಿಟ್ಟಿರುವ ಕಟ್ಟೀಮನಿ ಯವರು ತುರ್ತು ಪರಿಸ್ಥಿತಿಯ ಬಗ್ಗೆ ಒಂದೇ ಒಂದು ಮಾತನ್ನೂ ಆಡಿಲ್ಲ. ವಿನೋಬಾ, ಜೆ.ಪಿ. ಬಗೆಗೂ ತಮ್ಮ ಅಸಮಾಧಾನವನ್ನು ಹೇಳಿಕೊಂಡಿರುವ ಕಟ್ಟೀಮನಿ ಈ ವಿಷಯ ದಲ್ಲಿ ಯಾಕೆ ಮೌನವಹಿಸಿದ್ದಾರೋ ತಿಳಿಯುವುದಿಲ್ಲ ಅಥವಾ ನೆಹರೂ ಮತ್ತು ಇಂದಿರಾ

ಗಾಂಧಿಯವರ ಬಗೆಗೆ ಇರುವ ವಿಶೇಷವಾದ ಗೌರವದಿಂದಲೆ? ವ್ಯಕ್ತಿ ಸ್ವಾತಂತ್ರ್ಯದ ಬಗೆಗೆ ವಿಶೇಷ ಕಾಳಜಿಯಿಂದ ಮಾತನಾಡುವ ಕಟ್ಟೀಮನಿ ಅವರಿಗೆ ಏನೂ ಅನ್ನಿಸಲೇ ಇಲ್ಲವೆ ತುರ್ತು ಪರಿಸ್ಥಿತಿಯ ಬಗೆಗೆ ?

ಶಂ.ಬಾ. ಜೋಷಿಯವರನ್ನು ಕುರಿತು "ಅನೇಕ ವಿಷಯಗಳ ಬಗೆಗೆ ಅವರು ವ್ಯಾಸಂಗ ಮಾಡಿರುವುದೂ, ವಿಚಾರ ಮಾಡಿರುವುದೂ ನಿಜ. ಆದರೆ ಯಾವುದೊಂದು ವಿಷಯವನ್ನೂ ಕ್ರಮಬದ್ಧವಾಗಿ ನಿರೂಪಿಸುತ್ತ ಹೋಗುವ ಶಕ್ತಿ ಅವರಲ್ಲಿಲ್ಲ. ವಿಷಯದಿಂದ ವಿಷಯಕ್ಕೆ ಹಾರುತ್ತಾರೆ. ಪ್ರಸ್ತುತ ವಿಷಯಕ್ಕೆ ಸಂಬಂಧವಿಲ್ಲದ ಅನೇಕ ಅಂಶಗಳನ್ನು ತುಂಬುತ್ತಾರೆ. ಅದರಿಂದಾಗಿ, ಅವರ ಬರಹ ಜಾಳುಜಾಳಾಗುತ್ತದೆ ; ಓದುವಾಗ ಬಹಳ ಬೇಸರವಾಗುತ್ತದೆ. ಅವರ ತೀರ್ಮಾನಗಳನ್ನು ಒಪ್ಪಿಕೊಳ್ಳಲಾಗುವುದಿಲ್ಲ. ಸಂಶೋಧನೆಯೂ ಒಂದು ಶಿಸ್ತಿನಿಂದ ನಡೆಯಬೇಕಾಗುತ್ತದೆ. ಶಂಬಾ ಅವರಲ್ಲಿ ಅದೇ ಕೊರತೆ" (ಪು. 578) ಎಂದು ಹೇಳಿದ್ದಾರೆ. ಇದೇ ಮಾತುಗಳನ್ನು ಯಥಾವತ್ತಾಗಿ ಕಟ್ಟೀಮನಿ ಅವರ ಈ ಆತ್ಮಚರಿತ್ರೆಗೂ ಹೇಳಬಹುದು. ಇಲ್ಲಿ ಅನೇಕ ವ್ಯಕ್ತಿ ಚಿತ್ರಣಗಳು ಬರುತ್ತವೆ. ಯಾರಿಗೆ ಎಷ್ಟು ಸ್ಥಾನಕೊಡಬೇಕೆಂಬ ಔಚಿತ್ಯ ಕಂಡು ಬರುವುದಿಲ್ಲ. ಮತ್ತು ಯಾವುದನ್ನು ಹೇಳಬೇಕು ಎಷ್ಟು ಹೇಳಬೇಕೆಂಬಲ್ಲಿ ಸಂಯಮ ಕಂಡುಬರುವುದಿಲ್ಲ. ಉದಾಹರಣೆಗೆ 'ಸೋವಿಯತ್ ದೇಶ ನೆಹರೂ ಬಹುಮಾನ'ದ ಬಗ್ಗೆ ಲಂಕೇಶರು ಪ್ರಜಾವಾಣಿ ವಾಚಕರ ವಾಣಿಯಲ್ಲಿ ಬರೆದ ಪೂರ್ಣ ಪತ್ರವನ್ನೂ ಅದಕ್ಕೆ ಪ್ರತಿಕ್ರಿಯೆಯಾಗಿ ಬರೆದ ಎಲ್ಲರ ಪತ್ರಗಳನ್ನು ಕೊಟ್ಟಿದ್ದಾರೆ. ವಿಧಾನ ಪರಿಷತ್ತಿನ ತಮ್ಮ ಪ್ರಥಮ ಮತ್ತು ಕೊನೆಯ ಭಾಷಣಗಳ ಪೂರ್ಣಪಾಠವನ್ನು ಕೊಟ್ಟಿದ್ದಾರೆ. ಇವುಗಳ ಪೂರ್ಣ ಪಾಠಗಳ ಅವಶ್ಯಕತೆ ಇತ್ತೆ ? ಪೂರ್ಣ ಪಾಠವನ್ನು ಕೊಟ್ಟದ್ದರಿಂದ ಅಷ್ಟರ ಮಟ್ಟಿಗೆ ಕಲಾತ್ಮಕತೆಗೆ ಧಕ್ಕೆ ಬರಲಿಲ್ಲವೆ? ಒಂದು ಒಳ್ಳೆಯ ಆತ್ಮ ಚರಿತ್ರೆ ತನ್ನ ಬದುಕಿನ ವಿವರಗಳನ್ನು ಯಥಾವತ್ತಾಗಿ ಕೊಡುವುದು ಮಾತ್ರವಲ್ಲ ಕಲಾತ್ಮಕವಾಗಿಯೂ ಕೊಡಬೇಕಾಗುತ್ತದೆ. ತನ್ನ ಬದುಕಿನ ಎಲ್ಲ ವಿವರಗಳನ್ನು ಮುಚ್ಚುಮರೆಯಿಲ್ಲದೆ ಕೊಡಬೇಕಾಗುತ್ತದೆ. ತನ್ನ ಜೀವನದ ಪ್ರಮುಖ ಘಟನೆಗಳ ಆಯ್ಕೆಯಲ್ಲಿ ಐತಿಹಾಸಿಕವಾಗಿ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಪ್ರಮುಖವಾದ ಘಟನೆಗಳನ್ನು ಆಯ್ಕೆಮಾಡಿಕೊಳ್ಳಬೇಕಾಗುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಕಟ್ಟೀಮನಿಯವರ ಆತ್ಮಕತೆಯಲ್ಲಿ ಕಲಾತ್ಮಕತೆಗೆ ಭಂಗಬಂದಿರುವುದೂ, ತೀರ ಸಾಧಾರಣವಾದ, ಅನವಶ್ಯಕವಾದ ವಿಚಾರಗಳಿಗೂ ಹೆಚ್ಚಿನ ಪುಟಗಳನ್ನು ಕೊಟ್ಟಿರುವುದರಿಂದ 'ಕಾದಂಬರಿಕಾರನ ಆತ್ಮಕಥೆ' ಜಾಳುಜಾಳಾಗಿ ಕಂಡು ಬರುತ್ತದೆ. "...ಆದರೆ ಕಥಾನಾಯಕನ ಇಡಿಯ ಜೀವನವೇ ಆತ್ಮಕಥೆಯ ವಸ್ತುವಾಗಿರುವುದರಿಂದ ಅವನು ಕಂಡ, ಕೇಳಿದ, ಅನುಭವಿಸಿದ ಎಲ್ಲ ವಿಷಯಗಳಿಗೂ ಆತ್ಮಕಥೆಯಲ್ಲಿ ಅವಕಾಶವಿರುತ್ತದೆ." (ಕಥೆಗೆ ಮೊದಲು) ಎಂಬ ಬಸವರಾಜ ಕಟ್ಟೀಮನಿ ಅವರ ಮಾತನ್ನು ಒಪ್ಪಬಹುದಾದರೂ ತಾನು ನಿರೂಪಿಸುವ ವಿಚಾರಗಳ ಆಯ್ಕೆಯ ವಿಚಾರದಲ್ಲಿ ಎಚ್ಚರ ಮತ್ತು ಕಲಾತ್ಮಕ ದೃಷ್ಟಿಯಿದ್ದು ನಿರೂಪಣೆಯಲ್ಲಿ ಸಂಯಮ

ವಿರಬೇಕಾಗಿತ್ತೆಂದು ಅನಿವಾರ್ಯವಾಗಿ ಹೇಳಬೇಕಾಗಿದೆ. ಆತ್ಮಚರಿತ್ರೆಗೆ ನೇರವಾಗಿ ಸಂಬಂಧಿಸದ ಅನೇಕ ವಿಚಾರಗಳನ್ನು ಬಿಡಬಹುದಾಗಿತ್ತು. ಉದಾಹರಣೆಗೆ ದೇಜಗೌ ಮತ್ತು ಹಾಮಾನಾ ಅವರೊಡನೆ ಗೋವಾ ಪ್ರವಾಸದ ನಿರೂಪಣೆ, ಕಣವಿ ಅವರೊಡನೆ ಸಂಗಮ ಮೊದಲಾದ ಪ್ರದೇಶಗಳ ನಿರೂಪಣೆ ಇತ್ಯಾದಿಗಳು. ಅಥವಾ ಈ ಪ್ರವಾಸಗಳ ವರದಿಯನ್ನು ಸಂಕ್ಷಿಪ್ತವಾಗಿ ಕೊಡಬಹುದಿತ್ತು, ವಿಸ್ತಾರದ ಬದಲು. ಹಾಗೆಯೆ ಅನೇಕ ವ್ಯಕ್ತಿ ಚಿತ್ರಗಳನ್ನು ಅನಾವಶ್ಯಕವಾಗಿ ಕೊಡುತ್ತಾ ಹೋಗುವುದನ್ನೂ ಬಿಡ ಬಹುದಾಗಿತ್ತು. ಉದಾಹರಣೆಗೆ 'ಹಂಪನಾ', 'ಕಲ್ಲೆ ಶಿವೋತ್ತಮರಾವ್' ಮೊದಲಾದ ವ್ಯಕ್ತಿ ಚಿತ್ರಗಳು.

ಮೇಲೆ ಹೇಳಿರುವ ಕೆಲವು ನ್ಯೂನತೆಗಳಿದ್ದರೂ ಬಸವರಾಜ ಕಟ್ಟೀಮನಿ ಅವರ ಆತ್ಮಕತೆ ಒಂದು ಪ್ರಮುಖವಾದ ಕೃತಿ. ಸ್ವಾತಂತ್ರ್ಯ ಹೋರಾಟದ ವಿವಿಧ ಮುಖಗಳು, ಸಾಹಿತಿಗಳು, ರಾಜಕಾರಣಿಗಳ ಅಂತರಂಗ ಬಹಿರಂಗಗಳು, ಕರ್ನಾಟಕದ ಪತ್ರಿಕಾರಂಗದ ಕೆಲವು ವರ್ಷಗಳ ಇತಿಹಾಸ ಮೊದಲಾದವುಗಳಿಂದ ಇದೊಂದು ಸಾಂಸ್ಕೃತಿಕ ದಾಖಲೆಯಾಗುವುದರಲ್ಲಿ ಅನುಮಾನವಿಲ್ಲ.

—ಹು. ಕಾ. ಜಯದೇವ್

o o o o o o

ಗದಗಿನ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠದಿಂದ ಪ್ರಕಟಿತ ವಾದ, ಜೀವನಚರಿತ್ರೆಯನ್ನು ಹೇಳುವ ಹದಿನೈದು ಪುಸ್ತಿಕೆಗಳನ್ನು ಇಲ್ಲಿ ಗಮನಿಸ ಲಾಗಿದೆ. ಈ ಪುಟ್ಟ ಪುಸ್ತಕಗಳ ಶೀರ್ಷಿಕೆಗಳು ಕ್ರಮವಾಗಿ ಹೀಗಿವೆ: 'ವ್ಯಾಕರಣದ ಮಲ್ಲಪ್ಪನವರು' (—ದೇ. ಜವರೇಗೌಡ), 'ಪಂಚಾಕ್ಷರಿ ಗವಾಯಿಗಳು' (–ಸದಾನಂದ ಕನವಳ್ಳಿ), 'ಬಬಲೇಶ್ವರ ಶಾಂತವೀರಪಟ್ಟಾಧ್ಯಕ್ಷರು' (–ಸಿಂಪಿ ಲಿಂಗಣ್ಣ), 'ಹಾನಗಲ್ ಶಿವಕುಮಾರ ಯೋಗಿಗಳು' (–ಜ.ಚ.ನಿ.), ಮುರಗೋಡ ಮಹಾಂತ ಶಿವಯೋಗಿಗಳು (–ಸಂಗಮೇಶ ಸವದತ್ತಿಮಠ,) 'ಬಂಥನಾಳ ಶಿವಯೋಗಿಗಳು' (–ಈಶ್ವರಚಂದ್ರ ಚಿಂತಾಮಣಿ), 'ರಾಂಪುರೆ ಮಹಾದೇವಪ್ಪನವರು' (–ಎಂ. ಜಿ. ಬಿರಾದಾರ), ಮೆಣಸಿನಕಾಯಿ ಶಾಂತವೀರಪ್ಪನವರು (ಚೆನ್ನಕ್ಕ ಎಲಿಗಾರ), ಯಜಮಾನ ವೀರ ಸಂಗಪ್ಪನವರು (ಬಿ. ನಂ. ಚಂದ್ರಯ್ಯ), 'ಎಂ. ಎಸ್. ಸರದಾರರು' (ಚಂದ್ರಶೇಖರ ವಸ್ತ್ರದ), 'ಎಂ. ಪಿ. ಪಾಟೀಲರು' (ಆರ್. ಎಫ್. ಪಾಟೀಲ, ಡಿ. ಎನ್. ಹುಕ್ಕೇರಿ), 'ದೇಶಮುದ್ರೆ ಮಲ್ಲಪ್ಪನವರು' (ಹೀ. ಚಿ. ಶಾಂತವೀರಯ್ಯ), ಪಾವಟೆ ಸಿದ್ಧರಾಮಪ್ಪ ನವರು '(ಬಿ. ಸಿ. ಜವಳಿ),' 'ಅರಟಾಳ ರುದ್ರೆಗೌಡರು' '(ಎಸ್. ಎಂ. ಅಂಗಡಿ),'

'ಆರ್. ಎಸ್. ಪಾಟೀಲರು' (ವೀ. ಚ. ಹಿತ್ತಲಮನಿ). ಈ ಮಹನೀಯರಲ್ಲಿ ಮೊದಲನೆಯವರು ವ್ಯಾಕರಣ-ಸಾಹಿತ್ಯ ಕ್ಷೇತ್ರಗಳಲ್ಲಿ ದುಡಿದವರು. ಪಂಚಾಕ್ಷರಿ ಗವಾಯಿಯವರು ಪ್ರಸಿದ್ಧ ಸಂಗೀತಗಾರರು. ಅವರ ನಂತರದ ನಾಲ್ವರು ಮಠಾಧೀಶರಾಗಿ ಸೇವೆ ಸಲ್ಲಿಸಿದವರು. ಆನಂತರದಲ್ಲಿ ಹೆಸರಿಸಿದ ಒಂಭತ್ತು ಜನರು ಸಾರ್ವಜನಿಕವಾದ ಸಾಮಾಜಿಕ, ಶೈಕ್ಷಣಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಹೆಸರು ವಾಸಿಯಾದವರು.

ಹಳ್ಳಿಯಲ್ಲಿಯೇ ಹುಟ್ಟಿದರೂ ವಿದ್ಯಾಭ್ಯಾಸದ ಕಾರಣವಾಗಿ ಮೈಸೂರಿನಲ್ಲಿ ನೆಲೆಯಾಗಿ ಅರಮನೆಯ ಸಂಪರ್ಕ ಪಡೆದು ಮುಮ್ಮಡಿ ಕೃಷ್ಣರಾಜ ಒಡೆಯರ ಕೃಪೆಗೆ ಪಾತ್ರರಾಗಿ ಬೆಳಕಿಗೆ ಬಂದವರು ವ್ಯಾಕರಣದ ಮಲ್ಲಪ್ಪನವರು (ಕ್ರಿ. ಶ. 1835-1907). ಆಗಿನ ಕಾಲದಲ್ಲಿ ಇಂಗ್ಲಿಷ್ ಶಾಲೆಗಳಲ್ಲಿ ಕನ್ನಡಕ್ಕೆ ಸ್ಥಾನಮಾನ ದೊರಕಿಸಿ ಕೊಟ್ಟವರು. ಕನ್ನಡದ ವಿದ್ವತ್ತಿಗೆ ಆಧುನಿಕ ರೀತಿಯ ಭದ್ರ ಬುನಾದಿ ಹಾಕಿದ ರೈಸ್, ಕಿಟ್ಟೆಲ್ ಮುಂತಾದವರ ಪರಂಪರೆಯಲ್ಲಿ ಮುಂದುವರೆದ ದೇಶೀಯ ವಿದ್ವಾಂಸ ರಿವರು. ರಾಜಶೇಖರವಿಳಾಸ, ಕರ್ಣಾಟಕ ಕಾದಂಬರಿ ಕಾವ್ಯಗಳನ್ನು ಸಂಪಾದಿಸಿ ಸಂಪಾದನೆಯ ಕ್ಷೇತ್ರದಲ್ಲಿ ಪ್ರಸಿದ್ಧರಾದರು. ಶಬ್ದಮಣಿದರ್ಪಣದ ಸಂಪಾದನೆಯಲ್ಲಿ ಕಿಟ್ಟೆಲ್ಲರಿಗೆ ಸಹಾಯಮಾಡಿದರು. ಪ್ರಸಿದ್ಧರಾದ ಬಸವಪ್ಪಶಾಸ್ತ್ರಿ, ಸೋಸಲೆ ಅಯ್ಯಾಶಾಸ್ತ್ರಿ, ಕುಂಡಲಗಿರಿಯಾಚಾರ್ಯ, ಕಾನಕಾನಹಳ್ಳಿ ನಾರಾಯಣಶಾಸ್ತ್ರಿ ಮೊದ ಲಾದವರು ಮಲ್ಲಪ್ಪನವರ ಗರಡಿಯಲ್ಲಿ ತಯಾರಾದವರು. ಕನ್ನಡ ಭಾಷೆಗೆ ಮನ್ನಣೆ-ಪ್ರೋತ್ಸಾಹಗಳು ದೊರೆಯಲು 'ಕನ್ನಡ ಪಂಡಿತ' ಪರೀಕ್ಷೆಯನ್ನೂ 'ಕರ್ನಾಟಕ-ಭಾಷೋಜ್ಜೀವಿನೀ ಸಭೆ'ಯನ್ನೂ (1874) ಹುಟ್ಟು ಹಾಕಿದರು. ಅವರು ಬರೆದ ಕನ್ನಡ ವ್ಯಾಕರಣ 'ಶಬ್ದಾದರ್ಶ' ಇಂದಿಗೂ ಗಮನಿಸಲೇಬೇಕಾದ ವ್ಯಾಕರಣ ಗ್ರಂಥ ವೆನಿಸಿಕೊಂಡಿದೆ. ಹುಟ್ಟುಗುರುಡರಾದ ಪಂಚಾಕ್ಷರಿ ಗವಾಯಿಗಳು ಹಾನಗಲ್ ಶಿವಕುಮಾರಯೋಗಿಗಳ ಪ್ರೋತ್ಸಾಹದಿಂದಾಗಿ ಸಂಗೀತದ ಮೂಲಕ ಬೆಳಕಿಗೆ ಬಂದರು. ಉತ್ತರಾದಿ, ದಕ್ಷಿಣಾದಿ-ಎರಡೂ ಮಾರ್ಗಗಳಲ್ಲಿಯೂ ಪರಿಶ್ರಮವಿದ್ದರೂ ಕ್ರಮೇಣ ಉತ್ತರಾದಿಗೆ ಅಂಟಿಕೊಂಡರು. ಅನೇಕರಿಗೆ ಸಂಗೀತ ಶಿಕ್ಷಣ ಕೊಟ್ಟರು. ಬಸವರಾಜ ರಾಜಗುರು, ಜಂಬಲದಿನ್ನಿ, ಅರ್ಜುನಸಾ ನಾಕೋಡ, ಶೇಷಾದ್ರಿ ಗವಾಯಿ ಮುಂತಾದ ಸಂಗೀತಗಾರರು ಪಂಚಾಕ್ಷರಿ ಗವಾಯಿಯವರಿಂದ ಶಿಕ್ಷಣ ಪಡೆದವರಲ್ಲಿ ಕೆಲವರು. ಮಠಾಧೀಶರನ್ನು ಕುರಿತ ನಾಲ್ಕು ಪುಸ್ತಿಕೆಗಳಲ್ಲಿ ಆಯಾ ವ್ಯಕ್ತಿಗಳ ಸರಳ ಜೀವನ, ಸಾಮಾಜಿಕ-ಶಿಕ್ಷಣ ಕ್ಷೇತ್ರಗಳಲ್ಲಿ ಅವರು ಸಲ್ಲಿಸಿದ ಸೇವೆಗಳನ್ನು ವರ್ಣಿಸ ಲಾಗಿದೆ. ಹಾನಗಲ್ ಶಿವಕುಮಾರಯೋಗಿಗಳು ಶಿವಯೋಗಮಂದಿರ, ವೀರಶೈವ ಮಹಾಸಭೆಗಳ ಸ್ಥಾಪನೆಗೆ ಕಾರಣರಾದವರು. ವೀರಶೈವ ಸಂಘಟನೆಗೆ, ಅವರಲ್ಲಿಯ ಒಳಜಾತಿ ಭೇದಗಳ ನಿರ್ಮೂಲನಕ್ಕೆ ಶ್ರಮಿಸಿದವರು. ವಚನಗ್ರಂಥಗಳ ಪ್ರಕಟಣೆಗೆ ಸ್ಫೂರ್ತಿ, ಸಹಾಯಗಳನ್ನು ಸಲ್ಲಿಸಿದವರು. ಪಂಚಾಕ್ಷರಿ ಗವಾಯಿಗಳಂತಹ ಅನೇಕ ಪ್ರಸಿದ್ಧ ವ್ಯಕ್ತಿಗಳನ್ನು ಸಲಹಿ, ಬೆಳಕಿಗೆ ತಂದವರು. ಬಾಗೇವಾಡಿಯ ಬಳಿಯ

ಬಬಲೇಶ್ವರ ಮಠದ ಸ್ವಾಮಿಗಳಾದ ಶಾಂತವೀರ ಪಟ್ಟಾಧ್ಯಕ್ಷರು ಫ.ಗು. ಹಳಕಟ್ಟಿ ಯವರಂಥ ವಿದ್ವಾಂಸರಿಗೆ ವಚನಗ್ರಂಥಗಳ ಪ್ರಕಟಣೆಗೆ ಸಹಾಯ ಮಾಡಿದರು. ಮಹಾಂತ ಶಿವಯೋಗಿಗಳು ಮುಖ್ಯವಾಗಿ ಜನಾನುರಾಗಿಗಳು. ಅವರು ಪ್ರಸಿದ್ಧ ರಾಗುವಲ್ಲಿ ಅವರು ತೋರಿದ ಪವಾಡಗಳೂ ಕಾರಣವೆಂಬಂತೆ ವರ್ಣಿಸಿದೆ. ಬಂಥನಾಳ (ವಿಜಾಪುರ ಜಿಲ್ಲೆ)ದ ಶಿವಯೋಗಿಗಳು ಧಾರ್ಮಿಕ ಕ್ಷೇತ್ರದಲ್ಲಿ ಹೇಗೋ ಹಾಗೆ ಶೈಕ್ಷಣಿಕ-ಕ್ಷೇತ್ರಕ್ಕೂ ಕಾಲಿಟ್ಟವರು. ವಿಜಾಪುರ, ಮುದ್ದೇಬಿಹಾಳ, ಲಚ್ಯಾಣ ಮೊದಲಾದ ಊರುಗಳಲ್ಲಿ ಶಾಲೆ-ಕಾಲೇಜುಗಳನ್ನು ಸ್ಥಾಪಿಸಲು ಹೆಣಗಾಡಿದವರು. ಮಹಾದೇವಪ್ಪ ರಾಂಪುರೆ, ಎಂ. ಪಿ. ಪಾಟೀಲ ಇವರುಗಳು ರಾಜಕೀಯ ಧುರೀಣರು. ವೀರಶೈವರನ್ನು ವಿದ್ಯಾವಂತರನ್ನಾಗಿ ಮಾಡಲು ಹೆಣಗಿದವರು. ರಾಜಕೀಯ ಕ್ಷೇತ್ರದಲ್ಲಿ ತಮಗಿರುವ ಅವಕಾಶಗಳನ್ನು ಉಪಯೋಗಿಸಿಕೊಂಡು ಅನೇಕ ಶಿಕ್ಷಣಸಂಸ್ಥೆಗಳನ್ನು ಕಟ್ಟಿ ಬೆಳೆಸಿದರು. ಸೋಲಾಪುರ ಜಿಲ್ಲೆಯವರಾದ ರಾಂಪುರೆ ಆಗಿನ ಕಾಂಗ್ರೆಸ್ ಪಕ್ಷದಲ್ಲಿಯ ಜನಪ್ರಿಯ ಧುರೀಣರಲ್ಲೊಬ್ಬರು. ಕ್ರಿ. ಶ. 1958ರಲ್ಲಿ 'ಹೈದರಾಬಾದ್ ಕರ್ನಾಟಕ-ಶಿಕ್ಷಣ ಸಂಸ್ಥೆ'ಯನ್ನು ಸ್ಥಾಪಿಸಿ ಅದರ ಆಶ್ರಯದಲ್ಲಿ ಉತ್ತರ ಕರ್ನಾಟಕ ಪ್ರದೇಶದಲ್ಲಿ, ಮುಖ್ಯವಾಗಿ ಗುಲ್ಬರ್ಗ ಜಿಲ್ಲೆಯಲ್ಲಿ ಮೆಡಿಕಲ್, ಇಂಜಿನಿಯರಿಂಗ್, ಕಾನೂನು, ಸೈನ್ಸ್ ಇತ್ಯಾದಿಗಳನ್ನು ಕಲಿಸುವ ಅನೇಕ ಶಾಲೆ-ಕಾಲೇಜುಗಳನ್ನು ಪ್ರಾರಂಭಿಸಿದರು. ಗುಲ್ಬರ್ಗ ಒಂದು ಸ್ನಾತಕೋತ್ತರ ಕೇಂದ್ರವಾಗಲು ಪ್ರಯತ್ನಪಟ್ಟವರೂ ಇವರೇ. ಎಂ. ಪಿ. ಪಾಟೀಲರು ಮುಂಬೈ ಮತ್ತು ಕರ್ನಾಟಕ ಸರಕಾರದ ಮಂತ್ರಿಗಳಾಗಿ ಸೇವೆ ಸಲ್ಲಿಸಿದ್ದಲ್ಲದೇ ಒಕ್ಕಲುತನ ಕಾಲೇಜುಗಳನ್ನು ಸ್ಥಾಪಿಸುವುದರಲ್ಲಿ ಮಹತ್ವದ ಪಾತ್ರ ವಹಿಸಿದವರು. ಇದರ ಜೊತೆಗೆ ವೀರಶೈವ ವ್ಯಕ್ತಿ-ಸಾಹಿತ್ಯಗಳಿಗೆ ಸಂಬಂಧಿಸಿದಂತೆ ಅನೇಕ ಲೇಖನಗಳನ್ನು ಮರಾಠಿಯಲ್ಲಿ ಬರೆದಿದ್ದಾರೆ. ಅರಟಾಳ ರುದ್ರೇಗೌಡರು, ಆರ್. ಎಸ್. ಪಾಟೀಲರು, ಪಾವಟೆ ಸಿದ್ಧರಾಮಪ್ಪ-ಇವರು ಬೇರೆ ಬೇರೆ ವೃತ್ತಿ ಯಲ್ಲಿದ್ದು ಸಮಾಜಸೇವೆ ಸಲ್ಲಿಸಿದವರು. ರುದ್ರೇಗೌಡರು ಗುಮಾಸ್ತೆಯ ಹಂತದಿಂದ ಕ್ರಮೇಣ ಪ್ರಾಂತಸಾಹೇಬ, ಮ್ಯಾಜಿಸ್ಟ್ರೇಟ್ ಹಂತಕ್ಕೆ ಏರಿದವರು. ಸ್ವಚ್ಛ ಆಡಳಿತಕ್ಕೆ ಹೆಸರಾದವರು. ಧಾರವಾಡದಲ್ಲಿ ಕರ್ನಾಟಕ-ಕಾಲೇಜು, ಕೋ-ಆಪರೇಟಿವ್ ಬ್ಯಾಂಕ್ ಹಾಗೂ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆ-ಇವುಗಳ ಸ್ಥಾಪನೆಗಾಗಿ ಶ್ರಮಿಸಿದವರಲ್ಲಿ ಮುಖ್ಯರು. ಬೆಳಗಾವಿ ಜಿಲ್ಲೆಯವರಾದ ಪಾವಟೆ ಸಿದ್ಧರಾಮಪ್ಪನವರದು ವೃತ್ತಿ ಯಿಂದ ವಕೀಲಿ. ಆದರೆ ಇವರು ಹೆಸರುವಾಸಿಯಾದದ್ದು ಸಾಮಾಜಿಕ-ಧಾರ್ಮಿಕ ಕ್ಷೇತ್ರ ಗಳಲ್ಲಿ, ರುದ್ರೇಗೌಡರು ಹಾಗೂ ಸಿದ್ಧರಾಮಪ್ಪನವರು ವೀರಶೈವರಿಗಾಗಿ ಅನೇಕ ಸಂಸ್ಕೃತ ಪಾಠಶಾಲೆಗಳನ್ನು ತೆರೆಯುವ ವ್ಯವಸ್ಥೆ ಮಾಡಿದರು. ವೀರಶೈವ ಧರ್ಮ ಹಾಗೂ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಿದ್ಧರಾಮಪ್ಪನವರು ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ಧಾರವಾಡ ಜಿಲ್ಲೆಯ ಹಂಸಭಾವಿಯವರಾದ ಆರ್. ಎಸ್. ಪಾಟೀಲರು

ಕೃಷಿ ಅಧಿಕಾರಿಗಳಾಗಿ ಬಡೋದೆಯಲ್ಲಿದ್ದರೂ ಕರ್ನಾಟಕದ ಅನೇಕ ಕಡೆಗಳಲ್ಲಿ–ಹಂಸಭಾವಿ, ಭೋಗಾವಿ, ಮುದ್ದೇಬಿಹಾಳ ಮೊದಲಾದ ಊರುಗಳಲ್ಲಿ ಶಾಲೆ, ಕಾಲೇಜುಗಳನ್ನು, ವಿದ್ಯಾರ್ಥಿ (ನಿ) ನಿಲಯುಗಳನ್ನು ಸ್ಥಾಪಿಸಲು ಹೆಣಗಿದರು. ಗುಲ್ಬರ್ಗ ಜಿಲ್ಲೆಯ ಮೆಣಸಿನಕಾಯಿ ಶಾಂತವೀರಪ್ಪನವರು ರೆವೆನ್ಯೂ ಇಲಾಖೆಯಲ್ಲಿ ಡೆಪ್ಯೂಟಿ ಕಲೆಕ್ಟರ್ ಆಗಿ ದುಡಿದುದರ ಜೊತೆಗೆ ಧಾರವಾಡದ 'ಲಿಂಗಾಯುತ ಅಭಿವೃದ್ಧಿ ಸಂಸ್ಥೆ', 'ಸೆಂಟ್ರಲ್ ಬ್ಯಾಂಕ್', 'ವಿದ್ಯಾವರ್ಧಕ ಸಂಘ'ಗಳಿಗೂ ಸೇವೆ ಸಲ್ಲಿಸಿದವರು. ದೇವೀಹೊಸೂರಿನಲ್ಲಿ ಒಕ್ಕಲುತನ ಶಾಲೆ ಸ್ಥಾಪಿಸಿದವರು. ವೀರಶೈವ ಒಳಪಂಗಡಗಳ ಭೇದ ಅಳಿಸಲು ವೀರಶೈವ ಮಹಾಸಭೆಯ ಮೂಲಕ ಪ್ರಯತ್ನ ನಡೆಸಿದವರು. ಸೊಲ್ಲಾಪುರದವರಾದ ಎಂ. ಎಸ್. ಸರದಾರರು ಬ್ಯಾರಿಸ್ಟರ್ ಪದವಿ ಪಡೆದು ವಕೀಲಿ ವೃತ್ತಿಯನ್ನು ನಡೆಸುವದರೊಟ್ಟಿಗೆ ಸೊಲ್ಲಾಪುರದಲ್ಲಿ 'ಕರ್ನಾಟಕ ಏಕೀಕರಣ ಸಮಿತಿ' ಅನಾಥ ಮಹಿಳಾಶ್ರಮ, ಪ್ರಾಣಿಕ್ಲೇಶ ನಿವಾರಣಾ ಸಂಸ್ಥೆಗಳನ್ನೂ ಸ್ಥಾಪಿಸಿದರು. ವೀರಶೈವ ಬೆಟಾಲಿಯನ್ ಕಟ್ಟಿದರು. ಜೊತೆಗೆ ಸಾಹಿತ್ಯ-ಸಂಗೀತ, ಕಲೆಗಳಲ್ಲಿಯೂ ಆಸಕ್ತಿಯನ್ನು ಬೆಳೆಸಿಕೊಂಡಿದ್ದರು. ಯಜಮಾನ ವೀರಸಂಗಪ್ಪನವರು (ಕ್ರಿ. ಶ. 1834–99) ಮೈಸೂರಿನ ಅರಮನೆಯಲ್ಲಿ ವೀರಶೈವರಿಗೆ ಪ್ರಾತಿನಿಧ್ಯ ಸಿಗುವಂತೆ ಮಾಡಿದವರು. ವೀರಶೈವರು ಶೂದ್ರರಲ್ಲವೆಂತಲೂ ಅವರು 'ವೀರಶೈವ' ಬ್ರಾಹ್ಮಣರೆಂದೂ ಜನಗಣತಿಯ ಪಟ್ಟಿಯಲ್ಲಿ ದಾಖಲಿಸಲು ಪ್ರಯತ್ನಿಸಿದವರು. ವೀರಶೈವರಿಗಾಗಿ ಸಂಸ್ಕೃತ ಪಾಠಶಾಲೆಗಳನ್ನು ತೆರೆದರು. ವೀರಶೈವ ಧರ್ಮಗ್ರಂಥಗಳನ್ನು ಪ್ರಕಟಿಸಿದರು. 'ಮೈಸೂರ್ ಸ್ಟಾರ್' ಪತ್ರಿಕೆ ಹೊರಡಿಸಿ ಆ ಮೂಲಕ ಧರ್ಮ ಸಂಬಂಧಿ ಲೇಖನಗಳನ್ನು ಪ್ರಕಟಿಸಿದರು.

ಮೇಲೆ ಹೆಸರಿಸಿದ ವ್ಯಕ್ತಿಗಳಲ್ಲಿ ಹೆಚ್ಚಿನವರು ಬಡಕುಟುಂಬದಲ್ಲಿ ಜನಿಸಿದವರು. ಪ್ರತಿಭೆ-ಸ್ವಪ್ರಯತ್ನಗಳಿಂದ ಮೇಲೆ ಬಂದವರು. ಇಂತಹ ವ್ಯಕ್ತಿಗಳ ಜೀವನ ಚರಿತ್ರೆಯನ್ನು ಪ್ರಕಟಿಸಲು ಪ್ರಯತ್ನ ಮಾಡಿರುವುದು ಸ್ತುತ್ಯವಾದ ಕೆಲಸವೇ. ಆದರೆ ಈ ಕೃತಿಗಳೆಲ್ಲವೂ ಮಠವೊಂದರಿಂದ ಪ್ರಕಟಗೊಳ್ಳುತ್ತಿರುವುದರಿಂದ ಲೇಖಕರು ಹೇಳಬೇಕಾದ ವಿಷಯುಗಳಿಗೆ ಹಾಗೂ ಹೇಳಬೇಕಾದ ರೀತಿಗೆ ಅನೇಕ ಬಾರಿ ಪೂರ್ಣ ಸ್ವಾತಂತ್ರ್ಯ ಲಭಿಸುವುದು ಸಂದೇಹದ ಸಂಗತಿ. ಈ ಮಾಲಿಕೆಗಾಗಿ ಬರೆಯುವ ಲೇಖಕರೂ ಕೆಲವೊಮ್ಮೆ ನಿರ್ದಿಷ್ಟವಾದ ರೀತಿಯಲ್ಲಿ ಆಯ್ಕೆಗೊಳ್ಳಬಹುದು. ಶಾಂತವೀರ ಪಟ್ಟಾಧ್ಯಕ್ಷರು, ಅರಟಾಳ ರುದ್ರೇಗೌಡರು ಮುಂತಾದ ಕೆಲವು ಕೃತಿಗಳನ್ನು ಓದಿದಾಗ ಈ ರೀತಿ ಭಾಸವಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ಮಠಾಧೀಶರನ್ನು ಕುರಿತ ಪ್ರಕಟಣೆಗಳನ್ನು ಇಂದಿನ ಪರಿಸರದಲ್ಲಿ ಹೇಗೆ ಒಪ್ಪಿಕೊಳ್ಳಬೇಕೆಂಬ ಪ್ರಶ್ನೆ ನಿಲ್ಲುತ್ತದೆ.

—ಕೃಷ್ಣ ಪರಮೇಶ್ವರ ಭಟ್ಟ

# ಗ್ರಂಥ ಸಂಪಾದನೆ

ಎಸ್. ವಿದ್ಯಾಶಂಕರ

ಈ ವರ್ಷದ ಸಮೀಕ್ಷೆಗೆ ಬಂದ ಕೃತಿಗಳಲ್ಲಿ ಜೈನ 3, ಬ್ರಾಹ್ಮಣ 5 ಹೀಗೆ ಒಟ್ಟು 8 ಕೃತಿಗಳು. ಈ ವರ್ಷ ವೀರಶೈವ ಕವಿಗಳ ಕೃತಿಗಳು ನನ್ನ ಸಮೀಕ್ಷೆಗೆ ಬರಲಿಲ್ಲ. ಭೂಸರೆಡ್ಡಿಯವರ 'ಸತ್ಯಕ್ಕನ ವಚನಗಳು', 'ಪದ್ಮೈಕೋತ್ತರ ಶತಸ್ಥಲ;' ಉಮಾಪತಿಯವರ 'ಮೇದಾರ ಕೇತಯ್ಯನ ಸಾಂಗತ್ಯ' ; ಜಿ. ಎಸ್. ಕಾಪ್ಸೆಯವರ 'ಐದು ರಗಳೆಗಳು ; ಬಿ. ಸಿ. ಜವಳಿ ಹಾಗೂ ದೇವೇಂದ್ರಕುಮಾರ ಹಕಾರಿ ಅವರ 'ಕಾಯಕದ ಐದು ರಗಳೆಗಳು ; ಜಿ. ಎ. ಶಿವಲಿಂಗಯ್ಯನವರ ಗಂಗೇಶ ಅಂಕಿತದ 'ಸ್ವರ ವಚನಗಳು' ; ಭೋಯಿ ಅವರ 'ಹರಿಹರನ ಐದು ರಗಳೆಗಳು' ಈ ವರ್ಷ ಪ್ರಕಟವಾಗಿವೆ. ಆದರೆ ಅವು ನಮ್ಮ ಪರಿಶೀಲನೆಗೆ ದೊರೆಯಲಿಲ್ಲ. ಜೈನ ಕೃತಿಗಳಲ್ಲಿ ವೈ. ಸಿ. ಭಾನುಮತಿಯವರ 'ವಿಜಯಕುಮಾರಿ ಚರಿತೆ' ; ಬಿ. ಬಿ. ಮಹೀಶವಾಡಿಯವರ 'ಷೋಡಶಭಾವನಾ ಚರಿತೆ' ; ಹಂಪ. ನಾಗರಾಜಯ್ಯನವರ 'ಕರ್ಣಪಾರ್ಯನ ನೇಮಿನಾಥ ಪುರಾಣ ಸಂಪುಟ 1 ಮತ್ತು 2 ;' ಎ. ಆರ್. ನಾಗರಾಜ್‌ರವರ ರತ್ನಾಕರ ಶತಕ, ಅಪರಾಜಿತೇಶ್ವರ ಶತಕ-ಈ ಕೃತಿಗಳು ಪ್ರಕಟವಾಗಿದ್ದು ನಮ್ಮ ಪರಿಶೀಲನೆಗೆ ಸಿಗಲಿಲ್ಲ. ಬ್ರಾಹ್ಮಣ ಕವಿಯ ಕೃತಿಗಳಲ್ಲಿ ಎನ್. ಕೆ. ಹೆಗಡೆಯವರ 'ಕೌಸಲ್ಯಾವಿವಾಹ' ಪ್ರಕಟವಾಗಿದ್ದು ನಮ್ಮ ಅವಗಾಹನೆಗೆ ದೊರೆಯಲಿಲ್ಲ. ಸಮೀಕ್ಷೆಗೆ ಬಂದ ಕೃತಿಗಳಲ್ಲಿ ಐದನ್ನು ಮೈಸೂರು ವಿಶ್ವವಿದ್ಯಾನಿಲಯವೂ, ಮೂರನ್ನು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿವೆ. ಈ ವರ್ಷದ ಶ್ರೇಷ್ಠ ಸಂಪಾದಿತ ಕೃತಿ ಜಿ. ಜಿ. ಮಂಜುನಾಥನ್‌ರವರ ಗೋಪಕವಿಯ 'ನಂದಿಮಾಹಾತ್ಮ್ಯಂ'.

'ಚಂದ್ರಸಾಗರ ವರ್ಣಿಯ ಕೃತಿಗಳು' ಹಂಪ. ನಾಗರಾಜಯ್ಯ ಮತ್ತು ಎಸ್. ಶಿವಣ್ಣ ಇವರುಗಳಿಂದ ಸಂಪಾದಿತವಾಗಿದೆ. ಚಂದ್ರಸಾಗರವರ್ಣಿಯು 18ನೇ ಶತಮಾನದ ಉತ್ತರಾರ್ಧ ಹಾಗೂ 19ನೇ ಶತಮಾನದ ಪೂರ್ವಾರ್ಧದಲ್ಲಿದ್ದು. ವಸ್ತು ಹಾಗೂ ಛಂದೋವೈವಿಧ್ಯದಿಂದ ಕೂಡಿರುವ ಸು. 46ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಸಿದ್ಧನಿರುವನು. ಪ್ರಸ್ತುತ ಸಂಪಾದನೆಯಲ್ಲಿ ಚಂದ್ರಸಾಗರವರ್ಣಿಯ ಹದಿನೆಂಟು ಅಪ್ರಕಟಿತ ಲಘು ಕೃತಿಗಳನ್ನು ಹೊರತರಲಾಗಿದೆ. (ಇವನ ಉಳಿದ ಕೃತಿಗಳು ಈಗಾಗಲೇ ಬೆಳಕು ಕಂಡಿವೆ. ಜಿನಮುನಿ,

ವಿಕ್ರಮಂಧರ ಕಾವ್ಯ, ಜಿನರಾಮಾಯಣ, ಜಿನಭಾರತ-ಈ ನಾಲ್ಕು ದೊಡ್ಡ ಕಾವ್ಯ ಗಳನ್ನು ಬಿಟ್ಟರೆ ಉಳಿದ ಕಾವ್ಯಗಳು ಹಾಗೂ ಯಕ್ಷಗಾನಗಳು ಗಾತ್ರದಲ್ಲಿ ಚಿಕ್ಕವು). ಪೀಠಿಕೆಯಲ್ಲಿ ಮೊದಲಿಗೆ ಚಂದ್ರಸಾಗರವರ್ಣಿ ಹಾಗೂ ಬ್ರಹ್ಮಣಾಂಕಕವಿ ಅಭಿನ್ನ ರೆಂದು ಪ್ರತಿಪಾದಿಸಲಾಗಿದೆ. ಕವಿ-ಕೃತಿ ವಿಚಾರಗಳು ವಸ್ತು ನಿಷ್ಠವಾಗಿ ಚರ್ಚಿತ ವಾಗಿವೆ. "ಶುದ್ಧ ಸಾಹಿತ್ಯ ಕೃತಿಗಳಾಗಿ ಚಂದ್ರ ಸಾಗರ ವರ್ಣಿಯಕಾವ್ಯಗಳ ಮೌಲ್ಯ ಮಾಪನಕ್ಕೆ ತೊಡಗಿದಾಗ ಆತ, ಪಂಪ ರನ್ನಾದಿಗಳ ಮಾತಂತಿರಲಿ. ತಾನು ಗುರುವೆಂದು. ಆದರ್ಶವಾಗಿರಿಸಿಕೊಂಡಿರುವ ಮಂಗರಸನ ಮಟ್ಟಕ್ಕೂ ಬರುವುದಿಲ್ಲ...". (ಪು. xvi) ಚಂದ್ರಸಾಗರವರ್ಣಿಗೆ ಮಂಗರಸನ ಸಿದ್ಧತೆ ಅಭ್ಯಾಸ ಇಲ್ಲ....ಈ ಕವಿಯ ಬಹು ಮುಖ್ಯವಾದ ಕೊರತೆಯೆಂದರೆ ಒಂದು ಕ್ರಮಬದ್ಧವಾದ ಶಿಕ್ಷಣದ ಅಭಾವ. ಇದರಿಂದಾಗಿ ಚಂದ್ರಸಾಗರವರ್ಣಿಯ ಕಾವ್ಯಶಕ್ತಿ. ರಚನೆ ಅಸ್ತವಸ್ತವಾಗಿದೆ..." (ಪು. xvii) "...ಚಂದ್ರಸಾಗರವರ್ಣಿಯ ಕಾವ್ಯಗಳ ವಿಷಯದ ಪರವು ಚೆನ್ನಾಗಿದೆ. ನಾನಾ ವಿಷಯಗಳನ್ನು ಸಂಕಲನ ಮಾಡಿದ್ದಾನೆ. ಆದರೆ ಇದರಲ್ಲಿಯೂ ಒಂದು ವ್ಯವಸ್ಥಿತವಾದ ಸಂಯೋಜನೆ ಸಾಲದು. ಆರಿಸಿಕೊಂಡ ವಸ್ತುವಿನ ಮೇಲೆ ಪ್ರಭುತ್ವ ವಿಲ್ಲ. ಕಾವ್ಯದ ಇತಿಮಿತಿಗೆ ಒಂದು ನಿರ್ದಿಷ್ಟವಾದ ರೂಪರೇಖೆ ಹಾಕಿಕೊಳ್ಳುವುದಿಲ್ಲ. ಕಾವ್ಯವರ್ತುಲದಲ್ಲಿ ಅಳವಡದ ವಿವರಗಳನ್ನು ಬಲವಂತ ಮಾಘಸ್ನಾನ ಮಾಡಿಸು ತ್ತಾನೆ. ಕಾವ್ಯದ ಓಟ ಅಡ್ಡಾದಿಡ್ಡಿಯಾಗಿ ಗೊತ್ತುಗುರಿಯಿಲ್ಲದೆ ಖಚಿತತೆಯಿಲ್ಲದೆ ಸಾಗುತ್ತದೆ. ಫಲವಾಗಿ ಕನ್ನಡ ಸಾಹಿತ್ಯಕ್ಕೆ ಚಂದ್ರಸಾಗರವರ್ಣಿ ಕೊಟ್ಟ ಕಾಣಿಕೆ ತೀರ ಸಾಮಾನ್ಯವಾದುದೆನ್ನುವಂತಾಗಿದೆ...ಅವನ ಕಾವ್ಯಗಳಲ್ಲೇ ಪುನರುಕ್ತಿಗಳಿವೆ. ಪೂರ್ವೋಕ್ತ ಹೇಳಿಕೆಗಳೂ ಹೇರಳವಾಗಿವೆ. ಉತ್ತಮ ಹಳಗನ್ನಡ ಕಾವ್ಯಗಳನ್ನು ಮೆಲಕು ಹಾಕಿದ ಮನಸ್ಸನ್ನು ಇವನ ಕಾವ್ಯಗಳು ಸ್ವಲ್ಪವೂ ಸೂರೆಗೊಳ್ಳುವುದಿಲ್ಲ. ವಿಪುಲವಾದ ವೈವಿಧ್ಯಮಯವಾದ ಕಾವ್ಯವಸ್ತು ಕಂಡುಬಂದರೂ ಅದರ ಮೇಲೆ ಕವಿಗಿರುವ ಹತೋಟಿ ಸಾಲದು. ಕವಿಯ ಸ್ಫೂರ್ತಿ ಸಾಮಾನ್ಯ ಅರಿವಿನಿಂದಾಚೆಗೆ ಹಾಯುವುದಿಲ್ಲ." (ಪು. xviii) "...ಚಂದ್ರಸಾಗರವರ್ಣಿ ಭಾಷೆಯನ್ನು ಭಾವಾಭಿ ನಯಕ್ಕೆ ಸಮರ್ಥವಾಗಿ ದುಡಿಸಿಕೊಳ್ಳುವುದಿಲ್ಲ. ಎಲ್ಲೋ ಕೆಲವು ಕಡೆ ಮಾತ್ರ ಕಣ್ಣಿಗೆ ಕಟ್ಟಿದ ಹಾಗೆ ಕವನಿಸುತ್ತಾನೆ. ಪರಂಪರೆಯ ನೊಗ ಏರಿಸಿಕೊಂಡು ಯುಗ ಧರ್ಮದೊಂದಿಗೆ ಈಸಿದ್ದನಾದರೂ ದಡ ಕಾಣುವುದು ತಡ. ಬರೆಯಬೇಕೆಂಬ ತೀವ್ರ ಉತ್ಸಾಹವಿದೆ. ಲೇಖನೋದ್ಯಮದ ರಭಸ ಉದ್ದಕ್ಕೂ ಕಾವ್ಯಗಳಲ್ಲಿ ಕಾಣುತ್ತದೆ. ಆದರೆ ಬರಹಗಾರನಿಗೆ ಅದರಲ್ಲೂ ಕಾವ್ಯರಚನೆಗೆ ಬೇಕಾದ ಬಂಡವಾಳ ಕಡಿಮೆ. ಭಾಷೆ-ಭಾವಗಳ ಹಿತವಾದ ಅಪ್ಪುಗೆಯಿಲ್ಲ. ಅವನಲ್ಲಿರುವ ಸರಕು ಸಾಲದು. ಅಲ್ಪ ಬಂಡವಾಳವನ್ನೇ ಮಹೋದ್ಯಮಕ್ಕೆ ಹೂಡಿದರೂ ಅದನ್ನು ಸರಿದೂಗಿಸಿಕೊಂಡು ಹೋಗುವ ನೈಪುಣ್ಯ ಕಿರಿದು..." (ಪು. xxiii)—ಹೀಗೆ ಸಮತೂಕದ ಸೂತ್ರಪ್ರಾಯ ವಾದ ಅಭಿಪ್ರಾಯಗಳು ಕಂಡುಬರುತ್ತವೆ. ಚಂದ್ರಸಾಗರವರ್ಣಿಯಲ್ಲಿ ಮೆಚ್ಚಬೇಕಾದ

ಅಂಶಗಳನ್ನೂ ಸಂಪಾದಕರು ಗುರುತಿಸಿರುವರು : ಕವಿಗಿರುವ ಛಂದಸ್ಸಿನ ಮೇಲಿನ ಪ್ರಭುತ್ವ (ವಾರ್ಧಕ-ಭಾಮಿನೀ ಷಟ್ಪದಿಗಳಲ್ಲೂ, ಸಾಂಗತ್ಯ-ಕಂದಗಳಲ್ಲಿ) ; ಗದ್ಯದಲ್ಲಿ ಓತಪ್ರೋತವಾಗಿ ಬರೆಯಬಲ್ಲ ಶಕ್ತಿ; ಯಕ್ಷಗಾನ ರಚನೆಯಲ್ಲಿ ತ್ರಿಪುಡೆ, ಲಾಲೀಪದ, ಸೀಸಪದ್ಯ, ಯಾಲ ಪದ್ಯ, ಜಂಪೆಪದ್ಯ, ಅರ್ಧಚಂದ್ರಿಕೆ, ದ್ವಿಪದಿ ಏಕತಾಳ-ಇವೆಲ್ಲವನ್ನೂ ಬಳಸಿರುವುದು; ವೃತ್ತವಿಲಾಸನ ಚಂಪೂಕಾವ್ಯ ಧರ್ಮಪರೀಕ್ಷೆಗೆ ವ್ಯಾಖ್ಯಾನ ಬರೆದಿರುವುದು.

ಸಂಪಾದಕರು ಚಂದ್ರಸಾಗರವರ್ಣಿಯ ಜಿನಭಾರತ, ಜಿನಮುನಿಕಾವ್ಯ, ವಿಕ್ರಮಂಧರ ಕಾವ್ಯ, ಜಿನರಾಮಾಯಣ, ಬಿಜ್ಜಳರಾಯ ಪುರಾಣ-ಈ ಪ್ರಮುಖ ಕೃತಿಗಳ ಬಗೆಗೆ ವಿವರಗಳನ್ನು ಸಂಕ್ಷಿಪ್ತವಾಗಿ ನೀಡಿರುವರು. ಬಿಜ್ಜಳರಾಯ ಪುರಾಣದಲ್ಲಿ ಕವಿಯು ಇತಿಹಾಸಕ್ಕೆ ಮಾಡಿರುವ ಅಪಚಾರವನ್ನು ವಿವೇಚಿಸಿದರು. ಪ್ರಸ್ತುತ ಸಂಪಾದಿತ ಕೃತಿಗಳ ಬಗೆಗೆ ಪರಿಚಯಾತ್ಮಕವಾದ ಮಾತುಗಳನ್ನು ಪೀಠಿಕೆಯ ಕೊನೆಯಲ್ಲಿ ಕೊಟ್ಟಿರುವರು. ಕೃತಿಸಂಪಾದನೆಯ ಬಗೆಗೆ ಒಂದು ಮಾತು. ಇಲ್ಲಿರುವ ಎಲ್ಲ ಕೃತಿಗಳು ಏಕೈಕ ಹಸ್ತಪ್ರತಿಗಳನ್ನು ಆಧರಿಸಿ ಸಂಪಾದನೆಗೊಂಡಿವೆ. ಎಷ್ಟೋ ಕಡೆ ಪದ್ಯ ಅರ್ಥವಾಗುವುದಿಲ್ಲ. ಉದಾ : "ಮೆಂತ್ರನಾವನವನೆ ಬಹಳ ತಂತ್ರವಂತ ರಾಜಕೇತ ನಂತರವನು..." (ಪು. 21, ಪ. 102) ; "ಕೇಳಿ ಅದನು ಆತನಂಗ ಬಾಲೆ ನೀನು..." (ಪು. 35, ಪ. 54). ಬಹುಶಃ ಇದಕ್ಕೆ ಕಾರಣ, ನಡುಗನ್ನಡದ ಆಡುಮಾತಿನ ಶೈಲಿಯನ್ನು ಬಳಸಿರುವುದು, ಛಂದಸ್ಸಿನ ಸೌಕರ್ಯಕ್ಕಾಗಿ ಪದಗಳನ್ನು ಹಿಗ್ಗಾಮುಗ್ಗಾ ತಿರುಚಿರುವುದು, ದೀರ್ಘೀಕರಿಸಿರುವುದು. ಮಾನುನೀಯ್ಯ (ಮಾನಿನಿಯ), ನುಡಿಯ್ಯ (ನುಡಿಯ), ಚಲ್ವಿಕೇಯು, (ಚಲ್ವಿಕೇಯು, ಕೂಚಾಷ್ಟೆ (ಕುಚೇಷ್ಟೆ) ಇತ್ಯಾದಿ. 'ಹಿಡಿಯ ಬ್ಯಾರಿರೆನುತಲೆಮ್ಮ' (ಪು. 23, ಪ. 113) ಎಂಬುದು 'ಹಿಡಿಯಬ್ಯಾಡಿರೆನುತಲೆಮ್ಮ' ಎಂದಿರಬೇಕಿತ್ತು. ಕೊನೆಯಲ್ಲಿ ಅರ್ಥಕೋಶ. ಪಾರಿಭಾಷಿಕಕೋಶ ಬರಬೇಕಾಗಿತ್ತು.

ಒಟ್ಟಿನಲ್ಲಿ, 'ಚಂದ್ರಸಾಗರವರ್ಣಿಯ ಕೃತಿಗಳು' ಕವಿಯ ಅಪ್ರಕಟಿತ ಕೃತಿಗಳನ್ನು ಬೆಳಕು ಕಾಣಿಸುವಲ್ಲಿ ಸಾರ್ಥಕ ಪ್ರಯತ್ನವಾಗಿದೆ.

ಚಿಕ್ಕುಪದ್ಮಣ್ಣಸೆಟ್ಟಿಯ (1581) 'ಅನಂತನಾಥ ಚರಿತೆ'ಯನ್ನು ವೈ. ಸಿ. ಭಾನುಮತಿಯವರು ಎರಡು ಹಸ್ತಪ್ರತಿಗಳ ನೆರವಿನಿಂದ ಸಂಪಾದಿಸಿರುವರು. ಸಂಪಾದನೆಗೆ ದೊರೆತ ಎರಡೂ ಹಸ್ತಪ್ರತಿಗಳು ಅಸಮಗ್ರವಾಗಿರುವುದರಿಂದ ಪಾಠಾಂತರ ಸಮಸ್ಯೆಗಳ ನಿವಾರಣೆಗೆ ಜನ್ನನ ಅನಂತನಾಥ ಪುರಾಣವನ್ನು ಅನುಸರಿಸಿರುವುದಾಗಿ ಸಂಪಾದಕಿ ಹೇಳಿರುವರು. ಜನ್ನನನ್ನು ಯಥಾವತ್ತು ಅನುಸರಿಸಿರುವುದು ಮೊದಲ ನೋಟಕ್ಕೆ ಕಂಡುಬರುತ್ತದೆಂದು ಹೇಳುವ ಸಂಪಾದಕಿ ಎರಡೂ ಕೃತಿಗಳ ತೌಲನಿಕ ಅಧ್ಯಯನದ ಮೂಲಕ ತಮ್ಮ ಅಭಿಪ್ರಾಯವನ್ನು ಪ್ರಸ್ತಾವನೆಯಲ್ಲಿ ಸಮರ್ಥಿಸಿರುವರು (ಪು. 34–37). ಜನ್ನನು ಚಂಪೂವಿನಲ್ಲಿ ಹೇಳಿದ ಅನಂತನಾಥನ ಕಥೆಯನ್ನು

ಚಿಕ್ಕಪದ್ಮಣ್ಣಸೆಟ್ಟಿ ಸಾಂಗತ್ಯದಲ್ಲಿ ಹೇಳುತ್ತಿರುವನು. "ಮೂಲದ ಅತಿಯಾದ ನಿಷ್ಠೆಯಿಂದಾಗಿ ಚಿಕ್ಕಪದ್ಮಣ್ಣನಲ್ಲಿ ಹೆಚ್ಚಿನ ಸಾಧನೆ ಕಂಡುಬರುವುದಿಲ್ಲ. ಯುಗಧರ್ಮದ ಹೊಳಪೂ ಸಹ ಈತನಲ್ಲಿ ಕ್ವಚಿತ್ತಾಗಿ ಕಂಡುಬರುತ್ತದೆ. ಜನ್ನನ ಮನೋಧರ್ಮ ಅನಂತನಾಥ ಚರಿತೆಯಲ್ಲಿ ಹೆಚ್ಚಾಗಿ ಬಿಂಬಿತವಾಗಿದೆ" ಎಂಬ ಸಂಪಾದಕಿಯವರ ಮಾತು ಸತ್ಯವೆನ್ನಿಸುತ್ತದೆ. ಕೃತಿಯ ಅವಲೋಕನದ ನಂತರ ಪಾಠಗಳು ತೃಪ್ತಿಕರವಾಗಿವೆ. ಕೃತಿಯ ಕೊನೆಯ ಅನುಬಂಧದಲ್ಲಿ ಅನಂತನಾಥ ಅಷ್ಟಕವನ್ನೂ, ಅನಂತ ತೀರ್ಥಂಕರರ ಪೂಜೆ ಹಾಗೂ ಅನಂತ ದಾರದ ಪ್ರಾಣಪ್ರತಿಷ್ಠೆಯ ಕ್ರಮವನ್ನೂ ಕೊಡಲಾಗಿದೆ. ಅರ್ಥಕೋಶ ಹಾಗೂ ಪಾರಿಭಾಷಿಕ ಪದಕೋಶಗಳು ಕೃತಿಯನ್ನು ಗ್ರಹಿಸಲು ಸಹಾಯಕವಾಗಿವೆ.

ಕುಮುದೇಂದು ಕವಿಯ 'ಕುಮುದೇಂದು ರಾಮಾಯಣ'ವನ್ನು ಪಿ. ವಿ. ನಾರಾಯಣರವರು ಸಂಪಾದಿಸಿರುವರು. ಹಿಂದೆ ಪ್ರೊ. ಕುಂದಣಗಾರರು ಕುಮುದೇಂದು ರಾಮಾಯಣದ ಸ್ವಲ್ಪ ಭಾಗವನ್ನು ಸಂಪಾದಿಸಿ ಪ್ರಕಟಿಸಿದ್ದರು (ಪೂರ್ವಭಾಗ–1936). ಕುಮುದೇಂದುವು ಜೈನ ರಾಮಾಯಣವನ್ನು ಬರೆಯ ಹೊರಟಾಗ, ಅಭಿನವ ಪಂಪನ ರಾಮಚಂದ್ರಚರಿತ ಪುರಾಣವನ್ನು ಅನುಸರಿಸಿದಂತಿದೆ. ಜೈನ ಪರಂಪರೆಯ ರಾಮಾಯಣಗಳಲ್ಲಿ ರಾವಣವಧಾನಂತರ ರಾಮಚಂದ್ರನು ಅಯೋಧ್ಯೆಗೆ ಹಿಂತಿರುಗಿ ಬಂದು ರಾಜ್ಯಭಾರವನ್ನು ವಹಿಸಿಕೊಳ್ಳುವನು, ಮುಂದೆ. ಸೀತಾ ಪರಿತ್ಯಾಗ, ರಾಮಪರಿನಿರ್ವಾಣ ಹಾಗೂ ರಾಮಕೇವಲಿಗೆ ಮೋಕ್ಷಸಂಪಾದನೆ-ಇವೆಲ್ಲವುಗಳ ಕಥಾಸರಣಿ ಬರುತ್ತದೆ. ಆದರೆ ಕುಮುದೇಂದುವಿನಲ್ಲಿ ರಾಮಪಟ್ಟಾಭಿಷೇಕದ ವರೆಗಿನ ಕಥೆಯು ಮಾತ್ರ ಬರುತ್ತದೆ. ಪ್ರೊ. ಕುಂದಣಗಾರರು ಇದಕ್ಕೆ ಕಾರಣ, ಕವಿಯು ಕಾವ್ಯವನ್ನು ಪೂರ್ಣಮಾಡುವ ಮುನ್ನವೇ ಗತಿಸಿರಬೇಕು ಎಂದು ಅಭಿಪ್ರಾಯ ಪಡುವರು. ಕುಮುದೇಂದುವಿಗೆ ನಾಗಚಂದ್ರನೇ ಸ್ಫೂರ್ತಿಯ ನೆಲೆ ಎಂಬುದನ್ನು ಇಬ್ಬರ ಕೃತಿಗಳ ತೌಲನಿಕ ಅಧ್ಯಯನದ ಮೂಲಕ ಸಂಪಾದಕರು ವಿವರಿಸಿರುವರು (ಪು. 11–19). ಕುಮುದೇಂದುವಿನಲ್ಲಿ ಸ್ವಂತ ಕಾವ್ಯಶಕ್ತಿಯಿಲ್ಲವೆ? ಈ ಪ್ರಶ್ನೆಗೆ "ಅವನ ಶೈಲಿ ಲಲಿತವಾಗಿದ, ನಿರರ್ಗಳವಾಗಿ ಬರೆಯಬಲ್ಲ ಸಾಮರ್ಥ್ಯವವನಿಗಿದೆ. ಆದರೆ ಅವನು ವರ್ಣನಾಪ್ರಿಯನಾದ್ದರಿಂದ, ಸಾಂಪ್ರದಾಯಿಕ ವರ್ಣನೆಗಳಲ್ಲಿ ಕೈಹಾಕಿ, ಸಿಕ್ಕಿದ ಸನ್ನಿವೇಶಗಳಲ್ಲಿ ದೀರ್ಘವರ್ಣನೆಗಳನ್ನು ಮಾಡಿ ಕಾವ್ಯದ ಇನ್ನುಳಿದ ಅಂಶಗಳ ಕಡೆ ಹೆಚ್ಚು ಗಮನ ಹರಿಸಿಲ್ಲವೆಂದು ಹೇಳಬಹುದು. ಹಾಡುಗಬ್ಬವಾದ ಈ ಕಾವ್ಯದ ಛಂದೋವೈವಿಧ್ಯದ ಕಡೆಗೆ ಪ್ರಾಯೋಗಿಕತೆಯ ಕಡೆಗೆ ಗಮನ ಹರಿಸಿದಷ್ಟು ಕಾವ್ಯಪೂರಣದ ಕಡೆ ಕವಿಯ ಗಮನ ಹರಿದಿಲ್ಲವೆನಿಸುತ್ತದೆ." ಎಂದು ಸಂಪಾದಕರು ಅಭಿಪ್ರಾಯಪಡುವರು. (ಪು. 19)

ಕುಮುದೇಂದುವಿನ ಕೃತಿಯ ವೈಶಿಷ್ಟ್ಯಗಳಲ್ಲಿ ಅವನ ಛಂದೋವೈವಿಧ್ಯವೂ ಒಂದು. ತನ್ನ ಕೃತಿಯಲ್ಲಿ ಅವನು ಷಟ್ಪದಿಗಳನ್ನಲ್ಲದೆ ಮೂರು ಬಗೆಯ ರಗಳೆಯ ಪ್ರಭೇದಗಳನ್ನು ಲಯೋತ್ತರವನ್ನೂ ಬಳಸಿರುವನು. ಅವನು ಪರಿವರ್ಧಿನಿಯನ್ನು ಮೊದಲಿಗೆ ಬಳಸಿರುವನು. ರಾಘವಾಂಕನ ನಂತರ ಷಟ್ಪದಿಯಲ್ಲಿ ವಿಸ್ತಾರವಾದ ಕಾವ್ಯವನ್ನು ಬರೆದವನು ಬಹುಶಃ ಕುಮುದೇಂದುವೆಂದು ಹೇಳಬಹುದು. ಅವನು ವೈವಿಧ್ಯಕ್ಕಾಗಿ ವಿವಿಧ ಷಟ್ಪದಿಗಳನ್ನು ಬೇರೆ ಬೇರೆ ಸಂಧಿಗಳಲ್ಲಿ ಬಳಸಿರುವನು. ಇನ್ನೊಂದು ವಿಶೇಷವೆಂದರೆ, ಅವನ ಕೃತಿಯ ಪ್ರತಿಯೊಂದು ಸಂಧಿಯ ಆರಂಭ ದಲ್ಲಿಯೂ ರಾಗದ ಉಲ್ಲೇಖ ಕಾಣಬರುತ್ತದೆ. ಎಲ್ಲ ಹಸ್ತಪ್ರತಿಗಳಲ್ಲೂ ರಾಗದ ಹೆಸರು ಒಂದೇ ಆಗಿರುವುದನ್ನು ನೋಡಿದರೆ ಮೂಲದಲ್ಲಿಯೇ ಈ ರಾಗಗಳ ನಿರ್ದೇಶನವನ್ನು ಮಾಡಿರಬಹುದು. ಕುಮುದೇಂದುವಿನ ಷಟ್ಪದಿಯ ಬಳಕೆಯಲ್ಲಿನ ವಿಶೇಷತೆಯನ್ನು ಸಂಪಾದಕರು ಹೀಗೆ ಗುರುತಿಸುವರು : "ಕವಿಯು ಯಾವುದೇ ಷಟ್ಪದಿಯ 1, 2, 3, 4, 5ನೆಯ ಸಾಲುಗಳಲ್ಲಿ ಮಾರ್ಪಾಟನ್ನು ತರುವುದಿಲ್ಲ. ಆರನೆಯ ಸಾಲುಗಳಲ್ಲಿ ಮಾತ್ರ ಹೆಚ್ಚು ಮಾತ್ರೆಗಳನ್ನು ತರುವುದನ್ನು ಕಾಣಬಹುದು. ಈ ದೀರ್ಘತೆಯು ಎರಡು ಮಾತ್ರೆಗಳಿಂದ ಹಿಡಿದು ಆರನೆಯ ಸಾಲು 1, 2, 4, 5ನೆಯ ಸಾಲುಗಳ ಎರಡರಷ್ಟಾಗುವವರೆಗೂ ಹರಡುತ್ತದೆ. ಆರನೆಯ ಸಾಲಿನಲ್ಲಿ ಈ ವ್ಯತ್ಯಾಸವನ್ನು ಮಾಡಿಕೊಳ್ಳುವ ಕಾರಣವೆಂದರೆ ಹಾಡುವಾಗ ಕೊನೆಯ ಸಾಲನ್ನು ಎಳೆಯಬಹುದಾದ ಸಂಭಾವ್ಯತೆ...ಒಟ್ಟಾರೆ ಕವಿಯು ಹಾಡುವ ದೃಷ್ಟಿಯಿಂದಲೇ ಷಟ್ಪದಿಗಳ ಆರನೆಯ ಸಾಲನ್ನು ವ್ಯತ್ಯಾಸಮಾಡಿದ್ದಾನೆ ಎಂದಂತಾಯಿತು. ಇದರಿಂದ ಪರಿವರ್ಧಿನಿ ಷಟ್ಪದಿಗಳು ಲಕ್ಷಣಯುಕ್ತವಾಗಿಲ್ಲದ ಬಗ್ಗೆ ವಿದ್ವಾಂಸರು ಮಾಡಿದ ವಾದವಿವಾದಗಳಿಗೆ ಕೊನೆಯುಂಟಾಗುತ್ತದೆ. ಕೃತಿಕಾರನ ಅಜ್ಞಾನವಾಗಲೀ, ಪ್ರತಿ ಕಾರನ ಕೈತಪ್ಪುಗಳಾಗಲೀ ಈ ವ್ಯತ್ಯಾಸಗಳಿಗೆ ಕಾರಣವಲ್ಲ ಎಂಬ ಅಂಶವು ದೃಢ ವಾಗುತ್ತದೆ." (ಪು. 31).

ಕುಮುದೇಂದು ರಾಮಾಯಣವನ್ನು ಮುಖ್ಯವಾಗಿ ಮೂರು ಹಸ್ತಪ್ರತಿಗಳ ನೆರವಿನಿಂದ ಪರಿಷ್ಕರಿಸಲಾಗಿದೆ. "...ಛಂದಸ್ಸಿನ ದೃಷ್ಟಿಯಿಂದ, ಜೈನರಾಮಾಯಣ ಪರಂಪರೆಯ ದೃಷ್ಟಿಯಿಂದ ತುಂಬ ಮಹತ್ವದ್ದಾದ ಈ ಕೃತಿಯನ್ನು ಸಂಪಾದಿಸ ಬೇಕೆಂಬ ಹುಮ್ಮಸ್ಸು ಈ ಪರಿಷ್ಕರಣಕ್ಕೆ ಕಾರಣ" ಎಂದು ಸಂಪಾದಕರು ಹೇಳುವರು (ಪು. 34) ಸಂಪಾದಕರ ಉತ್ಸಾಹ ಮೆಚ್ಚುವಂತಹದು. ಮೂಲಕೃತಿಯನ್ನು ಪೂರ್ಣ ರೂಪದಲ್ಲಿ ಮೊದಲಿಗೆ ಹೊರತಂದ ಕೀರ್ತಿ ಸಂಪಾದಕರಿಗೆ ಸೇರಿದೆ.

ಪಿ. ವಿ. ನಾರಾಯಣ ಅವರಿಂದ ಸಂಪಾದಿತವಾಗಿರುವ ಇನ್ನೊಂದು ಕೃತಿ ಚೆನ್ನಯ್ಯನ 'ಪದ್ಮಿನೀ ಪರಿಣಯ'. ಹದಿನೆಂಟನೆಯ ಶತಮಾನದ ಆದಿಭಾಗದಲ್ಲಿ ರಚಿತವಾದ ಈ ಸಾಂಗತ್ಯ ಕಾವ್ಯವು ವೆಂಕಟೇಶ್ವರ-ಪದ್ಮಾವತಿಯರ ಪರಿಣಯದ

ಕಥೆಯನ್ನು ಮೂರು ಆಶ್ವಾಸ, ಹದಿನೆಂಟು ಸಂಧಿ, 2506 ಸಾಂಗತ್ಯ ಪದ್ಯಗಳಲ್ಲಿ ಹೇಳಿರುವನು. ಪ್ರತಿ ಆಶ್ವಾಸಾಂತ್ಯವು ವಾರ್ಧಕ ಷಟ್ಪದಿಯನ್ನು ಒಳಗೊಂಡಿದೆ. ಅದರಲ್ಲಿ ಅಶ್ವಾಸ, ಸಂಧಿ ಹಾಗೂ ಪದ್ಯಗಳ ಸಂಖ್ಯೆಯನ್ನು ಕೊಡಲಾಗಿದೆ. ಆಯಾ ಆಶ್ವಾಸ ಗಳಲ್ಲಿ ವರ್ಣಿತವಾದ ವಿಷಯಗಳ ನಿರೂಪಣೆಯಿದೆ. ಈ ಕಥೆಯು ವರಾಹ ಪುರಾಣೋಕ್ತವೆಂದು ಕವಿ ಕೃತಿಯ ಆದಿ, ಅಂತ್ಯಭಾಗಗಳಲ್ಲಿ (1.1.54 ; 3.4.295) ಹೇಳಿರುವನು. "ಆದರೆ ಉಪಲಬ್ಧವಿರುವ ವರಾಹಪುರಾಣದಲ್ಲಿ ಈ ಕಥೆಯು ಕಂಡು ಬರುವುದಿಲ್ಲ. ಆದರೆ ಸ್ಕಾಂದ ಪುರಾಣದ 'ವೆಂಕಟಾಚಲ ಮಾಹಾತ್ಮ್ಯ'ವೆಂಬ ಭಾಗದಲ್ಲಿ ಪದ್ಮಾವತಿ-ವೆಂಕಟೇಶ್ವರರ ವಿವಾಹದ ಕಥೆಯು ಸಾಕಷ್ಟು ವಿಸ್ತಾರವಾಗಿ ಬಂದಿದೆ. ಈ ಕಥೆಗೂ ಪ್ರಸ್ತುತ ಕಾವ್ಯದಲ್ಲಿ ಬಂದಿರುವ ಕಥೆಗೂ ತುಂಬ ಸಾಮ್ಯಗಳಿವೆ..." ಎಂದು ಸಂಪಾದಕರು ಅಭಿಪ್ರಾಯಪಡುವರು. ಮೂಲಕಥೆಯಿಂದ ಕವಿಯು ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡಿರುವುದನ್ನು ಸಂಪಾದಕರು ವಿವರಿಸಿರುವರು (ಪು. xix-xx). ಮಹಾಕಾವ್ಯದ ಅಷ್ಟಾದಶ ವರ್ಣನೆಗಳನ್ನು ಬಳಸುವುದರ ಮೂಲಕ ಪುರಾಣದ ಕಥೆಯನ್ನು ವರ್ಣನೆಗಳಿಂದ ತುಂಬಿ ರಂಜನೀಯವಾಗಿಸಲು ಕವಿ ಪ್ರಯತ್ನಿಸಿರುವನು. ಕೃತಿಯು ಶೃಂಗಾರರಸಭರಿತವಾಗಿದೆ. ರಾತ್ರೀವಿಹಾರ ವರ್ಣನೆ ಯಲ್ಲಿ ಪ್ರಿಯ-ಪ್ರೇಯಸಿಯರ ಅಗಲಿಕೆಯ ವಿರಹ : ಸಮಾಗಮಗಳ ಚಿತ್ರಗಳು ಚೇತೋಹಾರಿಯಾಗಿ ಬಂದಿವೆ. ವಸಂತ-ವನವಿಹಾರ ವರ್ಣನೆ, ಪುಷ್ಪಾಪಚಯ-ಜಲ ಕೇಳೀ ವರ್ಣನೆ, ವೆಂಕಟೇಶ್ವರ-ಪದ್ಮಿನೀ ಹಾಗೂ ಕುಸುಮಮಂಜರಿಯ ವಿರಹ ವರ್ಣನೆ, ವಸಂತೋತ್ಸವ, ವೆಂಕಟೇಶ್ವರ-ಪದ್ಮಿನಿಯರ ರತಿ ಕೇಳೀ ವರ್ಣನೆ-ಇಲ್ಲೆಲ್ಲಾ ಶೃಂಗಾರದ ಮಹಾಪೂರವೇ ಹರಿದಿದೆ. ಇಲ್ಲಿನ ಸಾಂಪ್ರದಾಯಿಕ ವರ್ಣನೆಗಳು. ಕವಿಸಮಯಗಳು, ಅಲಂಕಾರಗಳು ಚಂಪೂ ಕಾವ್ಯಗಳನ್ನು ಆಸ್ವಾದಿಸಿರುವವರಿಗೆ ತೀರಾ ಪರಿಚಿತವಾದುವುಗಳೇ ಆಗಿವೆ. ಕವಿಯ ನಿರೂಪಣಾ ವಿಧಾನದಲ್ಲಿ ಲವಲವಿಕೆಯಿದೆ. ಈ ಉತ್ಸಾಹ ಕೃತಿಯುದ್ದಕ್ಕೂ ಹರಿದು ಬರುವುದರಿಂದ ಕೃತಿ ಸಹನೀಯವಾಗು ತ್ತದೆ. ಕೃತಿಯನ್ನು ಮುದ್ದಾಗಿ ಹೊರತಂದಿರುವುದರಿಂದ ಸಂಪಾದಕರ ಶ್ರಮ ಸಾರ್ಥಕ ವಾದಂತಿದೆ.

ಶಿವಾನಂದ ಗುಬ್ಬಣ್ಣವರ ಅವರಿಂದ ಸಂಪಾದಿತವಾಗಿರುವ 'ರಾಮಾಂಜ ನೇಯ ಕಾಳಗ'ವು ಮೂಡಲಪಾಯ ಬಯಲಾಟವಾಗಿದೆ. ಪ್ರಸ್ತಾವನೆಯಲ್ಲಿ ಗ್ರಾಮೀಣ ರಂಗಭೂಮಿಯ ಪ್ರಾಚೀನತೆ, ಬಯಲಾಟಗಳ ಪ್ರಕಾರಗಳು, ರಾಮಾಂಜನೇಯ ಕಾಳಗದ ಕಥೆ, ಸಾಮಾಜಿಕ-ಮಾನವಿಕ-ಮಾನಸಶಾಸ್ತ್ರಗಳ ದೃಷ್ಟಿ ಯಿಂದ ಜನಪದ ಕಲೆಯ ಅಧ್ಯಯನ-ಹೀಗೆ ಹಲವು ಸಂಗತಿಗಳ ಬಗೆಗೆ ವಿವರ ನೀಡಲಾಗಿದೆ. ಬಯಲಾಟಗಳ ಪ್ರಕಾರಗಳ ವಿವೇಚನೆಯಲ್ಲಿ ಸಂಪಾದಕರ ಆಳವಾದ ಹಾಗೂ ವ್ಯಾಪಕವಾದ ಅಧ್ಯಯನವಿದೆ. ಉತ್ತರ ಕರ್ನಾಟಕದ ಬಹುತೇಕ ಹಳ್ಳಿಗಳಲ್ಲಿ ಪ್ರಚಲಿತವಿರುವ ಹಾಗೂ ಜನಪ್ರಿಯವಾಗಿರುವ ಮೂಡಲಪಾಯ ಬಯಲಾಟವು ಜನಸಾಮಾನ್ಯರ ಮನರಂಜನೆಯ ಮಾಧ್ಯಮವಾಗಿದ್ದು. ಪ್ರಸ್ತುತ 'ರಾಮಾಂಜನೇಯ

ಕಾಳಗ'ವು ಒಂದು ಒಳ್ಳೆಯ ಬಯಲಾಟವಾಗಿದೆ. ಸಂಪಾದಕರ ಜಾನಪದದ ಬಗೆಗಿನ ಶ್ರದ್ಧೆ ಆಸಕ್ತಿ ಮೆಚ್ಚುವಂತಹುದು. ಈಗಾಗಲೇ ಡೊಳ್ಳಿನ ಸಂಪ್ರದಾಯವನ್ನು ಅಭ್ಯಾಸಮಾಡಿ, ಉತ್ತಮ ಸಂಕಲನಗಳನ್ನು ಹೊರತಂದಿರುವ ಶಿವಾನಂದ ಗುಬ್ಬಣ್ಣವರ ಅವರಿಂದ ಈ ಕ್ಷೇತ್ರಕ್ಕೆ ಇನ್ನಷ್ಟು ಲಾಭವಾಗಲಿ ಎಂದು ಹಾರೈಸುವೆವು.

ಚಿಕ್ಕುಪಾಧ್ಯಾಯ ವಿರಚಿತ 'ಶ್ರೀರಂಗ ಮಾಹಾತ್ಮ್ಯಂ' ಕೃತಿಯನ್ನು ಎಂ. ಪಿ. ಮಂಜಪ್ಪ ಶೆಟ್ಟಿಯವರು ಸಂಪಾದಿಸಿರುವರು. ಮೈಸೂರ ಅರಸು ಚಿಕ್ಕದೇವರಾಜನಲ್ಲಿ ಕರಣಿಕಾಗ್ರೇಸರನೂ ಮಂತ್ರಿಯೂ ಆಗಿದ್ದ ಚಿಕ್ಕುಪಾಧ್ಯಾಯನು ಆ ಕಾಲದ ಶ್ರೇಷ್ಠ ಪಂಡಿತ, ವಿದ್ವಾಂಸ. ಚಂಪೂ, ಸಾಂಗತ್ಯ, ಗದ್ಯಗ್ರಂಥ, ಟೀಕೆಗಳು, ಹಾಡುಗಳು-ಹೀಗೆ ವೈವಿಧ್ಯಮಯವಾಗಿದೆ ಇವನ ಸಾಹಿತ್ಯ ಸೇವೆ. 'ಶ್ರೀರಂಗ ಮಹಾತ್ಮ್ಯ'ವು ಒಂದು ಗದ್ಯ ಗ್ರಂಥ. ಇದರಲ್ಲಿ ಹತ್ತು ಪರಿಚ್ಛೇದಗಳಿವೆ. ಮೊದಲನೆಯದು ಕಂದ ವೃತ್ತಗಳಲ್ಲಿದ್ದು ಕವಿ ತನ್ನ ಇತಿವೃತ್ತವನ್ನು ವಿಸ್ತಾರವಾಗಿ ಇಲ್ಲಿ ಹೇಳಿರುವನು. ಬ್ರಹ್ಮಾಂಡ ಪುರಾಣದಲ್ಲಿ ಹತ್ತು ಅಧ್ಯಾಯಗಳಲ್ಲಿ ವಿಸ್ತಾರವಾಗಿ ಬಂದಿರುವ ಶ್ರೀರಂಗಕ್ಷೇತ್ರದ ಮಹಾತ್ಮೆಯನ್ನು ಈ ಕೃತಿಯಲ್ಲಿ ವರ್ಣಿಸಲಾಗಿದೆ. ಅರ್ಥಾತ್ ಕನ್ನಡಕ್ಕೆ ಭಾಷಾಂತರಿಸಲಾಗಿದೆ. ಈ ಲಘು ಕೃತಿಯನ್ನು ಮೂರು ಹಸ್ತಪ್ರತಿಗಳ ಸಹಾಯದಿಂದ ಸಂಪಾದಿಸಲಾಗಿದೆ. ಸಂಪಾದಕರು ಪೀಠಿಕೆಯಲ್ಲಿ ಕವಿಕಾವ್ಯ ವಿಚಾರ, ಕಥಾಸಾರ, ಕೃತಿಯಲ್ಲಿ ವ್ಯಕ್ತವಾಗಿರುವ ಚರಿತ್ರಾಂಶ ಗಳು, ಕನ್ನಡದಲ್ಲಿ ಬಂದಿರುವ ಶ್ರೀರಂಗ ಮಹಾತ್ಮ್ಯೆಗಳು-ಹೀಗೆ ಕೃತಿಯ ಅಧ್ಯಯನಕ್ಕೆ ನೆರವಾಗುವ ಎಲ್ಲ ಸಾಧನ ಸಾಮಗ್ರಿಗಳನ್ನು ಶ್ರದ್ಧೆಯಿಂದ ಒದಗಿಸಿರುವರು. ಸಂಪಾದಕರ ಪ್ರಯತ್ನ ಮೆಚ್ಚುವಂತಹದು.

ವಿಮಲಾನಂದನ 'ಕೃಷ್ಣಾರ್ಜುನರ ಕಾಳಗ' ವನ್ನು ಮೂರು ಹಸ್ತಪ್ರತಿಗಳ ನೆರವಿನಿಂದ ಕೆ. ಆರ್. ಶೇಷಗಿರಿಯವರು ಸಂಪಾದಿಸಿರುವರು. ವಿಮಲಾನಂದನ (1685) 'ಕೃಷ್ಣಾರ್ಜುನರ ಕಾಳಗ'ವು ಭಾಮಿನೀ ಷಟ್ಪದಿಯ ಕೃತಿಯಾಗಿದ್ದು ಇದರಲ್ಲಿ ಒಟ್ಟು 30 ಸಂಧಿ 1818 ಪದ್ಯಗಳಿವೆ. ಈ ಕೃತಿಯ ನಾಯಕ ಅರ್ಜುನ, ಗಯನ ಪ್ರಸ್ತಾಪ ನೆಪಮಾತ್ರ. ಗಯನನ್ನು ಕಾರಣವಾಗಿರಿಸಿಕೊಂಡು ಕೃಷ್ಣಾರ್ಜುನರು ತಮ್ಮ ಶೌರ್ಯ ಸಾಹಸಗಳನ್ನು ಪ್ರದರ್ಶಿಸಿದ ಘಟನೆ ಈ ಕೃತಿಯ ವಸ್ತು. ಗಯನ ಪ್ರಸಂಗವನ್ನು ನಿಮಿತ್ತಮಾಡಿಕೊಂಡು ಕವಿ ಭಾರತದ ಅನೇಕ ವಿಷಯಗಳನ್ನು ಇಲ್ಲಿ ತಂದು ಸೇರಿಸಿರುವರು. ಇದರಿಂದಾಗಿ ಕೃತಿ ಬೆಳೆದಿದೆ. ಕೃಷ್ಣಾರ್ಜುನರ ಪ್ರತಿಷ್ಠೆಯ ಹುಸಿಜಗಳದ ವ್ಯಾಜವಾಗಿ ಸಮಸ್ತ ಭಾರತ ಕಥೆಯನ್ನು ಹೇಳುವ ಉದ್ದೇಶ ಕವಿಗೆ ಇದ್ದಂತಿದೆ. ಕವಿಯು ಕೃಷ್ಣಭಕ್ತ. ಕೃಷ್ಣನ ಮಹಿಮಾವಳಿಗಳನ್ನು ನಿರೂಪಿಸುವ ಉದ್ದೇಶವಿರುವುದರಿಂದ ಇದು ಕೃಷ್ಣ ಕಥೆಯೂ ಆಗಿದೆ. ಕುಮಾರ ವ್ಯಾಸನ ದಟ್ಟ ವಾದ ಪ್ರಭಾವ ಕವಿಯ ಮೇಲೆ ಆಗಿರುವುದನ್ನು ಸಂಪಾದಕರು ತೋರಿಸಿಕೊಟ್ಟಿರು

ವರು. ಸಂಪಾದಕರು ವಿಸ್ತೃತವಾದ ತಮ್ಮ ಪೀಠಿಕೆಯಲ್ಲಿ ಕವಿಕೃತಿವಿಚಾರ, ಆಕರ, ಪೂರ್ವಕವಿಗಳ ಪ್ರಭಾವ, ಕಥಾಸಾರ, ಪಾತ್ರವಿವೇಚನೆ, ಕಾವ್ಯ ಸಮೀಕ್ಷೆ – ಹೀಗೆ ಉಪಯುಕ್ತ ವಿವರಗಳನ್ನೆಲ್ಲಾ ಒದಗಿಸಿಕೊಟ್ಟಿರುವರು. ಉತ್ತಮ ಪಾಠಗಳನ್ನು ಆಯ್ಕೆ ಮಾಡುವಲ್ಲಿ ಜೋಕೆ ತೂಕಗಳಿಂದ ವರ್ತಿಸಿರುವರು. ಆಕಾರಾದಿ, ಅರ್ಥ ಕೋಶಗಳನ್ನು ಕೊನೆಯಲ್ಲಿ ಕೊಟ್ಟಿರುವರು. ಶ್ರದ್ಧೆ ಹಾಗೂ ಅಚ್ಚುಕಟ್ಟಿನಿಂದ ಕೂಡಿರುವ ಈ ಸಂಪಾದಿತ ಕೃತಿ ಸ್ವಾಗತಾರ್ಹವಾಗಿದೆ.

ಗೋಪಕವಿಯ (ಸು. 1620) 'ನಂದಿ ಮಹಾತ್ಮ್ಯೆ'ಯನ್ನು ಜಿ. ಜಿ. ಮಂಜುನಾಥನ್‌ರವರು ಸಂಪಾದಿಸಿರುವರು. ಗೋಪಕವಿಯು ಆವತಿನಾಡ ಪ್ರಭುಗಳ ಆಶ್ರಯದಲ್ಲಿದ್ದನು. ಇಮ್ಮಡಿ ಹಾವಳಿ ಭೈರೇಂದ್ರನ ಆಶಯದಂತೆ ನಂದಿಮಹಾತ್ಮ್ಯೆಯನ್ನು ಬರೆದುದಾಗಿ ಕವಿಯೇ ಹೇಳಿಕೊಂಡಿರುವನು. ಕೃತಿ 25 ಸಂಧಿಗಳನ್ನು 1225 ಷಟ್ಪದಿಗಳನ್ನೂ ಒಳಗೊಂಡಿದ್ದು ಇದನ್ನು ಬರೆಯಿಸಿ ಕೇಳಿ ಆಸ್ವಾದಿಸಿ ಮೆಚ್ಚಿದ ಇಮ್ಮಡಿ ಹಾವಳಿ ಭೈರೇಂದ್ರನು ಗೋಪಕವಿಗೆ ವಿರೂಪಾಕ್ಷಪುರವನ್ನು ಉಂಬಳಿಯಾಗಿ ಬಹುಮಾನಿಸಿದನು. (ವಿರೂಪಾಕ್ಷಪುರವು ಇಂದು ದೊಡ್ಡಬಳ್ಳಾಪುರದ ತಾಲ್ಲೂಕಿನಲ್ಲಿ ಹೋಬಳಿ ಕೇಂದ್ರವಾಗಿರುವ ವಿರೂಪಾಕ್ಷಪುರ). ವ್ಯಾಸ ಮುನಿಯು ಬ್ರಹ್ಮಾಂಡಪುರಾಣದಲ್ಲಿ ಪಂಚನದಿಯ ಮಹಾತ್ಮ್ಯೆಯನ್ನು ಹೇಳಿರುವನು. ದೇವನಹಳ್ಳಿಯ ಮದನ ಗೋಪಾಲನ (ವೇಣು ಗೋಪಾಲಸ್ವಾಮಿಯ). 'ಆಜ್ಞಾ ಸಮಂಜಸದಿ' ಕರ್ಣಾಟ ಭಾಷಾವಿಶೇಷದಿಂದ ಅದನ್ನು ಕೃತಿಗೈದಿರುವೆನೆಂದು ಹೇಳಿ, ಕವಿ ತನ್ನ ಕೃತಿಗೆ ಆಕರವನ್ನು ತಿಳಿಸಿರುವನು.

ನಂದಿಮಹಾತ್ಮ್ಯೆಯ ವಸ್ತು ನಂದಿಕ್ಷೇತ್ರದ ವರ್ಣನೆಯಾಗಿದೆ. ಪುಣ್ಯ ಕ್ಷೇತ್ರಗಳಲ್ಲಿ ಒಂದಾದ ನಂದಿದುರ್ಗದ ಮಹಾತ್ಮ್ಯೆಯನ್ನು ವಿಸ್ತಾರವಾಗಿ ಮನಮುಟ್ಟುವಂತೆ ಕವಿ ವರ್ಣಿಸಿರುವನು. ಈ ಕ್ಷೇತ್ರವು ಹಲವು ರಾಜವಂಶಗಳ ಆಳ್ವಿಕೆಗೆ ಒಳಗಾಗಿದ್ದು ವಿವಿಧ ಸಂಸ್ಕೃತಿಗಳ ಸಂಗಮವನ್ನು ನಾವಿಲ್ಲಿ ಕಾಣಬಹುದಾಗಿದೆ. ಶೈವ ವೈಷ್ಣವ, ಜೈನ ಧರ್ಮಗಳು ಈ ಕ್ಷೇತ್ರದಲ್ಲಿ ನೆಲೆಯೂರಿದ್ದವು. ಹಲವು ನದನದಿಗಳ ಉಗಮಸ್ಥಾನವೂ ಈ ಕ್ಷೇತ್ರವಾಗಿದೆ. ಸಂಪಾದಕರು ಪೀಠಿಕೆಯಲ್ಲಿ ಹೇಳಿರುವಂತೆ "ಬ್ರಹ್ಮಾಂಡಪುರಾಣದ ವಸ್ತು ಈತನಿಗೆ ನೆಪಮಾತ್ರ. ಉಳಿದಂತೆ ಆತ ತನ್ನ ಪಾಂಡಿತ್ಯದಿಂದ ಪ್ರತಿಭೆಯಿಂದ ಕಾವ್ಯವನ್ನು ನಡೆಸಿಕೊಂಡು ಹೋಗಿದ್ದಾನೆ. ಈತನ ಕಾವ್ಯದಲ್ಲಿ ನಮಗೆ ಎದ್ದು ಕಾಣುವುದು ಭಕ್ತಿ... ನಂದಿ ಮಹಾತ್ಮ್ಯೆದಲ್ಲಿ ಉದ್ದಕ್ಕೂ ಕಂಡು ಬರುವುದು ಶಿವಗೋಷ್ಠಿ, ಶಿವಕಥೆ, ಶಿವಪುರಾಣ, ಶಿವಲೀಲೆ, ಶಿವಮಹಿಮೆ, ಶಿವಗೀತೆ, ಶಿವನುಡಿ, ಶಿವಧ್ಯಾನ, ಒಟ್ಟಿನಲ್ಲಿ ಇಡೀ ಕಾವ್ಯವನ್ನು ಶಿವಾವೇಷದಿಂದ ಗೋಪಕವಿ ರಚಿಸಿದ್ದಾನೆ. ಅಷ್ಟವಿಧಾರ್ಚನೆ, ನವವಿಧಭಕ್ತಿ, ಷೋಡಶೋಪಚಾರ, ಸತಿಪತಿ ನ್ಯಾಯಗಳು 'ನಂದಿಮಹಾತ್ಮ್ಯೆ'ದಲ್ಲಿ ತುಂಬಿ ತುಳುಕುತ್ತಿವೆ. ರುದ್ರಸೂಕ್ತ, ಅಥರ್ವಣ,

ಸಾಮ, ಋಗ್ಯಜು ಸ್ಸೂಕ್ತ, ಪುರುಷಸೂಕ್ತ, ಶಿವಸ್ತೋತ್ರಸಂಕುಳಗಳು ನಂದಿಮಹಾತ್ಮ್ಯೆ ಯಲ್ಲಿವೆ. ಪಾರ್ವತಿಯ ಸ್ತುತಿ, ಈಶ್ವರನ ಸ್ತುತಿಗಳು ಬಂದಾಗ, ಆತ ಮೈದುಂಬಿ ಹಾಡುತ್ತಾನೆ. ..."(ಪು. 74). ಗೋಪಕವಿಯು ವಿಶ್ವಾಮಿತ್ರಗೋತ್ರದವನು. ಮದನ ಗೋಪಾಲನ ಕರುಣದಿಂದ ಕಾವ್ಯವನ್ನು ರಚಿಸಿದವನು. ಇಂತಹವನು ನಂದಿಮಹಾತ್ಮ್ಯೆ ಯನ್ನು ವಸ್ತುವಾಗಿ ಆರಿಸಿಕೊಂಡು ಕೃತಿರಚನೆ ಮಾಡಿದುದು, ಶಿವ ಪಾರ್ವತಿಯರನ್ನು ಮೈದುಂಬಿ ಹಾಡಿರುವುದು ಗಮನೀಯ ಸಂಗತಿ. ಪ್ರಾಚೀನ ಸಂಸ್ಕೃತ. ಕನ್ನಡ ಕೃತಿಗಳನ್ನು ಚೆನ್ನಾಗಿ ಓದಿಕೊಂಡಿರುವ ಪ್ರತಿಭಾಸಂಪನ್ನನಾದ ಗೋಪಕವಿಯು ಅಷ್ಟಾದಶವರ್ಣನೆಗಳ ವ್ಯಾಮೋಹಕ್ಕೆ ಸ್ವಲ್ಪವೂ ವಶನಾಗದೆ, ಭಕ್ತಿಪ್ರಪಂಚದಲ್ಲಿ ಮುಳುಗಿ ಹೋಗಿರುವುದು ಅವನ ವ್ಯಕ್ತಿತ್ವದ ವಿಶೇಷತೆಯನ್ನು ತಿಳಿಯಪಡಿಸುತ್ತದೆ. ಸಂಪಾದಕರು ವಿಸ್ತಾರವಾದ ಪೀಠಿಕೆಯಲ್ಲಿ ಕವಿಕೃತಿ ವಿಚಾರ, ಗ್ರಂಥಸಾರ, ಸಂಸ್ಕೃತ ಮೂಲಆಕರಗಳು, ಭೌಗೋಳಿಕ, ಐತಿಹಾಸಿಕ, ಸಾಂಸ್ಕೃತಿಕ ವಿವರಗಳು, ಪ್ರೇಕ್ಷಣೀಯ ಸ್ಥಳಗಳು, ವಸ್ತು ವಿಮರ್ಶೆ–ಹೀಗೆ ಕೃತಿಯ ಅಧ್ಯಯನಕ್ಕೆ ನೆರವಾಗುವ ಸಹಾಯಕ ಸಾಮಗ್ರಿಗಳನ್ನೆಲ್ಲಾ ಒದಗಿಸಿಕೊಟ್ಟಿರುವರು. ಕೊನೆಯ ಅನುಬಂಧಗಳಲ್ಲಿ ಕೊಟ್ಟಿರುವ ವಿವರಗಳು ಉಪ ಯೋಗಿಕವಾಗಿವೆ. ಅಚ್ಚುಕಟ್ಟಾಗಿ ಸಂಪಾದಿಸಿ, ಅಭ್ಯಾಸಪೂರ್ಣ ಪೀಠಿಕೆ, ಅನುಬಂಧ ಗಳನ್ನು ಒದಗಿಸಿರುವ ಸಂಪಾದಕರು ಅಭಿನಂದನೀಯರು.

# ಭಾಷೆ ಮತ್ತು ವ್ಯಾಕರಣ

**ಕೃಷ್ಣ ಪರಮೇಶ್ವರ ಭಟ್ಟ**

ಈ ಲೇಖನದಲ್ಲಿ ಗಮನಿಸಲಾದ ಭಾಷಾ - ವ್ಯಾಕರಣ ವಿಷಯಕ ಗ್ರಂಥಗಳು ನಾಲ್ಕು ; 'ವಾಗರ್ಥ' (ಎಂ. ಚಿದಾನಂದ ಮೂರ್ತಿ.) 'ಕನ್ನಡ ಭಾಷಾನುಯೋಗ' (ಚೆ. ರಾಮಸ್ವಾಮಿ), ಭಾಷಾವೈಜ್ಞಾನಿಕ ನೆಲೆಯಲ್ಲಿ ಪದಗಳ ಚರಿತ್ರೆ (ವಿ. ಶಿವಾನಂದ) ಹಾಗೂ, 'ಕನ್ನಡ-ಸಂಸ್ಕೃತಗಳ ಬಾಂಧವ್ಯ' (ಬಿ. ಹೆಚ್. ಶ್ರೀಧರ). ಇವುಗಳಲ್ಲಿ ಮೊದಲ ಮೂರು ಕೃತಿಗಳು ಭಾಷಾ ವೈಜ್ಞಾನಿಕ ಹಿನ್ನೆಲೆಯಲ್ಲಿ ನಡೆದ ಭಾಷೆಯನ್ನೇ ಕುರಿತ ವಿವೇಚನೆಗಳನ್ನು ಒಳಗೊಂಡಿವೆ. ಕೊನೆಯದು ಹೆಸರೇಸೂಚಿಸುವಂತೆ ಕನ್ನಡ ಮತ್ತು ಸಂಸ್ಕೃತಗಳ ಬಾಂಧವ್ಯವನ್ನು ಭಾಷೆ ಹಾಗೂ ಭಾಷೇತರ ಪ್ರಭಾವಗಳನ್ನು ಅನುಲಕ್ಷಿಸಿ ವಿವರಿಸುವ ಉದ್ದೇಶವನ್ನು ಹೊಂದಿದೆ.

ಇವುಗಳಲ್ಲಿ 'ವಾಗರ್ಥ' ಹೆಚ್ಚು ಮಹತ್ವದ ಕೃತಿ ಹಾಗೂ ಈಗಾಗಲೇ ವಿದ್ವಾಂಸರಿಂದ ಪ್ರಶಂಸಾಪರವಾದ ಹೇಳಿಕೆಗಳನ್ನು ಪಡೆದ ಕೃತಿ. ಒಂದಿಲ್ಲೊಂದು ರೀತಿಯಲ್ಲಿ ಭಾಷೆಗೆ ಸಂಬಂಧಿಸಿದ ಲೇಖನಗಳ ಸಂಕಲನವಿದು. ಇಲ್ಲಿಯ ಲೇಖನ ಗಳಲ್ಲಿ ಕೆಲವು ಇದೇ ಲೇಖಕರ ಬೇರೆ ಕೃತಿಗಳಲ್ಲಿ ಪ್ರಕಟವಾಗಿರುವಂಥವು. ಇನ್ನು ಕೆಲವು ಸಮ್ಮೇಳನಗಳಲ್ಲಿ ಓದಿದಂಥವು. ಮತ್ತೆ ಕೆಲವು ಬೇರೆಡೆಗೆ ಪ್ರಕಟವಾದ ಅಥವಾ ಸ್ವೀಕೃತವಾದ ಇದೇ ಲೇಖಕರ ಇಂಗ್ಲಿಷ್ ಲೇಖನಗಳ ಕನ್ನಡ ರೂಪಗಳು. ಭಾಷೆಗೆ ಸಂಬಂಧಿಸಿವೆ ಎಂಬ ಕಾರಣದಿಂದ ಇಲ್ಲಿ ಒಟ್ಟಿಗೇ ಪ್ರಕಟಿತವಾಗಿವೆ. ಇಲ್ಲಿಯ ಕೆಲವು ಲೇಖನಗಳಿಗೆ ಕೊಡಲಾದ ಅಡಿಟಿಪ್ಪಣಿಯಲ್ಲಿ ಆಯಾ ಲೇಖನಗಳು ಪ್ರಕಟವಾದ ವರ್ಷ, ಅವುಗಳ ಶೀರ್ಷಿಕೆ ಮುಂತಾದ ವಿವರಗಳನ್ನು ನೀಡಲಾಗಿದೆ. ಈ ವಿವರಗಳನ್ನು ಇಲ್ಲಿಯ ಉಳಿದ ಲೇಖನಗಳಿಗೆ ಸಂಬಂಧಿಸಿದಂತೆ ಕಾಣಿಸಿದ್ದರೆ ಚೆನ್ನಾಗಿರುತ್ತಿತ್ತು. ಪ್ರಕಟಣೆಯ ವರ್ಷವನ್ನು ಬೇರೆಡೆಗೆ ಇತರರು ಉಲ್ಲೇಖಿಸುವಾಗ (ಭವಿಷ್ಯದಲ್ಲಿ) ಉಂಟಾಗಬಹುದಾದ ಪ್ರಮಾದ ಇದರಿಂದ ತಪ್ಪಬಹುದು. ಈ ಕೃತಿಯ ಲೇಖನಗಳಲ್ಲಿ 'ದೇಕಬ್ಬೆ ಶಾಸನದ ಸ್ಥಳಗಳನ್ನು ಕುರಿತು', 'ಗೋದಾವರಿ ತೀರದ ಕನ್ನಡ', 'ಹತ್ತನೆಯ ಶತಮಾನದ ಶಿಷ್ಟಭಾಷೆಯ ಪ್ರದೇಶ ಹಾಗೂ "'ಅಮ್ಮ"; "ಅಬ್ಬೆ"; "ಅಲ್ಲಮ"; "ಬಾದುಬ್ಬೆ" ಎಂಬ ಲೇಖನಗಳು ಭಾಷೆಯ ಸಾಮಗ್ರಿ ಅಥವಾ ಭಾಷೆಯನ್ನು ಕುರಿತ ಹೇಳಿಕೆಗಳನ್ನಾಧರಿಸಿ ಭಾಷೇತರ ತೀರ್ಮಾನ ಗಳನ್ನು ಮಂಡಿಸಲು ಮಾಡಿದ ಪ್ರಯತ್ನಗಳು. ಆದ್ದರಿಂದ ಇವು ಭಾಷಾ ಸಾಮಗ್ರಿಯ ವಿವೇಚನೆಯನ್ನೇ ಮುಖ್ಯೋದ್ದೇಶವಾಗಿಟ್ಟುಕೊಂಡ ಉಳಿದ ಲೇಖನಗಳಿಗಿಂತ

ಬೇರೆಯಾಗಿ ನಿಲ್ಲುತ್ತವೆ. ಈ 'ಉಳಿದ' ಲೇಖನಗಳಲ್ಲಿ 'ಕನ್ನಡದಲ್ಲಿ ಪ್ರತಿಧ್ವನಿ ಪದಗಳು ಹಾಗೂ 'ವ್ಯಾವಹಾರಿಕ ಕನ್ನಡದಲ್ಲಿ ವಿಭಕ್ತಿ ವ್ಯವಸ್ಥೆ' ಎಂಬ ಲೇಖನಗಳು ವರ್ಣನಾತ್ಮಕವಾಗಿ ವಿಶ್ಲೇಷಿಸುವ ಲೇಖನಗಳು. ಉಳಿದವು ವರ್ಣನಾತ್ಮಕ ಹಾಗೂ ಐತಿಹಾಸಿಕ ದೃಷ್ಟಿಗಳೆರಡನ್ನೂ ಒಂದಿಲ್ಲೊಂದು ಪ್ರಮಾಣದಲ್ಲಿ ಒಳಗೊಂಡ ಲೇಖನಗಳು. ಕರ್ನಾಟಕದ ಸ್ಥಳನಾಮ ಹಾಗೂ ವ್ಯಕ್ತಿನಾಮಗಳನ್ನು ಕುರಿತ ಲೇಖನಗಳು ಅವುಗಳ ರಚನೆಗಳನ್ನು ವಿವರಿಸುವುದರ ಜೊತೆಗೆ ಐತಿಹಾಸಿಕವಾದ ಮಾಹಿತಿಗಳನ್ನು ಕೊಡುತ್ತವೆ. ಶಾಸನಗಳ ವಿವರವಾದ ಅಧ್ಯಯನ ಇವುಗಳ ಹಿಂದಿರುವುದರಿಂದ ಲೇಖನಗಳು ಸುಪುಷ್ಟವಾಗಿವೆ. ಈ ವಿಷಯಗಳನ್ನು ಕುರಿತಂತೆ ಇಷ್ಟು ಕ್ರಮಬದ್ಧವಾದ ಹಾಗೂ ಮೌಲಿಕವಾದ ಲೇಖನಗಳು ಪ್ರಕಟವಾದದ್ದು ಕನ್ನಡದಲ್ಲಿ (ಬಹುಶಃ ದ್ರಾವಿಡ ಭಾಷೆಗಳಲ್ಲಿಯೇ) ಇದೇ ಮೊದಲು. '–ವರ ಮತ್ತು –ವಾರ ಎಂದು ಕೊನೆಯಾಗುವ ಊರ ಹೆಸರುಗಳು' ಎಂಬ ಲೇಖನದಲ್ಲಿ ಈ ಎರಡೂ ರೂಪುಗಳು ಸಂಸ್ಕೃತ 'ಪುರ' ಎಂಬುದರಿಂದ ಹುಟ್ಟಿದವೆಂದೂ ಈ ರೂಪಗಳ ಹಿಂದಿನ (ಹೆಸರಿನ) ಭಾಗವು ಹ್ರಸ್ವ ಅಥವಾ ದೀರ್ಘ ಸ್ವರಗಳನ್ನು ಒಳಗೊಂಡಿದೆಯೇ ಎಂಬುದನ್ನನುಸರಿಸಿ ಪರಸ್ಪರ ವ್ಯಾವರ್ತಕವಾಗಿ ಬಳಕೆಯಾಗುತ್ತವೆ ಎಂಬ ನಿಲುವಿದೆ. ಪ್ರತಿಧ್ವನಿ ಪದಗಳನ್ನು ಕುರಿತ ಲೇಖನದಲ್ಲಿ ಕನ್ನಡದಲ್ಲಿ ಪ್ರತಿಧ್ವನಿ ಪದವನ್ನು ಸೃಷ್ಟಿಸಿಕೊಳ್ಳುವ ರೀತಿ ಹಾಗೂ ಅವು ಶಬ್ದಾರ್ಥವನ್ನು ಸೂಕ್ಷ್ಮವಾಗಿ ಬದಲಿಸುವ ರೀತಿಯನ್ನು ವಿವರಿಸಲಾಗಿದೆ. ಲಂಬಾಣಿ ಜನ ಮತ್ತು ಭಾಷೆಯನ್ನು ಕುರಿತ ಲೇಖನದಲ್ಲಿ ಪ್ರಮುಖವಾಗಿ ಅವರ ಭಾಷೆ ಕನ್ನಡದಿಂದ ಪ್ರಭಾವಿತವಾಗುತ್ತಿರುವುದನ್ನೂ ಅದು ಕೊಳ್ಳುವ ಭಾಷೆ ಮಾತ್ರವಾಗಿರುವುದನ್ನೂ ಪ್ರಸ್ತಾಪಿಸಲಾಗಿದೆ. ಕನ್ನಡ ಭಾಷೆಯ ಆಧುನೀಕರಣವೆಂಬ ಲೇಖನದಲ್ಲಿ ಕನ್ನಡದಲ್ಲಿ ಸ್ವೀಕರಣ ಹಾಗೂ ಇತರ ವಿಧಾನಗಳಿಂದ ಹೊಸ ಶಬ್ದಗಳು ಸೇರ್ಪಡೆಯಾಗುವ ಬಗೆಯನ್ನು ವಿವರಿಸಲಾಗಿದೆ. 'ಗೋದಾವರೀ ತೀರದ ಕನ್ನಡ' ಎಂಬ ಲೇಖನದಲ್ಲಿ ಗೋದಾವರೀ ತೀರ ಪ್ರದೇಶ ಹಿಂದೆ ಕನ್ನಡದ ಪ್ರದೇಶವಾಗಿತ್ತೆಂಬುದನ್ನು ಆ ಭಾಗದ ಶಾಸನಗಳಲ್ಲಿ ಸಿಗುವ ಸ್ಥಳನಾಮ ಹಾಗೂ ವ್ಯಕ್ತಿನಾಮಗಳನ್ನು ಗಮನಿಸಿ ಹೇಳಲಾಗಿದೆ. 'ಕನ್ನಡದಲ್ಲಿ ಮಣಿಪ್ರವಾಳ' ಎಂಬುದರಲ್ಲಿ ತಮಿಳು, ಮಲೆಯಾಳಂ ಭಾಷೆಗಳಲ್ಲಿಯಂತೆಯೇ ಕನ್ನಡದಲ್ಲಿಯೂ ಸಂಸ್ಕೃತ ಮಿಶ್ರವಾದ ಕನ್ನಡ ವಾಕ್ಯರಚನೆಗಳ ಬಳಕೆ (—ಮಣಿಪ್ರವಾಳ ಶೈಲಿ) ಇತ್ತು ಎಂಬುದನ್ನು ಶಾಸನೋಕ್ತ ಉದಾಹರಣೆಗಳೊಂದಿಗೆ ತೋರಿಸಲಾಗಿದೆ. 'ಅಡ್ಡಾಯುಧ'ದ ಬಗೆಗೆ ಬರೆದ ಟಿಪ್ಪಣಿಯಲ್ಲಿ ಅದು ಉಪ, ಚಿಕ್ಕ ಎಂಬರ್ಥಗಳನ್ನು ಪಡೆದುಕೊಂಡು ಸಂಸ್ಕೃತದ 'ಅರ್ಧ' ದಿಂದ ಬಂದಿದೆಯೆಂದು ಹೇಳಲಾಗಿದೆ. 'ವ್ಯಾವಹಾರಿಕ ಕನ್ನಡದಲ್ಲಿ ವಿಭಕ್ತಿವ್ಯವಸ್ಥೆ'ಯಲ್ಲಿ ಕನ್ನಡದ ವಿಭಕ್ತಿ ಪ್ರತ್ಯಯಗಳು ಹಾಗೂ -ವಿಭಕ್ತಿ ಪಲ್ಲಟಗಳನ್ನು ಕುರಿತ ವಿವೇಚನೆಯಿದೆ. ಇದರಲ್ಲಿ ಹೇಳಲಾದ ಉತ್ತರ ಸ್ಥಾನೀಯಗಳು, ಪ್ರತಿಗಮವಿಭಕ್ತಿ ಹಾಗೂ ಸಹವಿಭಕ್ತಿಗಳನ್ನು ಕುರಿತು ಮುನ್ನುಡಿಯಲ್ಲಿ ಬಿ. ಬಿ. ರಾಜಪುರೋಹಿತ್ ಅವರು ಎತ್ತಿದ ಆಕ್ಷೇಪಣೆಗಳು ಒಪ್ಪತಕ್ಕದಾಗಿವೆ. ಲೇಖನದಲ್ಲಿ ಹೇಳಲಾದ ವಿಭಕ್ತಿ ಪಲ್ಲಟಗಳಲ್ಲಿ ದ್ವಿತಿಯಾಚತುರ್ಥಿ ಪ್ರತ್ಯಯಗಳ

ಲ್ಲಾಗುವ ಪಲ್ಲಟವೂ ಒಂದು. ದ್ವಿತೀಯೆಗೆ ಚತುರ್ಥಿ ಬಳಕೆಯಾಗುತ್ತಿರುವುದು (ಇದಕ್ಕೆ ಕೊಟ್ಟ ಉದಾಹರಣೆ ಬಹುಶಃ ಸರಿಯಿಲ್ಲದಿದ್ದರೂ) ನಿಜವೇ. ಇದಕ್ಕೆ ಒಂದು ವಾಕ್ಯರಚನೆಯಲ್ಲಿ ಇನ್ನೊಂದನ್ನು ಸೇರಿಸಿರುವುದೋ ಹಿಂದೂಸ್ತಾನಿ ಭಾಷೆಯ ಪ್ರಭಾವವೋ (ಅಥವಾ ಇನ್ನಾವುದೋ?) ಕಾರಣವಿರಬಹುದೆಂದು ಹೇಳಲಾಗಿದೆ. ಈ ಪಲ್ಲಟಕ್ಕೆ ಹಿಂದೂಸ್ತಾನಿಯ ಪ್ರಭಾವ ಕಾರಣವಿರಬೇಕೆಂಬ ಅಭಿಪ್ರಾಯ ಅನೇಕ ರಲ್ಲಿದೆ. 'ರಾಮನು ರಾವಣನಿಗೆ ಕೊಂದ' ಮುಂತಾದ ಕೆಲವು ನಿರ್ದಿಷ್ಟ ರೀತಿಯ (isolated) ಉದಾಹರಣೆಗಳಿಗೆ ಸಂಬಂಧಿಸಿದಂತೆ ಇದು ನಿಜವೂ ಹೌದು. ಆದರೆ ಈ ರೀತಿಯ ರಚನೆಗಳು ಕನ್ನಡ ಮಾತೃಭಾಷಿಕರಿಗೆ ಸಮ್ಮತವಾದವು ಗಳಲ್ಲ. ಆದರೆ ಲೇಖನದಲ್ಲಿ ಕೊಟ್ಟ ಉದಾಹರಣೆಯಾಗಲೀ 'ರಾಮ ನನ್ನನ್ನು (ನನಗೆ) ಹೊಡೆದ', 'ಅವರನ್ನು (ಅವರಿಗೆ) ಈ ಪ್ರಶ್ನೆ ಕೇಳು', 'ಅಲೆ ದಡವನ್ನು (ದಡಕ್ಕೆ) ಅಪ್ಪಳಿಸಿತು, 'ಆ ಮಾತು ಮನಸ್ಸನ್ನು (ಮನಸ್ಸಿಗೆ) ಚುಚ್ಚಿತು' ಎಂಬಿತ್ಯಾದಿ ಉದಾಹರಣೆಗಳು ಕನ್ನಡದಲ್ಲಿ ಬಳಕೆಯಾಗುವಂಥವುಗಳು. ಕ್ರಿಯಾಪದಗಳ ಅರ್ಥ ಗಳನ್ನು ಗಮನಿಸಿ ಎಂತಹ ಕಡೆ ಈ ಪಲ್ಲಟ ಸಾಧ್ಯವೆಂಬುದನ್ನು ಹೇಳಬಹುದೆನಿಸು ತ್ತದೆ. ನಿರ್ದಿಷ್ಟ ದಿಕ್ಕಿನೆಡೆಗೆ ಹಾಗೂ ಸಾಪೇಕ್ಷವಾಗಿ ತೀವ್ರಗತಿಯನ್ನು ಹೇಳುವ ಸಕರ್ಮಕ ಕ್ರಿಯಾಪದಗಳೊಟ್ಟಿಗೆ ಮಾತ್ರ ಈ ಪಲ್ಲಟ ಸಾಧ್ಯವೆಂದು ತೋರುತ್ತದೆ. ಹೊಡೆ, ಕೇಳು, ಬಡಿ, ಅಪ್ಪಳಿಸು, ಚುಚ್ಚು, ಸೇರು ಮುಂತಾದವು ಈ ವರ್ಗಕ್ಕೆ ಸೇರುವ (ಪಲ್ಲಟವನ್ನು ಸಾಧ್ಯಗೊಳಿಸುವ) ಕೆಲವು ಕ್ರಿಯಾಪದಗಳು. ಈ ವರ್ಗದ ಕ್ರಿಯಾಪದಗಳನ್ನು ಇನ್ನೂ ಹೆಚ್ಚು ಸ್ಪಷ್ಟವಾಗಿ (ಅರ್ಥವನ್ನಾಧರಿಸಿ) ವರ್ಣಿಸಲು ಸಾಧ್ಯವೇನೋ ನೋಡಬೇಕು. ಒಟ್ಟಿನಲ್ಲಿ ಈ ವಿಭಕ್ತಿಪಲ್ಲಟ ವ್ಯವಸ್ಥಿತವಾದ ರೀತಿ ಯಲ್ಲಿ ಜರುಗುತ್ತದೆಯೆಂಬುದು ಸ್ಪಷ್ಟ. ಈ ಕಾರಣದಿಂದಾಗಿ ಇದನ್ನು ಅನ್ಯಭಾಷೆಯ ಪ್ರಭಾವದಿಂದಾದುದು ಎಂದು ಹೇಳುವುದು ಕಷ್ಟ. ಲೇಖಕರು ಹೇಳಿದಂತೆ ವಾಕ್ಯಗಳ ಸೇರ್ಪಡೆಯಿಂದಾದುದು ಎಂಬ ಮಾತನ್ನೂ ಸದ್ಯಕ್ಕೆ ಒಪ್ಪಲು ಸಾಧ್ಯವಾಗುತ್ತಿಲ್ಲ. ಇದೇ ಲೇಖನದಲ್ಲಿ ಷಷ್ಠೀ ಪ್ರತ್ಯಯ-ಅ ವು ವ್ಯಾವಹಾರಿಕ ಭಾಷೆಯಲ್ಲಿ ಶೂನ್ಯವಾಗುವುದ ರಿಂದಾಗಿ ಅದಕ್ಕೂ ಪ್ರಥಮ ಮತ್ತು ದ್ವಿತೀಯಕ್ಕೂ (ತೋರಿಕೆಗೆ) ವ್ಯತ್ಯಾಸವೇ ಗೊತ್ತಾಗುವುದಿಲ್ಲವೆಂದೂ ಇಂತಹ ಸಂದರ್ಭಗಳಲ್ಲಿ ಆ ರೂಪದ ಸ್ಥಾನ ಮತ್ತು ಅದರ ಮೇಲೆ ಬೀಳುವ ಒತ್ತು ಇವು ವಿಭಕ್ತಿಯನ್ನು ನಿರ್ಧರಿಸುತ್ತವೆಯೆಂದು ಹೇಳಿ, ಅದಕ್ಕೆ ಉದಾಹರಣೆಯಾಗಿ'

ಅವಳ್ ಬಂದ್ಲು (ಪ್ರ.)

(ನೀನ್) ಅವಳ್ ಕೇಳು (ದ್ವಿ)

ಅವಳ್ ಪುಸ್ತಕ (ಷ)

ಹಾಗೂ

ಅವಳ್ ದೆವ್ವ (ಪ್ರ)

ಅವಳ್ ದೆವ್ವ (ಷ)

ಎಂಬಿವುಗಳನ್ನು ಕೊಡಲಾಗಿದೆ. ಇವುಗಳಲ್ಲಿ ಮೊದಲ ವರ್ಗದ ಉದಾಹರಣೆಗಳಲ್ಲಿ ರೂಪದ ಸ್ಥಾನ ಮುಖ್ಯವಾಗುತ್ತದೆ ಎಂಬುದು ಸರಿಯೇ. ಆದರೆ ಎರಡನೇ ವರ್ಗದ ಉದಾಹರಣೆಗಳಲ್ಲಿ ವಿಭಕ್ತಿಯನ್ನು ನಿರ್ಧರಿಸುವುದು ಒತ್ತಲ್ಲ ; ಅದರ ಕಾಕು. ಒತ್ತು ಪ್ರತ್ಯಯಸೂಚಕವಲ್ಲ ಎಂಬುದನ್ನು ತೋರಿಸಲು ಕೆಳಗಿನ ರೂಪಗಳನ್ನು ಗಮನಿಸ ಬಹುದು :

ಅವಳ್ ನೆರಳು

ಅವಳ್ ನೆರಳು

ಇಲ್ಲಿ ಎರಡೂ ಕಡೆಗಳಲ್ಲಿ ಅವಳ್ ಎಂಬುದು ಷಷ್ಠೀ ವಿಭಕ್ತಿಯಲ್ಲಿಯೇ ಇವೆ. ಮೊದಲನೆ ಯದು 'ನೆರಳು ಅವಳದ್ದು' ಎಂಬರ್ಥವನ್ನೂ ಎರಡನೆಯದು 'ಅವಳಲ್ಲ ; ಅವಳ ನೆರಳು' ಎಂಬುದನ್ನೂ ಸೂಚಿಸುತ್ತದೆ. ಇದೇ ರೀತಿ 'ಅವಳ್ ದೆವ್ವ' ಎಂಬ ರೂಪದಲ್ಲಿ ಕಾಕು ಒಂದೇ ರೀತಿಯಾಗಿದ್ದು ಒತ್ತು ಮಾತ್ರ ಬೇರೆಯಾದಾಗ ಅವಳ್ ಎಂಬುದು ಎರಡೂ ಉದಾಹರಣೆಗಳಲ್ಲಿ ಷಷ್ಠ್ಯರ್ಥವನ್ನೇ ನೀಡುತ್ತದೆ. ಹಾಗಿಲ್ಲದೇ -'ಅವಳ್' ಪ್ರಥಮಾ ವಿಭಕ್ತಿಯನ್ನು ಹೇಳಬೇಕಿದ್ದರೆ ದೆವ್ವ ಎಂಬುದರ ಕೊನೆಯಲ್ಲಿ ವಾಕ್ಯಾಂತ್ಯ ದಲ್ಲಿಯಂತೆಯೇ ದನಿ ಪೂರ್ಣವಾಗಿ ಇಳಿಯಬೇಕು. ಅಂದರೆ, ಇಲ್ಲಿ 'ಅವಳ್ ದೆವ್ವ' ಎಂಬುದು ಒಂದು ವಾಕ್ಯದಂತೆ ಉಚ್ಚಾರಣೆಗೊಳ್ಳುತ್ತದೆ.

'ಱ್ : ಲಿಪಿಸಮಸ್ಯೆ ಮತ್ತು ಕೇಶಿರಾಜ' ಎಂಬ ಲೇಖನದಲ್ಲಿ ಱ್ ಸ್ವನದ ಉಚ್ಚಾರಣೆಯಲ್ಲಾದ ಬದಲಾವಣೆಯಿಂದಾದ ಗೊಂದಲಗಳನ್ನೂ ಪ್ರಾಸಸ್ಥಾನದಲ್ಲಿ ಈ ಉಚ್ಚಾರಣೆಯ ಗೊಂದಲವನ್ನು ಹೋಗಲಾಡಿಸಲು ಕೇಶಿರಾಜ ನೀಡಿದ ಸೂತ್ರ ವೊಂದರ ವಿವರಣೆಯನ್ನೂ ನೀಡಲಾಗಿದೆ. ವಿವರಣೆ ಸಾಕಷ್ಟು ಕಾವ್ಯ-ಶಾಸನಾಧಾರ ಗಳಿಂದ ಕೂಡಿದ್ದರಿಂದ ಇಲ್ಲಿ ಭಿನ್ನಾಭಿಪ್ರಾಯಕ್ಕೆ ಎಡೆಯಿಲ್ಲ. ಆದರೆ ಇಲ್ಲಿ ಪ್ರಾಸಂಗಿಕ ವಾಗಿ ಹೆಚ್. ಎಸ್. ಬಿಳಿಗಿರಿಯವರ ವಿವರಣೆಯನ್ನು ಉಲ್ಲೇಖಿಸುತ್ತಾ "ಕೇಶಿರಾಜ ನಿಷೇಧಿಸಿರುವುದು (ಬಿಳಿಗಿರಿಯವರು ಅಂದುಕೊಂಡಂತೆ) [ಱ್]ದಿಂದ ಬಂದಿರುವ [ರ್]ವನ್ನು [ಱ್] ಆಗಿ ಉಚ್ಚರಿಸುವುದೆದನ್ನಲ್ಲ ; [ಱ್]ದಿಂದ ಬಂದಿರದೆ ಸಹಜ ವಾಗಿಯೇ [ರ್] ಇರುವ ಕಡೆಯೂ [ಱ್] ಉಚ್ಚರಿಸುವುದನ್ನು...'ಅತಿಸಾಧು'ವಿನ ಬಗ್ಗೆ ಹೇಳುವಾಗ, ಯಾವ ಉಚ್ಚಾರವನ್ನು ಕೇಶಿರಾಜ ನಿಷೇಧಿಸಿದ್ದಾನೆ ಎಂಬುದನ್ನು ಹೇಳುವಲ್ಲಿ ಎಡವಿದ್ದಾರೆ" ಎನ್ನಲಾಗಿದೆ. (ಪು. 91) ವಾಸ್ತವವಾಗಿ ಬಿಳಿಗಿರಿಯವರು ಈ ಅಭಿಪ್ರಾಯವನ್ನು ಪ್ರತ್ಯೇಕವಾಗಿ ಹೇಳಿರದಿದ್ದರೂ ಅವರ ವಿವರಣೆ ಇದನ್ನೇ ಸೂಚಿಸುತ್ತದೆ. ಇಲ್ಲಿ 'ಅತಿಸಾಧು' (hyper correction) ಎಂಬ ಪದದ ಬಳಕೆಯೇ

ಮೂಲತಃ ಚಿ್ ದಿಂದ ಹುಟ್ಟಿದ ರ್/ಳ್‌ಗಳನ್ನು ಟ್ ವಾಗಿ ಉಚ್ಚರಿಸುವುದನ್ನಲ್ಲ; ಆದರೆ ಹಾಗಿರದ ರ್/ಳ್‌ಗಳನ್ನು ಟ್‌ವಾಗಿ ಉಚ್ಚರಿಸುವುದು ಎಂದೇ ಅರ್ಥ ವಲ್ಲವೇ ? ಹಾಗಿಲ್ಲದಿದ್ದಲ್ಲಿ ಇಲ್ಲಿ 'ಅತಿಸಾಧು' ಎಂಬ ಪದದ ಬಳಕೆ ತಪ್ಪಾಗುತ್ತದೆ. 'ಕನ್ನಡದ ಉಪಭಾಷೆಯೊಂದರಲ್ಲಿ ತಾಲವ್ಯೀಕರಣ ಮತ್ತು ಕಂಠ್ಯೀಕರಣ' ಎಂಬ ಲೇಖನ ಮುನ್ನುಡಿಕಾರರೆಂದಂತೆ ಶಕ್ತಿಯುತವಾದ ಲೇಖನ. ಈ ಗ್ರಂಥದ ಮಹತ್ವದ ಲೇಖನಗಳಲ್ಲಿ ಇದೊಂದು. ತಮಿಳು, ತೆಲುಗು ಭಾಷೆಗಳಲ್ಲಿಯಂತೆಯೇ ಕನ್ನಡದಲ್ಲಿಯೂ ತಾಲವ್ಯೀಕರಣ ಪ್ರಕ್ರಿಯೆ ಜರುಗಿದೆಯೆಂಬ ಹಾಗೂ ಇದು ಕನ್ನಡದಲ್ಲಿ (ನಿರ್ದಿಷ್ಟ ಪ್ರದೇಶದಲ್ಲಿ) ಆದ ಸ್ವತಂತ್ರ ಬೆಳವಣಿಗೆ ಎಂಬ ಸಂಗತಿಗಳನ್ನು ಮೊದಲ ಬಾರಿಗೆ ಈ ಲೇಖನ ತಿಳಿಸುತ್ತದೆ. ಆದರೂ ಇಲ್ಲಿಯ ಕೆಲವು ತೀರ್ಮಾನಗಳಿಗೆ ಪ್ರತಿಕ್ರಿಯೆ ಸಾಧ್ಯ ವೆನಿಸುತ್ತದೆ. ಹೊಳೆನರಸೀಪುರದ ಸುತ್ತಮುತ್ತಲಿನ ಪ್ರದೇಶದಲ್ಲಿ ಕಾಣಿಸಿಕೊಂಡ ಕ್/ಗ್→ಚ್/ಜ್ ಬದಲಾವಣೆ (ತಾಲವ್ಯೀಕರಣ) ಮೊದಲು ಆ ಭಾಗದ ಸಮಾಜದ ಎಲ್ಲ ಭಾಗಗಳಲ್ಲಿಯೂ ನಡೆದಿದ್ದು ಕ್ರಮೇಣ ತಾಲವ್ಯೀಕೃತ ರೂಪಗಳು ಇತರ ಸಮಾಜಗಳಲ್ಲಿ (ವಿದ್ಯಾವಂತರಾದಂತೆ) ಕಾಣೆಯಾಗಿ ಹರಿಜನರಲ್ಲಿ ಮಾತ್ರ ಉಳಿದುಕೊಂಡಿದೆ ಎಂಬ ತೀರ್ಮಾನವನ್ನು ಕೈಕೊಳ್ಳಲಾಗಿದೆ. ಇದು ಅಸಾಧ್ಯವೇನೂ ಅಲ್ಲದಿದ್ದರೂ ಇದನ್ನೊಪ್ಪಲು ಆಧಾರ ಸಾಲದು. ಬದಲಾಗಿ ಅಸ್ಪೃಶ್ಯರೆನಿಸಿದ ಹರಿಜನರಲ್ಲಿ ಮಾತ್ರವೇ ಇದು ಜರುಗಿದ್ದರೆ ಆಶ್ಚರ್ಯವೇನಿಲ್ಲ. ಹೆಚ್ಚೆಂದರೆ ಬ್ರಾಹ್ಮಣೇತರ ರಲ್ಲಿ ಇದು ಕಾಣಿಸಿಕೊಂಡಿರಬಹುದು. ಮೇಲ್ವರ್ಗಗಳಲ್ಲಿಯೂ ಇದು (ಹಿಂದೆಯೇ) ನಡೆದಿದ್ದರೆ ಶಾಸನಗಳ ಭಾಷೆಯಿಂದ ತಿಳಿದುಬರುವ ಸಂಭವವಿತ್ತು. ಹಾಗಿಲ್ಲದೇ ಇದು ಮೇಲ್ವರ್ಗಗಳಲ್ಲಿ ತೀರ ಇತ್ತೀಚೆಗೆ (ಸು. ನೂರು ವರ್ಷಗಳೀಚೆಗೆ) ಕಾಣಿಸಿ ಕೊಂಡಿದ್ದರೆ ಈ ಬದಲಾವಣೆ ಈಗ ಸಂಪೂರ್ಣವಾಗಿ ಅಳಿಸಿಹೋಗಿರುವ ಪೂರ್ವದಲ್ಲಿ ಅತಿಸಾಧುವಾದ ಉಚ್ಚಾರಣೆಯೊಂದು ಕಾಣಿಸಿಕೊಂಡು ಬರೆಹಗಳಲ್ಲಿ ಅದು ವ್ಯಕ್ತ ವಾಗಿರಬೇಕು. (ಧ್ವನಿ ಬದಲಾವಣೆಯೊಂದು ಸಂಪೂರ್ಣವಾಗಿ ನಡೆಯಲು ಮೂವತ್ತು ವರ್ಷಗಳಾದರೂ ಬೇಕೆಂದು ಲ್ಯಬೋವ್ ಹೇಳುತ್ತಾರೆ. ಅದನ್ನು ತಿದ್ದುವ ಅತಿಸಾಧು ವಾದ ಉಚ್ಚಾರಣೆಯ ಕಾಲವೂ ಸುಮಾರು ಅಷ್ಟೇ ವರ್ಷಗಳ ಕಾಲ ರೂಢಿಯಲ್ಲಿರು ತ್ತದೆಂದು ಭಾವಿಸಬಹುದು.) ಆದ್ದರಿಂದ ಮೇಲ್ವರ್ಗದಲ್ಲಿ ಈ ಬದಲಾವಣೆ ನಡೆ ದಿದ್ದರೆ ಶಾಸನಗಳ ಕಾಲದ ನಂತರ (ಸು. 18ನೇ ಶತಮಾನ) ಹಾಗೂ ಸುಮಾರು ನೂರು ವರ್ಷಗಳ ಹಿಂದೆ ಎಂದು ಭಾವಿಸಬೇಕು. ಇದಕ್ಕೆ ಆಧಾರಗಳಿಲ್ಲ. ಇದೇ ಪ್ರದೇಶದಲ್ಲಿ ತಾಲವ್ಯೀಕರಣ ಪ್ರಕ್ರಿಯೆಗೆ ವಿರುದ್ಧವಾಗಿ ಕಂಠ್ಯೀಕರಣ ಪ್ರಕ್ರಿಯೆಯೂ (ಚ್/ಜ್ > ಕ್, ಗ್) ಸೀಮಿತ ಪ್ರದೇಶದಲ್ಲಿ ಹಾಗೂ ಸೀಮಿತ ಪ್ರಮಾಣದಲ್ಲಿ ನಡೆದಿದೆಯೆಂಬ ಹೇಳಿಕೆಯನ್ನೂ ಒಪ್ಪಲು ನನಗೆ ಸಾಧ್ಯವಾಗುತ್ತಿಲ್ಲ. ಈ ಹಿಮ್ಮುಖ ಬದಲಾವಣೆಯನ್ನು ಅಸಾಧ್ಯ ಎಂದು ಒಮ್ಮೆಲೇ ಹೇಳಲಾಗದಿದ್ದರೂ ಇದರ ಸತ್ಯಾ ಸತ್ಯತೆಯನ್ನು ತಿಳಿಯಲು ಲೇಖನದಲ್ಲಿ ಕೊಟ್ಟಿರುವ ವಿವರಗಳು ಸಾಲದು ಎಂದಷ್ಟೇ

ಹೇಳಬಹುದು. ಈ ಭಾಗದ ಹರಿಜನರು ವಿದ್ಯಾವಂತರಾಗುತ್ತಿದ್ದಂತೆಲ್ಲ ಅಥವಾ ಮೇಲ್ವರ್ಗದ ಸಂಪರ್ಕದೊಂದಿಗೆ ಶಿಷ್ಟಭಾಷೆಯ ಸಂಪರ್ಕ ಹೊಂದುತ್ತಿದ್ದಂತೆಲ್ಲ (ತಾಲವ್ಯೀಕೃತ ರೂಪಗಳಿಲ್ಲದ) ಶಿಷ್ಟಭಾಷೆಯನ್ನನುಕರಿಸುತ್ತಾ ತಮ್ಮ ಭಾಷೆಯ ತಾಲವ್ಯೀಕೃತರೂಪಗಳಲ್ಲಿ ಪುನಃ ಕಂಠ್ಯಸ್ವನಗಳನ್ನು ಇಡಲು ಪ್ರಯತ್ನಿಸುತ್ತಿದ್ದಾರೆ. ಅದರ ಫಲವಾಗಿ ಕಂಡುಬರುವ ಅತಿಸಾಧುವಾದ ಉಚ್ಚಾರಣೆಗಳೇ (hyper correction ) ಈ ಕಂಠ್ಯಸ್ವನಗಳನ್ನು ಆರೋಪಿಸಲು ಕಾರಣ ಎಂದು ನನ್ನ ಊಹೆ. ಕಂಠ್ಯೀಕರಣ ಒಂದು ಧ್ವನಿಬದಲಾವಣೆಯ ಪ್ರಕ್ರಿಯೆಯಾಗಿ ಆವರಿಸುವುದಕ್ಕೂ ಅತಿಸಾಧುವಾದ ಉಚ್ಚಾರಣೆಯಾಗಿ ಕಾಣಿಸಿಕೊಳ್ಳುವುದಕ್ಕೂ ವ್ಯತ್ಯಾಸಗಳಿವೆ. ಅತಿ ಸಾಧುವಾದ ಉಚ್ಚಾರಣೆ ಎಚ್ಚರದಿಂದಲೇ ಘಟಿಸುವಂಥದು. ಆದ್ದರಿಂದ ಇದು ಅನೌಪಚಾರಿಕ-ಔಪಚಾರಿಕ ಸಂದರ್ಭಗಳಲ್ಲಿ ಸಂದರ್ಭೋಚಿತವಾಗಿ (Context wise) ಬೇರೆ ಬೇರೆ ಪ್ರಮಾಣದಲ್ಲಿ ಕಾಣಿಸಿಕೊಳ್ಳುವಂಥದು. ಹಾಗೂ ಇದು ಹಿಂದೆ ಆದ ಬದಲಾವಣೆಯೊಂದನ್ನು ಅಳಿಸುವ ಮುನ್ಸೂಚನೆಯಾಗಿ ಕಾಣಿಸಿಕೊಳು ತ್ತದೆಯೆಂದು ಲ್ಯಬೋವ್ ಹೇಳುತ್ತಾರೆ. ಉದಾಹರಣೆಗೆ, ಪ್ರಕೃತ ಸಂದರ್ಭದಲ್ಲಿ ತಾಲವ್ಯೀಕೃತರೂಪಗಳು 'ಅಶುದ್ಧ'ವೆಂಬ ಕಾರಣದಿಂದ ಅವುಗಳನ್ನು ಕಳೆದುಕೊಳ್ಳು ತ್ತಿದ್ದಾರೆಂಬುದನ್ನು ಕಂಠ್ಯೀಕೃತರೂಪಗಳು ಹೇಳುತ್ತಿವೆ. ಮೇಲ್ವರ್ಗಗಳ ಕಡೆಗೆ ಚಲಿಸುತ್ತಿರುವ ಸಮಾಜಗಳಲ್ಲಿ ಇದು ಹಾಗೂ ಇದೊಂದೇ ಸಹಜವಾದ ಬದಲಾ ವಣೆಯ ರೀತಿ. ಹಾಗಿಲ್ಲದೇ ಕಂಠ್ಯೀಕರಣವೆನ್ನುವುದು ಒಂದು ಪ್ರತ್ಯೇಕ ಪ್ರಕ್ರಿಯೆ ಯಾಗಿದ್ದಲ್ಲಿ ಅದು ಎಚ್ಚರಪೂರ್ವಕವಾಗಿ ನಡೆಯುತ್ತಿರಲಿಲ್ಲ ಹಾಗೂ ಅದು ತಾಲವ್ಯೀ ಕರಣ ಪ್ರಕ್ರಿಯೆಯನ್ನು ಅಳಿಸುವ ಕಾರ್ಯದಲ್ಲಿ ತೊಡಗುವುದಿಲ್ಲ ಹಾಗೂ ಕಂಠ್ಯೀಕೃತ ರೂಪಗಳು ಈಚಿನ ಪೀಳಿಗೆಯವರಿಂದಲೂ ಸಹಜವೆಂಬಂತೆ ಸ್ವೀಕಾರಾರ್ಹವಾಗಿರ ಬೇಕು. (ಸಾಮಾನ್ಯವಾಗಿ (ವಿಶಿಷ್ಟ ಕಾರಣಗಳಿಲ್ಲದಿದ್ದರೆ) ಮೇಲ್ಮುಖ ಚಲನೆಯುಳ್ಳ ಸಮಾಜದಲ್ಲಿ ಇವು ಸಾಧ್ಯವೇ ಇಲ್ಲ). ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದಂತೆ ಕಂಠ್ಯೀ ಕರಣ ಎನ್ನುವುದು ಅತಿಸಾಧುವಾದ ಉಚ್ಚಾರಣೆಯ ಫಲವೇ ಅಥವಾ ಒಂದು ಪ್ರತ್ಯೇಕ ಪ್ರಕ್ರಿಯೆಯೇ ಎಂಬುದನ್ನು ತಿಳಿದುಕೊಳ್ಳಲು ಈ ವಿವರಗಳು ಅವಶ್ಯ: (1) ಸ್ತ್ರೀ ಹಾಗೂ ಪುರುಷರಲ್ಲಿ, ಹಾಗೂ ಬೇರೆ ಬೇರೆ ವಯೋಮಿತಿಯ (ಹರಿಜನ) ವರ್ಗಗಳಲ್ಲಿ ಕಾಣಿಸಿಕೊಳ್ಳುವ ಕಂಠ್ಯೀಕರಣದ ಪ್ರಮಾಣವೇನು ? (2) ಕಂಠ್ಯೀಕೃತಗೊಳ್ಳುವ ಎಲ್ಲ ರೂಪಗಳೂ ಎಲ್ಲ ಸಂದರ್ಭಗಳಲ್ಲಿಯೂ ಕಂಠ್ಯೀಕೃತ ವಾಗಿಯೇ ಉಚ್ಚಾರಣೆಗೊಳ್ಳುತ್ತದೆಯೇ? ಅಥವಾ ಸಂದರ್ಭದ ಔಪಚಾರಿಕತೆ (formality) ಹೆಚ್ಚಾದಂತೆ ಕಂಠ್ಯೀಕರಣದ ಪ್ರಮಾಣ ಹೆಚ್ಚಾಗುತ್ತದೆಯೇ ? ಈ ಸಾಮಾಜಿಕ ಭಾಷಾವಿಜ್ಞಾನದ ಚೌಕಟ್ಟಿನಲ್ಲಿ ಮಾತ್ರ ಈ ಧ್ವನಿ ಬದಲಾವಣೆಯ ಸ್ವರೂಪವನ್ನು ತಿಳಿಯುವುದು ಸಾಧ್ಯ. (ಪ್ರಾಸಂಗಿಕವಾಗಿ ಇಲ್ಲಿ ಇನ್ನೊಂದೆರಡು ಮಾತುಗಳನ್ನು ಸೇರಿಸಬಹುದು. ತಾಲವ್ಯೀಕರಣವು ಮೇಲ್ವರ್ಗದಿಂದ ಅಂಗೀಕೃತವಾದ ತಮಿಳು, ತೆಲುಗು ಭಾಷೆಗಳಲ್ಲಿ ಕಂಠ್ಯೀಕರಣವಾದ ವರದಿಗಳು ಬಂದಿಲ್ಲವೆಂಬುದನ್ನೂ ಮೇಲ್ವರ್ಗದಲ್ಲಿ ಇದು ಇಲ್ಲದ ಕನ್ನಡ ಸಮಾಜದಲ್ಲಿ ಮಾತ್ರ ಕಂಠ್ಯೀಕೃತ ರೂಪಗಳು

ದೊರೆಯುತ್ತವೆಯೆಂಬುದನ್ನೂ ಗಮನಿಸಬೇಕು. ತಾಲವ್ಯೀಕರಣವು ಇಲ್ಲಿ ಕೆಳವರ್ಗ ದಲ್ಲಿ ಮಾತ್ರವೇ ಇರುವುದರಿಂದ ಸಹಜವಾಗಿಯೇ ಅತಿಸಾಧುವಾದ ಉಚ್ಚಾರಣೆ ಯನ್ನು ನಿರೀಕ್ಷಿಸಬಹುದು. ಮೇಲೆ 'ಮೇಲ್ವರ್ಗದಿಂದ ಅಂಗೀಕೃತವಾದ' ಎಂದು ಬಳಸಿದ ಮಾತು ತಾಲವ್ಯೀಕರಣ ಕೆಳವರ್ಗದಲ್ಲಿಯೇ ಮೊದಲು ಉಂಟಾಯಿತೆಂಬ ಅರ್ಥವನ್ನೂ ಕೊಡುತ್ತದೆ. ಆದರೆ ವಾಸ್ತವವಾಗಿ ಹೀಗೇ ಆಗಿರಬೇಕಿಲ್ಲ).

ಚಿ. ರಾಮಸ್ವಾಮಿಯವರ 'ಕನ್ನಡ ಭಾಷಾನುಯೋಗ'ವೆಂಬುದು ಕನ್ನಡ ಭಾಷೆಗೆ ಸಂಬಂಧಿಸಿದ ಏಳು ಲೇಖನಗಳ ಸಂಕಲನ. 'ಕನ್ನಡ ಭಾಷೆಯ ಅಧ್ಯಯನ' ಎಂಬ ಲೇಖನದಲ್ಲಿ ನ್ನಡ ಭಾಷೆಯನ್ನು ಕುರಿತು ಈವರೆಗೆ ಆದ ಕಾರ್ಯಗಳ ಸಂಕ್ಷಿಪ್ತ ಇತಿಹಾಸವಿದೆ. ಪರಿಚಯಾತ್ಮಕವಾದ ಲೇಖನವಿದು. ಇದರಲ್ಲಿ ವ್ಯಾಕರಣ ಕೃತಿಗಳನ್ನು ಹೆಸರಿಸುವಾಗ ಈಚಿನ ಮರುಮುದ್ರಣದ ವರ್ಷಗಳನ್ನು ಉಲ್ಲೇಖಿಸಲಾಗಿದೆ. ಇತಿಹಾಸವನ್ನು ಪರಿಚಯಿಸುವಾಗ ಮೊದಲ ಪ್ರಕಟಣೆಯ ವರ್ಷವನ್ನೇ ಹೆಸರಿಸ ಬೇಕು. ಅನುಬಂಧದಲ್ಲಿಯೂ ಮೊದಲ ಪ್ರಕಟಣೆಯ ವರ್ಷ, ಅನಂತರ ಮರು ಪ್ರಕಟಣೆಗಳನ್ನು ಉಲ್ಲೇಖಿಸಬೇಕು. ಹಾಗಿಲ್ಲದಿದ್ದಲ್ಲಿ ಗೊಂದಲ ತಪ್ಪಿದ್ದಲ್ಲ. ಉದಾ. ಪು. 3ರಲ್ಲಿ ಕಾಲ್ಡ್‌ವೆಲ್ಲ್‌ನ ಕೃತಿಯ ಕಾಲ 1913 ಎಂದಿದೆ. 'ಗ್ರಂಥ ಸೂಚಿಯಲ್ಲಿ' ಅದು 1974 ಎಂದು ನಮೂದಾಗಿದೆ. ಇದೇ ಪ್ರಮಾದ ಇತರೆಡೆಗೂ ಆಗಿದೆ. 'ಕನ್ನಡದಲ್ಲಿ ಸರ್ವನಾಮಪ್ರತ್ಯಯಗಳು' ಎಂಬ ಲೇಖನದಲ್ಲಿ ಸರ್ವನಾಮ ಪ್ರತ್ಯಯ ವನ್ನು ಆಧರಿಸಿ ಕನ್ನಡದ (ಸಾಮಾಜಿಕ ಹಾಗೂ ಭೌಗೋಲಿಕ) ಉಪಭಾಷೆಗಳನ್ನು ವಿಂಗಡಿಸಿಕೊಡಲು ಪ್ರಯತ್ನಿಸಿದೆ. ಇದರಲ್ಲಿ ತೌಲನಿಕ ವಿವೇಚನೆಯ ಜೊತೆಗೆ ಐತಿಹಾಸಿಕ ವಿವರಣೆಯನ್ನೂ ಕೊಡುತ್ತಾರೆ. ಇದರ ಉದ್ದೇಶ ಅರ್ಥವಾಗದು. ಹೊಸಗನ್ನಡದ–ಏನೆ (ಹೋಗುತ್ತೇನೆ, ಮಾಡುತ್ತೇನೆ ಇತ್ಯಾದಿಗಳಲ್ಲಿರುವ) ಎಂಬ ಪ್ರತ್ಯಯಕ್ಕೆ ಸಂಬಂಧಿಸಿದಂತೆ ಲೇಖಕರು ಅನುಸರಿಸುವ (?) ಏನೆ < ಈನೆ < ಈ + ಎನ್ < ಇಹ್-ಎನ್ < ಇಪ್ಪ್-ಎನ್ < ಇರ್—ಪ್—ಎನ್ ಎಂಬ ವಿವರಣೆಯನ್ನು ಒಪ್ಪುವುದು ಕಷ್ಟವೆನಿಸುತ್ತದೆ. 'ಕನ್ನಡದಲ್ಲಿ ಸಹಾಯಕ ಕ್ರಿಯಾಪದಗಳು' ಹಾಗೂ 'ಕನ್ನಡದಲ್ಲಿ ಭಾವರೂಪ' ಎಂಬಿವು ರಚನಾಂತರ ಪದ್ಧತಿಯನ್ನನು ಸರಿಸಿ ಮಾಡಿದ ವಿಶ್ಲೇಷಣೆಗಳೆನ್ನಲಾಗಿದೆ. (ಪು. 28ರಲ್ಲಿ 'ರೂಪಾಂತರ ವ್ಯಾಕರಣ' ಎಂದೂ ಬಳಸಲಾಗಿದೆ. ರಚನಾಂತರ = ರೂಪಾಂತರ?) 'ಉಂಟು' ಎಂಬುದನ್ನು ('ನಾನು ತಿಂದದ್ದು ಉಂಟು' ಎಂಬಲ್ಲಿ) ಸಹಾಯಕ ಕ್ರಿಯಾಪದವೆಂದಿದೆ. ನನಗೆ ತಿಳಿದ ಮಟ್ಟಿಗೆ ಇದು ಸಹಾಯಕ ಕ್ರಿಯಾಪದವೆನಿಸಿಕೊಳ್ಳದು. ಲೇಖನದಲ್ಲಿ '-ಬಹುದು' ಎಂಬ ಸ್ಥಿತಿಸೂಚಕದ ವಿವರಣೆ ಬಿಟ್ಟರೆ ಸಹಾಯಕ ಕ್ರಿಯಾಪದಗಳ ವಿವೇಚನೆ ಏನೂ ಇಲ್ಲ. ಆದ್ದರಿಂದ ಲೇಖನ ಅಸಮಗ್ರವಾಗಿದೆ. ಈ ಲೇಖನದಲ್ಲಿ (ಪು. 30) 'ಬಂದಾನು' ಎಂಬುದಕ್ಕೆ ಕಿಟ್ಟೆಲ್ಲರ ಬಂದಪನ್ > ಬಂದಹನ್ > ಬಂದಾನು ಎಂಬ ನಿಷ್ಪತ್ತಿಯನ್ನು ಅಲ್ಲಗಳೆದು 'ಅಪ–' ಅಥವಾ –'ಅಪ್ಪ' ಎಂದು ಕಾಲಪ್ರತ್ಯಯಯವನ್ನು (?) ತೆಗೆದು ಕೊಂಡು' (—ಕಾಲಪ್ರತ್ಯಯವಾಗಿ ಪರಿಗಣಿಸಿ?) ಬಂದ್ + ಅಪ್ಪನ್ > ಬಂದ್—

ಅಪ್ಪನ್ > ಬಂದ್ + ಅಹನ್ > ಬಂದ್–ಹಾನ್ > ಬಂದ್—ಆನ್ (ಉ) ಎಂಬ ನಿಷ್ಪತ್ತಿಯನ್ನು ಹೇಳಲಾಗಿದೆ. ಇಲ್ಲಿ ಅಹನ್ > ಹಾನ್ ಎಂಬ ವಿವರಣೆ ಅನವಶ್ಯಕ, ಉಳಿದಂತೆ ಇದು ಕಿಟ್ಟೆಲ್‌ರವರ ವಿವರಣೆಗಿಂತ ಬೇರೆಯಲ್ಲ. 'ಕನ್ನಡದಲ್ಲಿ ಭಾವರೂಪ' ಎಂಬ ಲೇಖನದಲ್ಲಿ ಕನ್ನಡದ –ಅ(ಲ್)–ಎ. ಎಂಬ ಭಾವರೂಪ ಪ್ರತ್ಯಯವನ್ನು ಕುರಿತು ಪ್ರಾಚೀನ ಹಾಗೂ ಆಧುನಿಕ ವೈಯ್ಯಾಕರಣರ ಅಭಿಪ್ರಾಯಗಳನ್ನು ಮಂಡಿಸಿ -ಎ ಪ್ರತ್ಯಯ ಬಳಕೆಯಾದ ರೂಪಗಳನ್ನು (ಉದಾ-ಪಾಡೆ, ಕೇಳೆ) ಪ್ರಾಚೀನ ವೈಯ್ಯಾಕರಣರು ಸತಿಸಪ್ತಮಿ ಎಂದು ಕರೆದದ್ದನ್ನು ತಿರಸ್ಕರಿಸಿದ್ದಾರೆ. ಈ ಸಂದರ್ಭದಲ್ಲಿ ಚೆನ್ನಕೇಶವ ಅಯ್ಯಂಗಾರರ "ಸಂಸ್ಕೃತದ ಸತಿಸಪ್ತಮಿಗೂ ಕನ್ನಡದ ಸತಿಸಪ್ತಮಿಗೂ ಬಹಳ ವ್ಯತ್ಯಾಸವಿದೆ" ಎಂಬ ಮಾತನ್ನು ಅಲ್ಲಗಳೆದಿರುವುದು (ಪು. 41) ಸರಿಯೆನಿಸದು. ಹಾಗೆಯೇ ಭಾವರೂಪಸಹಿತ ರಚನೆಗಳಾದ 'ಬರಲಿಲ್ಲ', 'ಹೋಗಲಿಲ್ಲ', 'ಬರುವುದಿಲ್ಲ', 'ಹೋಗುವುದಿಲ್ಲ' ಎಂಬವುಗಳಲ್ಲಿ ಕೊನೆಯೆರಡರಲ್ಲಿ ಕಾಲಾರ್ಥಹೀನ ಪ್ರತ್ಯಯಗಳಿವೆ ಯೆಂಬುದೂ ಮೊದಲೆರಡಲ್ಲಿ ಪ್ರತ್ಯಯಹೀನ ಕಾಲಸೂಚಕಗಳಿದ್ದು, 'ಇಲ್ಲ' ಎಂಬುದ ರಲ್ಲಿಯೇ ಭೂತಕಾಲಾರ್ಥವಡಗಿದೆಯೆನ್ನುವುದೂ (ಪು. 41) ತಪ್ಪು. ಈ ಲೇಖನಕ್ಕೆ ನಿರ್ದಿಷ್ಟವಾದ ಉದ್ದೇಶವಿದೆಯೆಂದು ಅನಿಸದು. 'ಕನ್ನಡದ ಉಪಭಾಷೆಗಳಲ್ಲಿ ವಿಭಕ್ತಿ-ಒಂದು ಅಭ್ಯಾಸ' ಎಂಬುದು ಕನ್ನಡದ ವಿವಿಧ ಉಪಭಾಷೆಗಳಲ್ಲಿಯ ವಿಭಕ್ತಿ-ಪ್ರತ್ಯಯ ಗಳನ್ನು ಕುರಿತ ಒಂದು ತೌಲನಿಕ ವಿವೇಚನೆ. (ಪ್ರಥಮಾ ವಿಭಕ್ತಿ ಪ್ರತ್ಯಯ ಎಂದಿದೆ. ಪ್ರಥಮಾ ಪ್ರತ್ಯಯ ಇಲ್ಲವೆಂದು ಹೇಳುವುದು ಸೂಕ್ತ.) ತೃತೀಯಾರ್ಥದಲ್ಲಿ ಹವ್ಯಕ ರಲ್ಲಿ 'ಇಂದ'ಕ್ಕೆ ವಿಕಲ್ಪವಾಗಿ 'ಇಂದಾಗಿ' ರೂಪದ ಬಳಕೆಯಿದೆ ಎಂದಿದೆ. ಉದಾ ಹರಣೆಯಿಲ್ಲ. "ವಿಭಕ್ತಿಗಳನ್ನು ಅವುಗಳ ಕ್ರಿಯೆಯಿಂದ ಗುರುತಿಸಲಾಗುತ್ತದೆಯೇ ವಿನಾ ಪ್ರತ್ಯಯಗಳ ಧ್ವನಿಮಾರೂಪದಿಂದ ಅಲ್ಲ" (ಪು. 44) ಎನ್ನಲಾಗಿದೆ. ಇದು ಸರಿಯಲ್ಲ. 'ಮಧುರೈ ಕನ್ನಡ'ದಲ್ಲಿ ಅಲ್ಲಿಯ ಕನ್ನಡ ಭಾಷೆಯ ಸಂಕ್ಷಿಪ್ತ ವರ್ಣನೆಯಿದೆ. 'ಕನ್ನಡ ಪ್ರಾದೇಶಿಕ ಉಪಭಾಷೆಗಳು'–ಒಂದು ಪರಿಚಯಾತ್ಮಕ ಹಾಗೂ ತೌಲನಿಕವಾದ ಸಂಗ್ರಹಲೇಖನ.

ಈ ಕೃತಿಯ ಮುಖ್ಯ ಕೊರತೆ ಲೇಖನಗಳ ನಿರ್ದಿಷ್ಟ ಉದ್ದೇಶಕ್ಕೆ ತಕ್ಕಂತೆ ವ್ಯವಸ್ಥಿತವಾಗಿ ಸಾಮಗ್ರಿಯನ್ನು ಬಳಸಿಕೊಳ್ಳದಿರುವುದು ಹಾಗೂ ವಿವರಣೆ ಕೊಡ ದಿರುವುದು. ಪಾರಿಭಾಷಿಕ-ಪದಗಳಿಗೆ ಸಂಬಂಧಿಸಿದಂತೆ (ಪ್ರಕೃತಿ, ಪ್ರಾತಿಪದಿಕ-, ಕ್ರಿಯಾಪದ) ಅನೇಕ ಕಡೆ ಸರಿಯಾದ ಬಳಕೆ ಇಲ್ಲವೆಂದೂ ಹೇಳಬೇಕು. ಉಳಿದಂತೆ ಲೇಖನಗಳು ಭರವಸೆಯನ್ನು ಮೂಡಿಸುತ್ತವೆ.

ಪಿ. ಶಿವಾನಂದರ 'ಭಾಷಾವೈಜ್ಞಾನಿಕ ನೆಲೆಯಲ್ಲಿ ಪದಗಳ ಚರಿತ್ರೆ' ಮುಖ್ಯ ವಾಗಿ ಕನ್ನಡ ಭಾಷೆಯನ್ನು ಗಮನದಲ್ಲಿಟ್ಟುಕೊಂಡು ಪದಗಳ ವರ್ಣನಾತ್ಮಕ ವಿವರಣೆ, ಐತಿಹಾಸಿಕ ವಿವರಣೆಗಳನ್ನು ಕೊಡಲಾಗಿದೆ. 'ಪದಗಳ ರಚನಾತ್ಮಕ ವಿಶ್ಲೇಷಣೆ', ಪದಗಳ ವರ್ಗೀಕರಣ', 'ಪದಗಳ ಪರಿವರ್ತನೆ', 'ಧ್ವನಿವ್ಯತ್ಯಾಸಗಳು', ಆಕೃತಿಮಾತ್ಮಕ ಅರ್ಥವ್ಯತ್ಯಾಸಗಳು', 'ಸ್ವೀಕರಣ ಪದಗಳು', 'ಬಹ್ವರ್ಥಕ ಪದಗಳು,' 'ಕೆಲವು

ಪದಗಳ ಭಾಷಾಚರಿತ್ರಾತ್ಮಕ ವ್ಯುತ್ಪತ್ತಿನಿಯಮಗಳು' ಎಂಬಿತ್ಯಾದಿ ಒಳಶೀರ್ಷಿಕೆಗಳು .ಈ ಕೃತಿಯ ಸ್ವರೂಪವನ್ನು ತಕ್ಕಮಟ್ಟಿಗೆ ಹೇಳಬಹುದು. ಒಟ್ಟಿನಲ್ಲಿ ಪದಕ್ಕೆ ಸಂಬಂಧಿಸಿದಂತೆ ಯಾವ ಯಾವ ನಿಟ್ಟಿನಿಂದ ಹೇಳಬಹುದೋ ಅವೆಲ್ಲವನ್ನೂ ಇಲ್ಲಿ ಒಳಗೊಂಡಿದೆ. ವಿದ್ಯಾರ್ಥಿಗಳನ್ನು ಗಮನಿಸಿ ಬರೆಯಲಾಗಿದೆಯೆಂಬುದು ಕೃತಿಯ ವಿವರಗಳಿಂದಲೂ ಲೇಖಕರ 'ಅರಿಕೆ'ಯಿಂದಲೂ ಸ್ಪಷ್ಟವಾಗುತ್ತದೆ. ಕೃತಿಯಲ್ಲಿ ಭಾಷೆಯನ್ನು ಬಳಸುವಲ್ಲಿ ಎಚ್ಚರವಿಲ್ಲವೆಂಬುದು ಅನೇಕ ಕಡೆಗಳಲ್ಲಿ ತಿಳಿಯುತ್ತದೆ. ಇನ್ನು ಹಲವಾರು ಕಡೆ ಭಾಷೆ ಅಸ್ಪಷ್ಟವಾಗಿದ್ದು ಅವುಗಳ ಅರ್ಥವನ್ನು ಗ್ರಹಿಸುವುದೇ ಕಷ್ಟ. ಉದಾಹರಣೆಗೆ, ಪು. 36ರಲ್ಲಿ "ಇನ್ನೂ ಹಲವಾರು ನಿಯಮಗಳನ್ನು ನಾವು ಸಮಾಸಗಳಲ್ಲೂ ಹಾಗೂ ಸಂಧಿನಿಯಮಗಳಲ್ಲೂ ಕಂಡುಕೊಳ್ಳಬಹುದು. ಕ್‌ತ್‌ಪ್/ಗ್‌ದ್‌ಬ್/ಪ್‌ಬ್‌ಮ್/ವ್, ಮುಂ. ನಿಯತಧ್ವನಿಗಳ ಒಟ್ಟೂ ತತ್ವವೆಂದರೆ ಇವು ಪದದಲ್ಲಿನ ಪರಿಸರದ ಧ್ವನಿಗಳಿಂದ ನಿಯಮಿತವಾಗುತ್ತದೆ. ಅಥವ ಅದರ ಪರಿಣಾಮದಿಂದ ಇವು ನಿರ್ದಿಷ್ಟ ಉಪಧ್ವನಿಗಳೆನ್ನಿಸಿಕೊಳ್ಳುತ್ತವೆ." ಎಂಬ ಮಾತುಗಳನ್ನು ನೋಡಬಹುದು. ಗ್ರಂಥದಲ್ಲಿ ಕೊಟ್ಟಿರುವ ಅನೇಕ ವಿವರಣೆಗಳನ್ನು ಒಪ್ಪವುದು ಕಷ್ಟ. (ಉದಾ : ಇರ್—ಉಳ್ (ಸಪ್ತಮೀ ಪ್ರತ್ಯಯ)—ಇರುಳ್ ; ಇರುಳ್+ಪನಿ—ಇಬ್ಬನಿ. (ಪು. 43) ; ಸದೃಶಾಕ್ಷರ ಲೋಪಕ್ಕೆ ಉದಾಹರಣೆಮಾಗಿ ಕೂಡಿ+ಇಡು—ಕೂಡಿಡು : ಚೆನ್ನಪ್ಪ+ಪಟ್ಟಣ→ಚೆನ್ನಪಟ್ಟಣ (ಪು. 53) ; ಆಕೃತಿಯಾತ್ಮಕ ಅರ್ಥ ವ್ಯತ್ಯಾಸಕ್ಕೆ ಉದಾಹರಣೆಯಾಗಿ (ಪಚ್ >) ಪನ್+ನೀರ್→ಪನ್ನೀರು (ಪು. 68) ಇತ್ಯಾದಿ. ಇತ್ಯಾದಿ.) ಅಡಿಗಡಿಗೂ ಎದುರಾಗುವ ಅಚ್ಚಿನ ತಪ್ಪುಗಳು ಬೇಸರಕ್ಕೆ ಕಾರಣವಾಗುತ್ತದೆ. ಇಂಗ್ಲಿಷ್ ಪದಗಳಲ್ಲಿ ಉದ್ದಕ್ಕೂ ಕಂಡುಬರುವ ಸ್ಪೆಲ್ಲಿಂಗ್ ತಪ್ಪುಗಳು ಕೇವಲ ಅಚ್ಚಿನ ತಪ್ಪುಗಳಲ್ಲ ; ಲೇಖಕರಿಂದಾಗಿಯೇ ಆದದ್ದು ಎಂಬುದು ಸ್ಪಷ್ಟ. ಅಡಿಟಿಪ್ಪಣಿಯಲ್ಲಿ ಕೃತಿ, ಲೇಖಕರ ಹೆಸರನ್ನು ಕೊಡುವ ಕ್ರಮವೂ ತೀರ ಅಸಮರ್ಪಕವಾದದ್ದು. ನಿದರ್ಶನವಾಗಿ ಈ ಉದಾಹರಣೆಗಳನ್ನು ನೋಡಬಹುದು : "ವಿಶೇಷಕ್ಕೆ : Dr. Bh. Krishnamurti, Telugu Vererbal ses. p. III. (1961) (ಪು. 24ರಲ್ಲಿ), Ulamann, Principles 171/1959 (ಪು. 64ರಲ್ಲಿ), ಡಾ|| ಎಂ. ಚಿದಾನಂದಮೂರ್ತಿ, ಕ.ಭಾ.ವಿ.ಮೂ. ಪು. 75 ಪು. ಡಿ.ವಿ.ಕೆ. ಮೂರ್ತಿ, (ಪು. 72ರಲ್ಲಿ), Sturtevant I. L. S. P. 145. (ಪು. 89ರಲ್ಲಿ)" ಇತ್ಯಾದಿ.

ಬಿ. ಎಚ್. ಶ್ರೀಧರ ಅವರ 'ಸಂಸ್ಕೃತ-ಕನ್ನಡಗಳ ಬಾಂಧವ್ಯ' ಎಂಬ ಗ್ರಂಥ ಪ್ರಾರಂಭದಲ್ಲಿ ಒಂದು ಪೀಠಿಕಾ ಪ್ರಕರಣವನ್ನೂ ಅನಂತರದಲ್ಲಿ 'ಸಂಸ್ಕೃತ-ಕನ್ನಡಗಳ ಕಾವ್ಯ ಸಂಬಂಧ', 'ಸಂಸ್ಕೃತ-ಕನ್ನಡಗಳಲ್ಲಿ ರಚಿತವಾದ ಶಾಸ್ತ್ರಗ್ರಂಥಗಳ ಐತಿಹಾಸಿಕ ಮತ್ತು ಸಾಂಸ್ಕೃತಿಕ ಸಂಬಂಧ' ಎಂಬ ಲೇಖನ ಭಾಗಗಳನ್ನೂ ಕೊನೆಯಲ್ಲಿ 'ಉಪಸಂಹಾರ'ವನ್ನೂ ಒಳಗೊಂಡಿದೆ. ಕೃತಿಗೆ ಮೊದಲಾಗಿ ಹಾಗೂ ಕೊನೆಯ ಅನುಬಂಧದಲ್ಲಿ ಸಂಸ್ಕೃತ-ಕನ್ನಡಗಳ ಸಂಬಂಧವನ್ನು ಕುರಿತು (ಅಥವಾ ಸಂಸ್ಕೃತ ಜ್ಞಾನದ ಆವಶ್ಯಕತೆಯನ್ನು ಹೇಳುವ) ವಿವಿಧ ಲೇಖಕರು ಬೇರೆ ಬೇರೆ ಸಂದರ್ಭಗಳಲ್ಲಿ ಹೇಳಿದ

ಉಕ್ತಿಗಳನ್ನು ಸಂಗ್ರಹಿಸಿಕೊಡಲಾಗಿದೆ. ಈ ಕೃತಿಯ ವಿಷಯವನ್ನು ತೀರ ಸಂಕ್ಷಿಪ್ತ ವಾಗಿ ಹೇಳಲಾಗಿದೆಯೆಂದು ಲೇಖಕರು 'ಅರಿಕೆ'ಯಲ್ಲಿ ಹೇಳಿದ್ದಾರೆ.

ಸಂಸ್ಕೃತ-ಕನ್ನಡಗಳ ಕಾವ್ಯ-ಶಾಸ್ತ್ರ ಸಂಬಂಧ-ಪ್ರಭಾವಗಳನ್ನು ಕುರಿತ ಸಂಕ್ಷಿಪ್ತ ವಿವರಣೆಯಿಂದ (ಹಳ, ನಡು) ಕನ್ನಡದ ಬಹುತೇಕ ಕಾವ್ಯ-ಶಾಸ್ತ್ರಗಳಿಗೆಲ್ಲ ಸಂಸ್ಕೃತ ದವು ಮೂಲ ಎಂಬ ಸಂಗತಿ ವ್ಯಕ್ತವಾಗುತ್ತದೆ. ಇದು ನಿಜವೂ ಹೌದು. ಹಾಗೂ ಕನ್ನಡ ಭಾಷೆ-ಸಂಸ್ಕೃತಿಗಳು ಒಡಮೂಡುವ ಬಹುಮುಂಚೆಯೇ ಅಖಿಲಭಾರತ ವ್ಯಾಪ್ತಿಯನ್ನು ಪಡೆದು ನಿಂತ ಸಂಸ್ಕೃತ ಭಾಷೆ, ಆ ಮೂಲಕ ಮೂಡಿದ 'ಸಂಸ್ಕೃತಿ'– ಇವು ಕನ್ನಡವನ್ನು ಪ್ರಭಾವಿಸಿದ್ದು ತೀರ ನಿರೀಕ್ಷಿತವೂ ಹೌದು. ಆದರೆ "ವ್ಯಾಕರಣ ನಿಯಮಗಳತ್ತ ಲಕ್ಷ್ಯ ಹಾಕಿದರೆ ಅವು ನೂರಕ್ಕೆ ನೂರು ಎಂಬಷ್ಟು ಸಂಸ್ಕೃತ ವ್ಯಾಕರಣ ನಿಯಮಗಳಂತಿವೆ. ಇಂಗ್ಲಿಷ್ ಭಾಷೆಯ ವ್ಯಾಕರಣ ನಿಯಮಗಳಿಲ್ಲಿ ತಮ್ಮ ಯಾವ ವೈಶಿಷ್ಟ್ಯವನ್ನೂ ಮೂಡಿಸಿಲ್ಲ. ಆದುದರಿಂದ ಕೋಶ-ವ್ಯಾಕರಣಗಳ ದೃಷ್ಟಿ ಯಿಂದ ಇಂದಿನ ಆಡುಮಾತಾದ ಕನ್ನಡವು ಸಂಸ್ಕೃತಕ್ಕಲ್ಲದೇ ಇತರ ಯಾವ ಭಾಷೆಗೂ ಅಷ್ಟು ನಿಕಟವರ್ತಿಯಾಗಿಲ್ಲ ಎಂದು ಧಾರಾಳವಾಗಿ ಹೇಳಬಹುದು. ತುಳು, ಮಲೆಯಾಳ, ತಮಿಳು, ತೆಲುಗುಗಳಿಗೆ ದೇಶ್ಯಗಳಲ್ಲಿ ಕೆಲವು ಹೋಲಬಹುದು ಅಷ್ಟೆ. ಅದೂ ಪದಗಳ ವ್ಯುತ್ಪತ್ತಿಯ ದೃಷ್ಟಿಯಿಂದ. ಆ ಭಾಷೆಗಳ ಮೂಲಭೂತ ವ್ಯಾಕರಣ ನಿಯಮಗಳೂ ಬಹುಮಟ್ಟಿಗೆ ಸಂಸ್ಕೃತದವುಗಳಿಗೇ ಹೆಚ್ಚು ನಿಕಟವರ್ತಿಗಳಾಗಿವೆ" (ಪು. 32) ಎಂಬ ಮಾತುಗಳು ತಪ್ಪು ಕಲ್ಪನೆಯಿಂದ ಕೂಡಿದುದು. ಕೃತಿಯ ಶೀರ್ಷಿಕೆ ಹಾಗೂ ಒಳಶೀರ್ಷಿಕೆಗಳು ಮತ್ತು ಲೇಖನಗಳ ಹೆಚ್ಚಿನ ವಿವರಗಳು ಸಂಸ್ಕೃತ-ಕನ್ನಡ ಗಳ ಪ್ರಭಾವ-ಸಂಬಂಧಗಳನ್ನು ತಟಸ್ಥವಾಗಿ ವಿವರಿಸುತ್ತವೆ ಎಂಬ ಕಲ್ಪನೆಯನ್ನು ಮೂಡಿಸಬಹುದು. ಆದರೆ ಇದಿಷ್ಟೇ ಉದ್ದೇಶವಲ್ಲ ಎಂಬುದನ್ನು 'ಅರಿಕೆ'ಯಲ್ಲಿಯ "ಕನ್ನಡದ ಬಹುಸಂಖ್ಯಾತ ಸ್ತ್ರೀ ಪ್ರತ್ಯಯಗಳೆಲ್ಲವೂ ಸಂಸ್ಕೃತಜನ್ಯ ಎಂಬುದನ್ನರಿಯ ದವರೇ ಲತಾಳು, ಸೀತಾಳು, ಅಕ್ಕಳು, ಅಮ್ಮಳು, ಎಂದೂ ಕುಸುಮಾಶೆಟ್ಟಿ, ರಮಾ ಭಟ್ಟ, ರಾಧಾ ಹೆಗಡೆ, ನಲಿನೀ ಶಾಸ್ತ್ರಿ ಎಂದೂ ಅಸಹಜ ಪ್ರಯೋಗಗಳನ್ನು ಮಾಡು ವರು. ನೆಹರೂರವರು, ಕುವೆಂಪುರವರುಗಳು ಹುಟ್ಟಿದ್ದೂ ಇಂಥ "ಸೃಜನ"ಶೀಲ ರಿಂದಲೇ. ಹೀಗೆ ಕನ್ನಡಿತಿಯ ಮೈಮೇಲೆ ಕೈಹಾಕುವ ಜಾರಜಾತಕದವರನ್ನು ತಿದ್ದ ಲೆಂದೇ ಪ್ರಸ್ತುತ ಪುಸ್ತಕವನ್ನು ಬರೆಯಲಾಗಿದೆ" ಎಂಬ ಮಾತುಗಳು ಸೂಚಿಸುತ್ತವೆ. ಇದಕ್ಕೆ ಪೂರಕವಾಗಿ ಮುಂದಿನ ಕೆಲವು ಪುಟಗಳಲ್ಲಿ ಅಶುದ್ಧ-ಶುದ್ಧ ರೂಪಗಳ ಪಟ್ಟಿ ಯನ್ನು (ಪು. 47, 49, 50) ಕೊಡಲಾಗಿದೆ. ಇವುಗಳ ಅರ್ಥ ಸಂಸ್ಕೃತಭಾಷೆಯ ಜ್ಞಾನವಿಲ್ಲದೆ ಕನ್ನಡ ಭಾಷೆಯನ್ನು 'ಶುದ್ಧ'ವಾಗಿ ಬಳಸುವುದು ಸಾಧ್ಯವಿಲ್ಲ ಎಂದೂ ಈ ಕಾರಣದಿಂದ ಸಂಸ್ಕೃತ ಕಲಿಯುವುದು ಅಗತ್ಯ ಎಂದು ಹೇಳಬೇಕೆಂದಿರುವುದಾಗಿ ತೋರುತ್ತದೆ. ಈ ಒತ್ತಾಯದ ಧ್ವನಿ ಈ ಕೃತಿಯ ಹಿಂದಿದೆ. ("ಭಾಷಾಶಾಸ್ತ್ರವನ್ನು ಬರೆಯುವವರೇ "ಧ್ವನಿಮೆಗಳು" ಎಂಬುದನ್ನು "ಧ್ವನಿಮಾಗಳು" ಎಂದು ಬರೆದರೆ ಏನು ಹೇಳಬೇಕು" ಎಂಬ ಮಾತು (ಪು. 47) ವಿಚಾರಣೀಯ. 'ಯೋಜನೆ ಇದೆ'

ಎಂಬುದರ ಸಾಧುರೂಪ 'ಯೋಜನೆಯಿದೆ'. ಹಾಗೆಯೇ 'ಹುಟ್ಟು ಕನ್ನಡಿಗರು' ಎಂಬುದರ ಸಾಧುರೂಪ 'ಹುಟ್ಟುಗನ್ನಡಿಗರು', 'ಕೊಡುತ್ತಾರೆಂಬುದು', '1979ನೇ' ಎಂಬಿವುಗಳ ಸಾಧುರೂಪಗಳು ಕ್ರಮವಾಗಿ 'ಕೊಡುತ್ತಾರೆಯೆಂಬುದು' '1979ನೆಯ' ಎಂದಿರುವುದು (ಪು. 50) ಪ್ರಶ್ನಾರ್ಹ. 'ಉತ್ತೇಜಕ ಬಹುಮಾನ' ಎಂಬುದು ಸಂಸ್ಕೃತ ವ್ಯಾಕರಣ ದೃಷ್ಟಿಯಿಂದ ಸರಿಯಿರಬಹುದು, ಕನ್ನಡದ ದೃಷ್ಟಿಯಿಂದ 'ಉತ್ತೇಜನ ಬಹುಮಾನ' ಅಸಾಧು ಪ್ರಯೋಗವಲ್ಲ).

ಸಂಸ್ಕೃತದ ಜ್ಞಾನ ಕನ್ನಡದ (ಪ್ರಾಚೀನ) ಕಾವ್ಯ ಶಾಸ್ತ್ರಗಳನ್ನು ಅರ್ಥೈಸು ವುದರಲ್ಲಿ ಸಹಾಯಕಾರಿ ಎಂಬುದರ ಬಗೆಗೆ ಎರಡು ಮಾತಿಲ್ಲ. ಆದರೆ ಕನ್ನಡದಲ್ಲಿ ಸಂಸ್ಕೃತದಿಂದ ನೇರವಾಗಿಯೋ ಪರೋಕ್ಷವಾಗಿಯೋ ಬಂದ ಶಬ್ದಗಳ ಸಂಖ್ಯೆ ಅಪಾರವಾದದ್ದರಿಂದ "ಸಂಸ್ಕೃತದ ಮೂಲಜ್ಞಾನವಿಲ್ಲದವನು ಕನ್ನಡದಲ್ಲಿ ಎಂದೂ ಪರಿಪೂರ್ಣ ವಿದ್ವಾಂಸ. ಪಂಡಿತ ಎನಿಸಿಕೊಳ್ಳಲಾರ" ಎಂಬ ಹೇಳಿಕೆ (ಪು. 6) ತಪ್ಪೆನ್ನದೆ ವಿಧಿಯಿಲ್ಲ. ಭಾಷೆಯ ಮೂಲಭೂತ ಉದ್ದೇಶ ಪರಸ್ಪರರ ಅಭಿಪ್ರಾಯಗಳನ್ನು ಸಮರ್ಥವಾಗಿ ಸಂವಹನಗೊಳಿಸುವುದಷ್ಟೆ. ಪ್ರತಿಯೊಬ್ಬ ಕನ್ನಡ ಭಾಷಿಕನೂ ಈ ವಿಷಯದಲ್ಲಿ ಸಮರ್ಥ. ಸುಶಿಕ್ಷಿತ ಕನ್ನಡ ವಿದ್ಯಾರ್ಥಿಗೆ ಇದಕ್ಕಿಂತ ಸ್ವಲ್ಪ ಬೇರೆಯಾದ ಇನ್ನೊಂದು ಸಮಸ್ಯೆಯಿರುತ್ತದೆ. ಆತ ತನ್ನ ಮನೆಮಾತಿಗಿಂತ ಬೇರೆಯಾದ ಶಿಷ್ಟಕನ್ನಡದ. ಬಹುಜನ ಒಪ್ಪಬಹುದಾದ ವ್ಯಾಕರಣದ ಚೌಕಟ್ಟಿನಲ್ಲಿ ತನ್ನ ವಿಚಾರ ಗಳನ್ನು ಮಂಡಿಸಬೇಕಾಗುತ್ತದೆ. ಈ ಹಂತದಲ್ಲಿ ಕೆಲಮಟ್ಟಿಗೆ ಸಂಸ್ಕೃತ ವ್ಯಾಕರಣದ ಪ್ರಭಾವಕ್ಕೆ ಒಳಗಾಗಬಹುದು. ಆದರೆ ಇಲ್ಲಿಯೂ ಅವನು ಒಂದು ನಿರ್ದಿಷ್ಟ ವ್ಯಾಕರಣದ ಚೌಕಟ್ಟನ್ನು ಅನುಸರಿಸುವುದು ಅಪೇಕ್ಷಣೀಯವೇ ಹೊರತು ಅದು ಸಂಸ್ಕೃತಪರವೇ ಅಥವಾ ಸಂಸ್ಕೃತದ ದೃಷ್ಟಿಯಿಂದ ಸರಿಯೇ ಆಗಿರಬೇಕೆಂದಿಲ್ಲ. ಸಂಸ್ಕೃತಜ್ಞಾನ ಹಾಗೂ ಸಂಸ್ಕೃತ ವ್ಯಾಕರಣ ಪರವಾದ ರೂಪಗಳನ್ನುಪಯೋಗಿಸು ವುದರಿಂದ ಪ್ರಯೋಜನವೇ ಇಲ್ಲವೇ ಎಂದು ಯಾರಾದರೂ ಪ್ರಶ್ನಿಸಬಹುದು. ಒಂದು ರೀತಿಯಲ್ಲಿ ಪ್ರಯೋಜನವೂ ಇದೆ. ಒಂದು. ಇದರಿಂದಾಗಿ ಕನ್ನಡವು ಸಂಸ್ಕೃತದಿಂದ ಸ್ವೀಕರಿಸುವ ಸಾಧ್ಯತೆಯನ್ನು ಹೆಚ್ಚಿಸಿಕೊಳ್ಳಬಹುದು. ಸ್ವೀಕರಣದಿಂದ ಕನ್ನಡ ಸತ್ವ ಪೂರ್ಣವಾಗ ಬೇಕಿದ್ದರೆ (ಆದರೆ ಇದೊಂದೇ ದಾರಿ ಅಲ್ಲ ಎಂಬುದನ್ನು ನೆನಪಿನಲ್ಲಿಡ ಬೇಕು). ಸದ್ಯಕ್ಕೆ ನಮಗೆ ಬೆಂಬಲವಾಗಬಹುದಾದದ್ದು ಸಂಸ್ಕೃತವೇ ; ಎರಡು, ಶಿಷ್ಟ ಭಾಷೆಯಲ್ಲಿ. ಪಠ್ಯಪುಸ್ತಕಗಳಲ್ಲಿ (ಸಂಸ್ಕೃತ ಮೂಲದಿಂದ ಬಂದ) ಅನೇಕ ಬಗೆಯ ರೂಪಗಳು ಹುಟ್ಟುವುದು ತಪ್ಪಿ ವ್ಯಾಕರಣ ಹೆಚ್ಚು ಖಚಿತವಾಗುತ್ತದೆ ಹಾಗೂ ಅನುಕರಣ ಸಾಧ್ಯವಾಗುತ್ತದೆ. ಈ ಎರಡನೆಯ ಸಂಗತಿಯನ್ನೆ 'ಭಾಷಾ ಸಂಸ್ಕರಣ' (Language Standardization) ಎಂಬ ಶೀರ್ಷಿಕೆಯೊಂದಿಗೆ ವಿಶೇಷ ಒತ್ತುಕೊಟ್ಟು ಈಚೆಗೆ ಗಮನಿಸಲಾಗುತ್ತಿದೆ. (ವಾಸ್ತವವಾಗಿ ಇದು ವರ್ಣನಾತ್ಮಕ ಭಾಷಾವಿಜ್ಞಾನಕ್ಕೆ ಹಿನ್ನೆಲೆಯಾಗಿ ಕಾಣಿಸಿಕೊಂಡ ತತ್ವಗಳಿಗೆ ವಿರುದ್ಧವಾದದ್ದು).

ಈ ಸೀಮಿತ ಅರ್ಥದಲ್ಲಿ ಸಂಸ್ಕೃತಜ್ಞಾನ ಸಹಾಯಕವೇ. ಪ್ರಾಚೀನ ಕಾವ್ಯ-ಶಾಸ್ತ್ರಗಳ ಅಧ್ಯಯನದಲ್ಲಿ ತೊಡಗಿರದ ಇತರೇ ವಿದ್ಯಾರ್ಥಿಗಳಿಗೆ ಇದಕ್ಕಿಂತ ಹೆಚ್ಚಿನ ಪ್ರಯೋಜನವಿದ್ದಂತೆ ತೋರದು. ಆದ್ದರಿಂದ ಸಂಸ್ಕೃತಜ್ಞಾನ ಅವಶ್ಯಕವೇ ಅಲ್ಲವೇ ಎಂಬುದನ್ನು ಉತ್ತರಿಸುವ ಮೊದಲು ಯಾರಿಗೆ ಹಾಗೂ ಯಾವ ಸಂದರ್ಭದಲ್ಲಿ ಹಾಗೂ ಸಂಸ್ಕೃತದೊಡನೆ ಆಯ್ಕೆಗೆ ಇರುವ ಭಾಷೆಗಳು ಯಾವುವು ಎಂಬ ಪ್ರಶ್ನೆಗಳನ್ನು ಮೊದಲು ಹಾಕಿಕೊಳ್ಳಬೇಕು. ಶಿಕ್ಷಣದ ಮೊದಲ ಹಂತಗಳಲ್ಲಿ ಮಾತೃಭಾಷೆಯೊಟ್ಟಿಗೆ ಆಯ್ಕೆ ಮಾಡಬೇಕಾದ ಸಂದರ್ಭಬಂದಲ್ಲಿ 'ಅಷ್ಟು ಅವಶ್ಯಕವಲ್ಲ' ಎಂಬುದೇ ಉತ್ತರ ; ಜ್ಞಾನವನ್ನು ವಿಸ್ತರಿಸಿಕೊಳ್ಳುವ ಕುತೂಹಲವಿದ್ದಾಗ 'ಅತ್ಯಾವಶ್ಯಕ' ಎಂಬುದೇ ಉತ್ತರ.

ಈ ಕೃತಿಯ ಹಿನ್ನೆಲೆಗೆ, ಕೃತಿಯ ಉದ್ದೇಶಕ್ಕೆ ಪೂರಕವಾಗಿ ಲೇಖಕರು ಇನ್ನೊಂದು ಮಾತನ್ನು ಸೇರಿಸಿದ್ದಾರೆ. ಅದು "ತನಗೆ ಬಾರದ ಭಾಷೆಗಳೆಲ್ಲವೂ ತನ್ನ ಪಾಲಿಗೆ ಮೃತ ಎಂಬುದನ್ನರಿಯದೆ, ಸಂಸ್ಕೃತವೊಂದೇ "ಮೃತ" ಎಂದು ಬೊಬ್ಬೆ ಹೊಡೆದು ಅರಸಿಕತೆಯನ್ನು" ಹೊರಗೆಡಹುತ್ತಾನೆಂದು ಹೇಳಿ ಸಂಸ್ಕೃತ ಮೃತಭಾಷೆ ಎಂಬ ಜನಪ್ರಿಯ ತಿಳುವಳಿಕೆಯನ್ನು ಅಲ್ಲಗಳೆಯುವುದು. ಲೇಖಕರ ಹೇಳಿಕೆ ನಿಜವಾದದ್ದು. ಸಂಸ್ಕೃತಪರ-ವಿರೋಧವಾದ ನಿಲುವುಗಳನ್ನು ತಾಳುವಲ್ಲಿ ಇದೂ ಒಂದು ಮುಖ್ಯವಾದ ಸಂಗತಿಯೆಂದು ಕಾಣುತ್ತದೆ. ಆದರೆ ಇದು ತೀರ ಗೌಣವಾಗಿ ಪರಿಗಣಿಸಬೇಕಾದ ಅಂಶ. (ಸಂಸ್ಕೃತ ಎಂದೂ ಜೀವಂತ ಭಾಷೆಯಾಗಿರಲಿಲ್ಲ ಎಂಬ ತಪ್ಪು ಅಭಿಪ್ರಾಯ ಅನೇಕ ವಿದ್ವಾಂಸರಲ್ಲಿಯೂ ಹೇಗೋ ಮನೆಮಾಡಿಕೊಂಡಂತೆ ತೋರುತ್ತದೆ. ಇದಕ್ಕೆ ಆಧಾರವೇನೋ ತಿಳಿಯದು. ಸಂಸ್ಕೃತವು ಅಂದಿನ ವ್ಯಾವಹಾರಿಕ ಭಾಷೆಗಿಂತ ಭಿನ್ನವಾದ ಶಿಷ್ಟಭಾಷೆಯಾಗಿ, ಹೆಚ್ಚೆಂದರೆ ವ್ಯಾವಹಾರಿಕ-ಶಿಷ್ಟಭಾಷೆಗಳ ನಡುವಿನ ಭಿನ್ನತೆ ಹೆಚ್ಚು ಇರುವ ಭಾಷೆಯಾಗಿ, ಈಗಲೂ ಕೆಲವು ಭಾಷೆಗಳ ವಿಷಯದಲ್ಲಿ ಇರುವಂತೆ, ಬಳಕೆಯಲ್ಲಿ ಇದ್ದಿರಬೇಕೆನಿಸುತ್ತದೆ. ಶಿಷ್ಟಭಾಷೆಯೆಂದ ಮೇಲೆ ಮೇಲ್ವರ್ಗದ ಅದೂ ಪುರುಷರ ಭಾಷೆಯಾಗಿತ್ತೆಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ. ಈ ಸನ್ನಿವೇಶವನ್ನು ಸ್ಥೂಲವಾಗಿ ಕೆಲವು ಶತಮಾನಗಳ ಹಿಂದಿನ ಕನ್ನಡಕ್ಕೂ ಅನ್ವಯಿಸಬಹುದು). ಬರೆಹದಲ್ಲಿ ತೋರುವ ಕನ್ನಡವನ್ನು ಯಾರೂ ಮಾತನಾಡುವುದಿಲ್ಲ ಎಂಬರ್ಥದಲ್ಲಿ ನಾವು ಕಲಿಯುವ ಕನ್ನಡವೂ ಒಂದು ಮೃತಭಾಷೆಯೇ. ಆದ್ದರಿಂದ ಮೃತಭಾಷೆ ಎಂಬುದು ಭಾಷಾವಿಜ್ಞಾನದ ಹಿನ್ನೆಲೆಯಲ್ಲಿ ಅರ್ಥವಿಲ್ಲದ ಪದ ಅಥವಾ ಅರ್ಥವಾಗದ ಭಾಷೆ ಎಂಬರ್ಥ ನೀಡಬಹುದಾದ ಪದ. ಆದರೆ ಮೇಲೆಯೇ ಹೇಳಿದಂತೆ, ಒಂದು ಭಾಷೆಯನ್ನು ಕಲಿಯುವುದರ ಆವಶ್ಯಕತೆ ಇದೆಯೇ

ಇಲ್ಲವೇ ಎಂಬುದು ಆ ಭಾಷೆ ಹಿಂದೆ ವ್ಯವಹಾರದಲ್ಲಿತ್ತೇ, ಇಲ್ಲವೇ, ಈಗ ವ್ಯವಹಾರ ದಲ್ಲಿದೆಯೇ ಎಂಬುದನ್ನು ಗಮನಿಸಿ ನಿರ್ಧರಿತವಾಗತಕ್ಕದ್ದಲ್ಲ ; ಅದರ ಸಾಮಾಜಿಕ ಶೈಕ್ಷಣಿಕ ಆವಶ್ಯಕತೆಯನ್ನು ಗಮನಿಸಿ ನಿರ್ಧರಿಸಬೇಕಾದದ್ದು.

ಕೃತಿ ತನ್ನ ನಿರೂಪಣೆಯಲ್ಲಿ ಅನವಶ್ಯಕವಾಗಿ ಹಲವೆಡೆ ಖಾರವಾಗಿದೆ ಎನ್ನಿಸುತ್ತದೆ.

# ಸಂಶೋಧನೆ: ಪಿಎಚ್.ಡಿ. ನಿಬಂಧಗಳು

**ಎಂ. ಚಿದಾನಂದಮೂರ್ತಿ**

ಎಂ. ಎಸ್. ಪುಟ್ಟಣ್ಣ ಈ ಶತಮಾನದ ಮೊದಲ ದಶಕಗಳ ಪ್ರಮುಖ ಲೇಖಕರಲ್ಲೊಬ್ಬರು : ಗದ್ಯದ ದೃಷ್ಟಿಯಿಂದ ಅಗ್ರಗಣ್ಯರೆಂದಲೂ ತಪ್ಪಿಲ್ಲ. ಅಂತಹವರ ಬಗ್ಗೆ ಈವರೆಗೆ ಬಂದಿರುವ ಪರಿಚಯವಾಗಲಿ ವಿಮರ್ಶೆಯಾಗಲಿ ತೀರ ಕಡಮೆ. ಅವರ ಅಪ್ರಕಟಿತ ಬರಹಗಳು ಎಷ್ಟು, ಅವರ ಹಿನ್ನೆಲೆ ಏನು, ಅವರ ಸಾಹಿತ್ಯದ ಕಾಣಿಕೆ ಯಾವ ಬಗೆಯದು ಇವೆಲ್ಲ ಕೇವಲ ಪ್ರಶ್ನೆಗಳೇ ಆಗಿದ್ದುವು. ಆದರೆ ಎಚ್. ಎಸ್. ಸುಜಾತ ಅವರು ಪುಟ್ಟಣ್ಣನವರನ್ನು ಸಂಶೋಧನ ವಸ್ತುವಾಗಿ ಆರಿಸಿಕೊಂಡು ಒಂದು ದೊಡ್ಡ ಕೊರತೆಯನ್ನು ಹೋಗಲಾಡಿಸಿದ್ದಾರೆ, ಅವರ ಪಿಎಚ್.ಡಿ. ನಿಬಂಧ "ಎಂ. ಎಸ್. ಪುಟ್ಟಣ್ಣ-ಒಂದು ಅಧ್ಯಯನ" ಈಚಿನ ದಿನಗಳಲ್ಲಿ ಬಂದಿರುವ ಅಪೂರ್ವ ಕೃತಿಗಳಲ್ಲಿ ಒಂದು. ಅವರ ನಿಬಂಧ ಎಲ್ಲ ದೃಷ್ಟಿಯಿಂದಲೂ ಆ ಪದವಿಗೆ ಅರ್ಹವಾದುದು (ಈ ಮಾತನ್ನು ಬಹುಪಾಲು ನಿಬಂಧಗಳಿಗೆ ಹೇಳುವಂತಿಲ್ಲವೆಂಬುದು ಕನ್ನಡದ ದುರ್ದೈವ).

ಪೀಠಿಕೆಯನ್ನು ಬಿಟ್ಟರೆ ಇದರಲ್ಲಿ ನಾಲ್ಕು ಅಧ್ಯಾಯಗಳೂ ಅಂತ್ಯದಲ್ಲಿ "ಉಪಸಂಹಾರ" ಎಂಬ ಹೆಸರಿನ ಅಧ್ಯಾಯವೂ ಉಂಟು. ಮೊದಲನೆಯ ಅಧ್ಯಾಯ ಎಂ. ಎಸ್. ಪುಟ್ಟಣ್ಣನವರ ಜೀವನ ಮತ್ತು ವ್ಯಕ್ತಿತ್ವಗಳನ್ನು ಕುರಿತಿದೆ. ಈಗ ಲಭ್ಯವಾಗಿರುವ ಸಾಮಗ್ರಿಗಳಲ್ಲದೆ, ಎಷ್ಟೋ ಜನರನ್ನು ಭೇಟಿ ಮಾಡಿ, ಹಳೆಯ ಪತ್ರಿಕೆಗಳನ್ನು ಜಾಲಾಡಿ, ಪುಟ್ಟಣ್ಣನವರ ಬಂಧುಗಳ ಮನೆಗಳಲ್ಲಿ ಉಳಿದಿರುವ ಕಾಗದ ಪತ್ರಗಳನ್ನು ಹುಡುಕಿ ಒಂದು ವಿಶ್ವಾಸಾರ್ಹವಾದ ಜೀವನ ಚಿತ್ರಣವನ್ನೂ ಅವರ ವ್ಯಕ್ತಿತ್ವವನ್ನು ಇಲ್ಲಿ ಕೊಟ್ಟಿದ್ದಾರೆ. ಇಲ್ಲಿ ಸುಜಾತಾ ಅವರ ಶ್ರಮ ಎದ್ದು ಕಾಣುವಂತಹುದು. ಒಬ್ಬ ವಸ್ತುನಿಷ್ಠ ಜೀವನ ಚಿತ್ರಕಾರರಾಗಿ ಅವರು ಪುಟ್ಟಣ್ಣನವರನ್ನು ಅವರ ಸಮಸ್ತಗುಣ ದೌರ್ಬಲ್ಯಗಳೊಡನೆ ಅವರ ವ್ಯಕ್ತಿತ್ವವನ್ನು ಕಟ್ಟಿಕೊಟ್ಟಿದ್ದಾರೆ. ಇಲ್ಲಿ ಘಟನೆಗಳ ಪಟ್ಟಿಯಿಲ್ಲ ; ಒಟ್ಟು ಕೃತಿಕಾರರಾಗಿ ಪುಟ್ಟಣ್ಣನವರ ಬದುಕಿಗೆ ಅವು ಹೇಗೆ ಹೊಂದಿಕೊಂಡಿವೆ, ಅವರ ಸಾಹಿತ್ಯ ನಿರ್ಮಿತಿಗೆ ಹೇಗೆ ಅವು ನೇರವಾಗಿ ಸಂಬಂಧಿಸಿವೆ ಎಂಬುದು ಉದ್ದಕ್ಕೂ ಲೇಖಕಿಯ ಗಮನದಲ್ಲಿರುವುದರಿಂದ ಇಡೀ ಅಧ್ಯಾಯ ಒಟ್ಟು ನಿಬಂಧದೊಡನೆ ಸಾವಯವ ಸಂಬಂಧವನ್ನು ಪಡೆಯುತ್ತದೆ.

ಪುಟ್ಟಣ್ಣನವರ ಕಾಲದ ಕನ್ನಡ ಭಾಷೆ ಸಾಹಿತ್ಯಗಳ ಪ್ರೇರಣೆ ಧೋರಣೆಗಳ ಚಿತ್ರವೂ ಚನ್ನಾಗಿ ಮೂಡಿಬಂದಿದೆ. ಕರ್ನಾಟಕಕ್ಕೆ ಇಂಗ್ಲಿಷ್, ತನ್ಮೂಲಕ ಆಧುನಿಕ ನಾಗರಿಕತೆಯ ಆಗಮನ, ಮಿಶನರಿಗಳ ಕಾರ್ಯ, ಪತ್ರಿಕೋದ್ಯಮದ ಆರಂಭ, ಇವು ಗಳಿಂದ ಬದುಕು, ಭಾಷೆ, ಸಾಹಿತ್ಯಗಳ ಮೇಲೆ ಆದ ಪ್ರಭಾವ ಇವೆಲ್ಲವೂ ಪುಟ್ಟಣ್ಣನವರ ಅಧ್ಯಯನಕ್ಕೆ ಒಳ್ಳೆಯ ಹಿನ್ನೆಲೆಯನ್ನು ಒದಗಿಸುತ್ತವೆ.

ಮೂರನೆಯ ಅಧ್ಯಾಯವು ಪುಟ್ಟಣ್ಣನವರ ಕೃತಿಗಳ ಅಧ್ಯಯನಕ್ಕೆ ಮೀಸ ಲಾಗಿದೆ. ಕೃತಿಗಳ ಕಥಾ ವಿಶ್ಲೇಷಣೆ, ಪಾತ್ರಚಿತ್ರಣ, ಭಾಷೆ-ಶೈಲಿ, ತೌಲನಿಕ ವಿವೇಚನೆ (ಉದಾಹರಣೆಗೆ, "ಪೇಟೆ ಮಾತೇನಜ್ಜಿ" ಕೃತಿಗೆ ಮೂಲವಾಗಿರಬಹು ದಾದ ಜಾನಪದ ಕತೆಯ ಜೊತೆ ಹೋಲಿಕೆ) ಸಮರ್ಪಕವಾಗಿ ಮೂಡಿವೆ. ಅವರು ಕಾದಂಬರಿ, ಜೀವನಚರಿತ್ರೆಗಳನ್ನಲ್ಲದೆ ಷೇಕ್ಸ್‌ಪಿಯರನ ಮೂರು ನಾಟಕಗಳನ್ನು ಕನ್ನಡಕ್ಕೆ ತಂದಿದ್ದರು. ಸುಜಾತಾ ಅವರು ಅವುಗಳನ್ನು ಮೂಲದೊಡನೆ ಹೋಲಿಸಿ ಮೌಲ್ಯವನ್ನು ನಿರ್ಣಯಿಸಲು ಯತ್ನಿಸಿದ್ದಾರೆ. ಕನ್ನಡ ರೂಪಾಂತರಗಳ ಮಿತಿಯನ್ನು ಗುರುತಿಸಿದ್ದಾರೆ, ಕೆಲವೊಮ್ಮೆ ಇತರ ಕನ್ನಡ ರೂಪಾಂತರಗಳ ಜೊತೆ ಪುಟ್ಟಣ್ಣನವರ ಕೃತಿಗಳನ್ನು ಹೋಲಿಸಿದ್ದಾರೆ. ಮಕ್ಕಳಿಗಾಗಿ ಪುಟ್ಟಣ್ಣ ಅವರು "ಸುಮತಿ ಮದನ ಕುಮಾರರ ಚರಿತ್ರೆ"ಯನ್ನು ಬರೆದರು. (ಮೂಲ : ಥಾಮಸ್ ಡೇ ಬರೆದ "ದಿ ಹಿಸ್ಟರಿ ಆಫ್ ಸ್ಯಾಂಡ್‌ಫರ್ಡ್ ಅಂಡ್ ಮರಟನ್") ಅನುವಾದವೆಂದು ಓದುಗರಿಗೆ ಗೊತ್ತಾಗದಷ್ಟು ಸ್ವಾಭಾವಿಕವಾದ ರೀತಿಯಲ್ಲಿ ಕನ್ನಡಕ್ಕೆ ಭಟ್ಟಿಯಿಳಿಸಿ ರುವುದನ್ನು ಗುರುತಿಸಿದ್ದಾರೆ. ಪುಟ್ಟಣ್ಣ ಮೂರು ಸಂಶೋಧನಕೃತಿಗಳನ್ನು ಬರೆ ದಿದ್ದಾರೆ. ("ಚಿತ್ರದುರ್ಗದ ಪಾಳಯಗಾರರು" ಇತ್ಯಾದಿ). ಅವುಗಳಲ್ಲಿ ಕಂಡುಬರುವ ಸಂಶೋಧನದೃಷ್ಟಿ ಮೆಚ್ಚಬೇಕಾದುದು ಎಂದು ಸುಜಾತಾ ತೋರಿಸಿಕೊಟ್ಟಿದ್ದಾರೆ. ಮಕ್ಕಳಿಗಾಗಿ ಪುಟ್ಟಣ್ಣ ಹಲವು ಪಠ್ಯ ಗ್ರಂಥಗಳನ್ನು ಬರೆದಿರುವುದಲ್ಲದೆ, "ಹಿತಬೋಧಿನಿ" ಎಂಬ ಮಾಸಪತ್ರಿಕೆಯನ್ನು ಪ್ರಕಟಿಸಿದರು. ಅದು ಅಂದಿನ ಕಾಲದಲ್ಲಿ ಹೆಚ್ಚು ಕಾಲ ನಡೆಯದಿದ್ದರೂ ಅದು ವಹಿಸಿದ ಮಹತ್ವದ ಪಾತ್ರವನ್ನು ಸಮರ್ಪಕವಾಗಿ ವಿವರಿಸಿದ್ದಾರೆ. ಪುಟ್ಟಣ್ಣನವರ ಹಲವಾರು ಅಪ್ರಕಟಿತ ಲೇಖನಗಳನ್ನು ಗುರುತಿಸಿರು ವುದು ಸುಜಾತಾರ ಕೆಲಸದ ಪ್ರಾಮುಖ್ಯವನ್ನು ಹೆಚ್ಚಿಸಿದೆ.

ಈ ಕೃತಿ ಯಾವುದೇ ದೃಷ್ಟಿಯಿಂದ ನೋಡಿದರೂ ಈಚೆಗೆ ಪ್ರಕಟವಾಗಿರುವ ಉತ್ಕೃಷ್ಟ ಪಿಎಚ್.ಡಿ. ನಿಬಂಧಗಳಲ್ಲಿ ಒಂದು. ಸಂಶೋಧಕನಿಗಿರಬೇಕಾದ ಸಂಪೂರ್ಣ ಎಚ್ಚರ, ಜವಾಬ್ದಾರಿಗಳಿಂದ ಕೆಲಸವನ್ನು ಕೈಗೊಂಡು ಅದರಲ್ಲಿ ಸುಜಾತಾ ಸಂಪೂರ್ಣ ವಾಗಿ ಯಶಸ್ವಿಯಾಗಿದ್ದಾರೆ. ಅತ್ಯಂತ ವಸ್ತುನಿಷ್ಠವೂ ನೇರವೂ ಆದ ಭಾಷೆಯಲ್ಲಿ ಉದ್ದಕ್ಕೂ ವಿಷಯಗಳನ್ನು ನಿರೂಪಿಸುತ್ತ ಎಲ್ಲೂ ಅನಗತ್ಯ ಅನ್ಯ ಸಂಗತಿಗಳಿಗೆ ಕೈಹಾಕದೆ ಎಚ್ಚರಿಕೆಯಿಂದ ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಅನಗತ್ಯ ಉಲ್ಲೇಖ ಗಳಿಂದ ಕೃತಿಯನ್ನು ತುಂಬದೆ, ಮಾತಿನಲ್ಲಿ ಸಂಯಮವನ್ನು ತೋರಿದ್ದಾರೆ. ಪುಟ್ಟಣ್ಣ ನವರ ಬಗ್ಗೆ ಚನ್ನಾಗಿ ತಿಳಿದಿರುವವರೂ ಈ ಕೃತಿಯನ್ನು ಓದಿ ಲಾಭವನ್ನು ಪಡೆಯ

ಬಹುದಾಗಿದೆ. ಇಲ್ಲಿ ಕೊಟ್ಟಿರುವ ಚಿತ್ರಗಳಾಗಲಿ ಪುಸ್ತಕವನ್ನು ತಂದಿರುವ ರೀತಿಯಾಗಲಿ ಕರಡುಗಳನ್ನು ಚನ್ನಾಗಿ ತಿದ್ದಿ ತಪ್ಪಿಲ್ಲದ ರೀತಿ ಹೊರತಂದಿರುವ ರೀತಿಯಾಗಲಿ ಪ್ರಶಂಸಾಯೋಗ್ಯವಾದುದು. ಹೊಸಗನ್ನಡ ಲೇಖಕನೊಬ್ಬನನ್ನು ಅಧ್ಯಯನ ಮಾಡ ಲಿಕ್ಕೆ ಈ ಕೃತಿ ಒಂದು ಮಾದರಿಯಾಗಬಲ್ಲುದು.

ಗ್ರಂಥಋಣ ಕೊಡುವಾಗ ಅಥವಾ ಅಡಿಟಿಪ್ಪಣಿ ಕೊಡುವಾಗ ಕೃತಿಗಳ ಹೆಸರನ್ನು ಮೊದಲು ಕೊಡದೆ ಕೃತಿಕಾರರ ಹೆಸರನ್ನು ಕೊಡುವುದು ಎಲ್ಲರೂ ಒಪ್ಪಿರುವ ರೂಢಿಯೆಂಬುದನ್ನು ಸುಜಾತಾ ಗಮನಿಸಬೇಕು. ಇಂತಹ ಪುಸ್ತಕಗಳಿಗೆ ಶಬ್ದಸೂಚಿ ಯೊಂದು ಇದ್ದರೆ ಪುಸ್ತಕದ ಉಪಯುಕ್ತತೆ ಇನ್ನೂ ಹೆಚ್ಚುತ್ತದೆ.

ಎಸ್. ಎಸ್. ಬ್ಯಾತನಾಳ ಅವರ "ತೊರವೆ ರಾಮಾಯಣ : ಕಥಾವಸ್ತು ವಿವೇಚನೆ" ಅವರ ಪಿಎಚ್.ಡಿ. ನಿಬಂಧ. ಮೂಲನಿಬಂಧದಲ್ಲಿ "ಸಂಸ್ಕೃತ ಸಾಹಿತ್ಯದಲ್ಲಿ ರಾಮಾಯಣ" ಎಂಬ ಅಧ್ಯಾಯವೊಂದು ಇತ್ತೆಂದೂ ಗಾತ್ರಭಯದಿಂದ ಅದನ್ನು ಇಲ್ಲಿ ಕೈಬಿಡಲಾಗಿದೆಯೆಂದೂ ಹೇಳಿದ್ದಾರೆ.

ಇದರಲ್ಲಿ ಪ್ರಸ್ತಾವನೆಯನ್ನು ಬಿಟ್ಟರೆ ಭಾರತೀಯ ಸಾಹಿತ್ಯಗಳಲ್ಲಿ ರಾಮಾಯಣ, ಕನ್ನಡ ಸಾಹಿತ್ಯದಲ್ಲಿ ರಾಮಾಯಣ, ಜಾನಪದ ಸಾಹಿತ್ಯದಲ್ಲಿ ರಾಮಾಯಣ, ಯಕ್ಷಗಾನ ಸಾಹಿತ್ಯದಲ್ಲಿ ರಾಮಾಯಣವು ವಾಲ್ಮೀಕಿ ರಾಮಾಯಣ ಮತ್ತು ತೊರವೆ ರಾಮಾಯಣ ಕಥಾವಸ್ತು ವಿವೇಚನೆ, ತೊರವೆ ರಾಮಾಯಣದ ಮೇಲೆ ಇತರ ರಾಮಾಯಣಗಳ ಪ್ರಭಾವ, ತೊರವ ರಾಮಾಯಣದ ಪ್ರಭಾವ ಮತ್ತು ಉಪಸಂಹಾರ ಎಂಬ ಎಂಟು ಅಧ್ಯಾಯಗಳಿವೆ. ತೊರವೆ ರಾಮಾಯಣವು ಕನ್ನಡದ ಮೊದಲ ವೈದಿಕ ಸಂಪ್ರದಾಯದ ರಾಮಾಯಣ ; ಕುಮಾರವ್ಯಾಸನಿಂದ ಪ್ರಭಾವಿತನಾದ ದ್ವಿತೀಯ ವರ್ಗದ ಕವಿ ಯಾಗಿದ್ದರೂ ರಾಮಾಯಣದ ಕೃತಿ ಎಂಬ ಕಾರಣದಿಂದ ಆಮೇಲೆ ಬಂದಿರುವ, ವಿಶೇಷವಾಗಿ ಯಕ್ಷಗಾನಗಳ ಮೇಲೆ ಅದರ ಪ್ರಭಾವ ಸಾಕಷ್ಟು. ಅದು ಬಹು ಜನಪ್ರಿಯ ಕೃತಿಯೂ ಆಗಿತ್ತು ಎಂಬುದು ಅದರ ಹಸ್ತಪ್ರತಿಗಳು ಹೆಚ್ಚಿನ ಸಂಖ್ಯೆ ಯಲ್ಲಿ ದೊರಕುವುದರಿಂದ ಸೂಚಿತವಾಗುತ್ತದೆ. ತೊರವೆ ರಾಮಾಯಣದಂತಹ ಮಧ್ಯಕಾಲೀನ ಕೃತಿಗಳು ಸಾಹಿತ್ಯವಾಗಿ ಅಲ್ಲದಿದ್ದರೂ ಬೇರೆ ಹಲವಾರು ದೃಷ್ಟಿಗಳಿಂದ ಮಹತ್ವವಾಗಿರುತ್ತವೆ. ಕನ್ನಡದಲ್ಲಿ "ತೊರವೆ ರಾಮಾಯಣ" ಎರಡು ಪಿಎಚ್.ಡಿ. ನಿಬಂಧಗಳಿಗೆ ವಸ್ತುವಾಗಿರುವುದು ಅದರ ಅದೃಷ್ಟವೆಂದೇ ಹೇಳಬೇಕು.

ಇಲ್ಲಿನ 367 ಪುಟಗಳಲ್ಲಿ 249 ಪುಟಗಳು ಬೇರೆ ಬೇರೆ ರಾಮಾಯಣಗಳ ಪರಿಚಯಕ್ಕೆ ಮೀಸಲಾಗಿದ್ದು ಹಿನ್ನೆಲೆ ಸಾಮಗ್ರಿಗೆ ಈ ನಿಬಂಧದಲ್ಲಿ ಹೆಚ್ಚಿನ ಪ್ರಾಮುಖ್ಯ ದೊರೆತಂತೆ ಅನ್ನಿಸುತ್ತದೆ. ತೊರವೆ ರಾಮಾಯಣದ "ಕಥಾವಸ್ತು ವಿವೇಚನೆ"ಯು 251ನೇ ಪುಟದಿಂದ ಆರಂಭವಾಗುತ್ತದೆ. ಹಿನ್ನೆಲೆಯಾಗಿ ಬಂದಿರುವ

ವಿಷಯದಲ್ಲಾಗಲಿ ನಿರೂಪಣೆಯಲ್ಲಾಗಲಿ ಯಾವುದೇ ಉಪಯುಕ್ತತೆಯಾಗಲಿ ಅಚ್ಚು ಕಟ್ಟಾಗಲಿ ತೋರುವುದಿಲ್ಲ. ಬೇರೆ ಬೇರೆ ಭಾಷೆಗಳ ರಾಮಾಯಣದ ಕಥಾವಸ್ತುವನ್ನು ಕೆಲವೆಡೆ ಸಂಗ್ರಹವಾಗಿ, ಕೆಲವೆಡೆ ಒಂದೆರಡು ವಾಕ್ಯಗಳಲ್ಲಿ ಕೊಡಲಾಗಿದೆ. "ಕನ್ನಡ ಸಾಹಿತ್ಯದಲ್ಲಿ ರಾಮಾಯಣ" ಅಧ್ಯಾಯವು ಅಗತ್ಯವಾಗಿದ್ದರೂ, ಇಲ್ಲೂ ಕಥಾ ಸಾರಾಂಶ ಕೊಡುವುದರಲ್ಲಿ ಬ್ಯಾತನಾಳ್ ತೃಪ್ತರಾಗುತ್ತಾರೆ, ಸಂಗತಿಗಳನ್ನು ಸುಮ್ಮನೆ ರಾಶಿ ಹಾಕುತ್ತಾರೆ. "ರಾಮಧಾನ್ಯ ಚರಿತೆ"ಯ ಬಗ್ಗೆ ಎರಡೇ ವಾಕ್ಯಗಳಲ್ಲಿ ಮುಗಿಯು ತ್ತದೆ. ಕನ್ನಡ ರಾಮಾಯಣಗಳ ಸಮೀಕ್ಷೆ ತೀರ ಈಚಿನ ಕುವೆಂಪು ಅವರ "ರಾಮಾಯಣ ದರ್ಶನಂ"ವರೆಗೂ ಹಬ್ಬಿದೆ. ಕುವೆಂಪು ಅವರ ಕೃತಿಯ ಸಾರಾಂಶ ಕೊಡುವ ಅಗತ್ಯ ವಿಲ್ಲ "ಜಾನಪದ ಸಾಹಿತ್ಯದಲ್ಲಿ ರಾಮಾಯಣ" ಇದ್ದುದರಲ್ಲಿ ಸ್ವಾರಸ್ಯವಾಗಿದೆ. ಯಕ್ಷಗಾನಗಳಲ್ಲಿ ಬರುವ ರಾಮಾಯಣದ ಕತೆಗಳ ಸಾರಾಂಶವೂ ದೊರಕುತ್ತದೆ ಒಂದು ಅಧ್ಯಾಯದಲ್ಲಿ.

ಈ ಕೃತಿಯ ಮುಖ್ಯ ಭಾಗವೆನ್ನಬಹುದಾದ "ವಾಲ್ಮೀಕಿ ರಾಮಾಯಣ ಮತ್ತು ತೊರವೆ ರಾಮಾಯಣ : ಕಥಾವಸ್ತು ವಿವೇಚನೆ"ಯಲ್ಲಿ ವಾಲ್ಮೀಕಿ ರಾಮಾಯಣದಲ್ಲಿ ರುವ ಕತೆ ತೊರವೆ ರಾಮಾಯಣದಲ್ಲಿ ಹೇಗಿದೆ ಎಂಬುದರ ಸರಳ ನಿರೂಪಣೆ ಮಾತ್ರ ವಿದೆ. ಇಲ್ಲಿ ಯಾವುದೇ ಕುಶಲ ತೌಲನಿಕ ವಿವೇಚನೆ ಕಾಣಿಸದು. "ತೊರವೆ ರಾಮಾಯಣದ ಮೇಲೆ ಇತರ (ವಾಲ್ಮೀಕೇತರ) ರಾಮಾಯಣಗಳ ಪ್ರಭಾವ" ಅಧ್ಯಾಯದಲ್ಲಿ ಬಿಡಿ ಸಂಗತಿಗಳ ಪಟ್ಟಿ ಇದೆ. ('ವಾಲ್ಮೀಕೇತರ' ರೂಪಕ್ಕಿಂತ 'ವಾಲ್ಮೀಕೀತರ' ಎಂಬ ರೂಪ ಅಪೇಕ್ಷಣೀಯ) ತೌಲನಿಕ ಅಧ್ಯಯನದಲ್ಲಿ ಎಲ್ಲವನ್ನೂ ಪಟ್ಟಿ ಮಾಡಲಾಗುವುದಿಲ್ಲ ; ಮಾಡಬೇಕಾಗಿಲ್ಲ. ಮುಖ್ಯ ಸಂಗತಿಗಳನ್ನು ಆರಿಸಿ ಕೊಂಡು ಪರಸ್ಪರ ಹೋಲಿಸಿ, ಕಂಡುಬರುವ ವ್ಯತ್ಯಾಸಗಳ ಔಚಿತ್ಯ, ಕಾರಣಗಳನ್ನು ಕುರಿತು ವಿಚಾರ ಮಾಡಿದರೆ ಸಾಕು. ಇಲ್ಲಿ ಹಾಗಾಗದೆ ಅಪ್ರಸ್ತುತ ಸಂಗತಿಗಳ ದೀರ್ಘ ಪಟ್ಟಿ ಮಾತ್ರ ದೊರಕುತ್ತದೆ. ಅಡಿಟಿಪ್ಪಣಿ ಮತ್ತು ಗ್ರಂಥಾವಲಿಗಳನ್ನು ಕೊಡುವ ರೀತಿ ಎಲ್ಲವೂ ಅಸಮರ್ಪಕ. ಅಚ್ಚಿನ ತಪ್ಪುಗಳು ಅಸಂಖ್ಯಾತ.

ಪ್ರಾರಂಭದ ಮುನ್ನುಡಿ, ಪ್ರಸ್ತಾವನೆಗಳಲ್ಲಿ ಆಗಿರುವ ಅನಾಹುತಗಳ ಬಗ್ಗೆ ಎರಡು ಮಾತು ಆಡಲೇಬೇಕು. ಬ್ಯಾತನಾಳ ಅವರು ಬರೆದಿರುವ "ಪ್ರಸ್ತಾವನೆ" ಯಲ್ಲಿ ರಾಮಾಯಣದ ಮಹತ್ವ, ಕುಮಾರ ವಾಲ್ಮೀಕಿಯ ಕಾಲ ಇವುಗಳನ್ನು ಕುರಿತಂತೆ ಸ್ವಲ್ಪ ಮಾಹಿತಿ ಸಂಗ್ರಹವಿದೆ. ತೊರವೆ ರಾಮಾಯಣ ತನ್ನ ಕಾಲದ ಜನ ಜೀವನವನ್ನು ಹೇಗೆ ಪ್ರತಿಬಿಂಬಿಸುತ್ತದೆ ಎಂಬುದನ್ನು ಪರಿಚಯ ಮಾಡಿಕೊಡುವಲ್ಲಿ ಈ ಮಾತುಗಳು ಬಂದಿವೆ (ಪು. 10).

''...ವರ್ಣಾಶ್ರಮ ಧರ್ಮ ಪದ್ಧತಿಯ ಸಾಮಾಜಿಕ ವ್ಯವಸ್ಥೆಯಲ್ಲಿ ಆಯಾ ವರ್ಣದವರು ಉಪಯೋಗಿಸುತ್ತಿದ್ದ ಕೆಲವು ವಸ್ತುಗಳ ವಿವರಗಳನ್ನು ತೊ. ರಾ. ದಲ್ಲಿ ನೋಡಬಹುದಾಗಿದೆ.

ಬ್ರಾಹ್ಮಣ : ಔಪಸರರ ಕೊಳವಿ, ಧೋತ್ರ, ಪುಸ್ತಕ, ಸಜ್ಜಿಗೆ, ಹಪ್ಪಳ, ಪುರಿ, ಸಂಡಿಗೆ, ಹೂರಿಗೆ, ಸೇವಿಗೆ, ಬೇಳೆ, ದೋಸೆ, ಕಾವಲಿ

ಕ್ಷತ್ರಿಯ : ಸೀಸಕ, ಕವಚ, ಕೈದು, ಹಯ, ತೇರು, ನಾರಿಯರು.''

ಈ ಪಟ್ಟಿಯ ಪ್ರಕಾರ, ಬ್ರಾಹ್ಮಣರು ಮಾತ್ರ ಹಪ್ಪಳ, ಸಂಡಿಗೆ, ಬೇಳೆ, ದೋಸೆಗಳನ್ನು ತಿನ್ನುತ್ತಿದ್ದರೆಂದೂ, ಕ್ಷತ್ರಿಯರು ಮಾತ್ರ ಹೆಂಗಸರನ್ನು ಹೊಂದಿದ್ದರೆಂದೂ ಅರ್ಥವಾಗುತ್ತದೆ. ಒಬ್ಬ ಪ್ರೌಢಶಾಲಾ ವಿದ್ಯಾರ್ಥಿ ಹೀಗೆ ಬರೆದರೂ ನಾವು ಹಾಸ್ಯಮಾಡಿ ಬಿಡುತ್ತೇವೆ.

ಬ್ಯಾತನಾಳ ಅವರು ತಾವಿರುವ ಮುಂಬಯಿಂದ ಗೋಕಾಕ್ ಅವರು ಬರೆದ ಮುನ್ನುಡಿ ಸಮೇತ ತಮ್ಮ ನಿಬಂಧದ ಹಸ್ತಪ್ರತಿಯನ್ನು ಬೆಂಗಳೂರಿಗೆ ಕಳಿಸಿಕೊಟ್ಟು, ಜೊತೆಗೆ ತಮ್ಮ "ಕೃತಜ್ಞತೆ"ಯ ಮಾತುಗಳನ್ನು ಕಳಿಸಿಕೊಟ್ಟಂತೆ ಕಾಣುತ್ತದೆ. "ಕೃತಜ್ಞತೆ" ಭಾಗದಲ್ಲಿ "ಸಂಶೋಧಪ್ರಬಂಧಕ್ಕೆ ಮೌಲಿಕ ಮುನ್ನುಡಿಯಿತ್ತು ಹರಸಿದ ಹಿರಿಯರಾದ ಮಾನ್ಯ ಡಾ॥ ವಿ. ಕೆ. ಗೋಕಾಕ್ ಅವರಿಗೂ ಅಂತಃಕರಣದ ಹಿತವಚನ ನುಡಿದ ಮಾನ್ಯ ಪ್ರೊ. ಹಂ.ಪ. ನಾಗರಾಜಯ್ಯ ಅವರಿಗೆ ನನ್ನ ಅನಂತ ವಂದನೆಗಳು" ಈ ಮಾತುಗಳಿವೆ. ಆದರೆ ಗೋಕಾಕರ ಮುನ್ನುಡಿ ಈ ಪುಸ್ತಕದಲ್ಲಿ ಇಲ್ಲ ; ಅದರ ಬದಲು ಹಂ. ಪ. ನಾಗರಾಜಯ್ಯನವರ ಮುನ್ನುಡಿ ಇದೆ. "ಬೆಳ್ಳಿ ಬಿಟ್ಟ ಬಳ್ಳಿ ಮಾಲೆ"ಯ ಎಲ್ಲ ಪುಸ್ತಕಗಳಿಗೆ ಪ್ರಧಾನ ಸಂಪಾದಕರಾದ ಶ್ರೀ ನಾಗರಾಜಯ್ಯನವರೇ ಮುನ್ನುಡಿ ಬರೆಯುವುದರಿಂದ, ಗೋಕಾಕರ ಮುನ್ನುಡಿಯನ್ನು ಯಾಕೋ ಬದಿಗಿಟ್ಟರು ; ಪ್ರೂಫ್ ತಿದ್ದಿದವರು "ಕೃತಜ್ಞತೆ"ಯಲ್ಲಿ ಬಂದಿರುವ ಮಾತುಗಳನ್ನು ಹಾಗೇ ಅಚ್ಚು ಮಾಡಿಸಿದರು.

"ಬೆಳ್ಳಿ ಬಿಟ್ಟ ಬಳ್ಳಿ" ಮಾಲೆಯ ಪ್ರಧಾನ ಸಂಪಾದಕರ ಮುನ್ನುಡಿಗಳ ಬಗ್ಗೆ ಇಲ್ಲಿ ಒಂದು ಮಾತು ಹೇಳಲೇಬೇಕು. ಮುನ್ನುಡಿಗಳಲ್ಲಿ ಎರಡು ಬಗೆ ; ತಜ್ಞರ ಮುನ್ನುಡಿ, ಮಾಲೆಯ ಪ್ರಧಾನ ಸಂಪಾದಕರ ಮುನ್ನುಡಿ. ತಜ್ಞರು ಎಲ್ಲ ಬಗೆಯ ಪುಸ್ತಕಗಳಿಗೂ ಮುನ್ನುಡಿ ಬರೆಯುವುದಿಲ್ಲ. ಅವರು ಆ ಕ್ಷೇತ್ರದಲ್ಲಿ ಪರಿಣತರಾಗಿರುವುದರಿಂದ ಅವರು ಮುನ್ನುಡಿ ಬರೆಯುವ ಪುಸ್ತಕದ ಬಗ್ಗೆ ಆಡಿದ ಮಾತುಗಳಿಗೆ ಬೆಲೆ ಇರುತ್ತದೆ ; ಅಂತಹ ಮುನ್ನುಡಿಯ ಕೆಲವು ಭಾಗಗಳನ್ನು ರಕ್ಷಾಪತ್ರದ ಮೇಲೆ ಹಾಕುವುದರಲ್ಲಿ ಔಚಿತ್ಯವಿರುತ್ತದೆ. ಒಂದು ಮಾಲೆಯ ಪ್ರಧಾನ ಸಂಪಾದಕ ಎಷ್ಟೇ ದೊಡ್ಡ ವಿದ್ವಾಂಸನಿರಲಿ ಆ ಮಾಲೆಯಲ್ಲಿ ಬರುವ ಎಲ್ಲ ಪುಸ್ತಕಗಳಿಗೆ ತಜ್ಞ ಮುನ್ನುಡಿಯನ್ನು ಬರೆಯಲು ಸಾಧ್ಯವಿಲ್ಲ. ಆ ಕಾರಣ, ಅವನು ಆ ಮಾಲೆಯ ಉದ್ದೇಶ, ಸ್ವರೂಪಗಳನ್ನು ತನ್ನ ಮುನ್ನುಡಿಯಲ್ಲಿ ವಿವರಿಸಿ, ಅಂತ್ಯದಲ್ಲಿ ಆ ಮಾಲೆಯಲ್ಲಿ ಆ ಕೃತಿಯನ್ನು ಪ್ರಕಟಿಸಲು ಅನುಮತಿ ಕೊಟ್ಟ ಕೃತಿಕಾರನಿಗೆ ಕೃತಜ್ಞತೆ ಹೇಳಿರುತ್ತಾನೆ. ಎಂದರೆ, ಪ್ರಧಾನ ಸಂಪಾದಕರ ಎಲ್ಲ ಮುನ್ನುಡಿಗಳೂ ಒಂದೇ ರೀತಿಯವಾಗಿದ್ದು ಕೊನೆಯ ಪ್ಯಾರಾ ಮಾತ್ರ ಬೇರೆಯಾಗಿರುತ್ತದೆ. ಪ್ರಧಾನ ಸಂಪಾದಕನ ಮಾತುಗಳನ್ನು ತಜ್ಞನ ಮಾತೆಂದು ಕೃತಿಯ ರಕ್ಷಾಪುಟದ ಮೇಲೆ ಹಾಕುವುದು ಹಾಸ್ಯಾಸ್ಪದವಾಗು

ತ್ತದೆ. "ಬೆಳ್ಳಿ ಬಿಟ್ಟ ಬಳ್ಳಿ"ಯ ಪ್ರಧಾನ ಸಂಪಾದಕರು ಈ ಸ್ಪಷ್ಟ ಮತ್ತು ಮುಖ್ಯ ವ್ಯತ್ಯಾಸವನ್ನು ತಿಳಿದುಕೊಂಡಿಲ್ಲವೆಂಬುದು ದೌರ್ಭಾಗ್ಯದ ಸಂಗತಿ. ಮತ್ತು ಪ್ರಧಾನ ಸಂಪಾದಕನ ಹೆಸರು ಪುಸ್ತಕದ ಮೇಲೆ, ಒಳಗೆ ಹಲವೆಡೆ, ಹಿಂದೆ ಹೀಗೆ ಎಲ್ಲ ಕಡೆ ಗಳಲ್ಲೂ ಪ್ರಧಾನವಾಗಿ ಕಾಣಿಸುವಂತೆ ಮಾಡುವುದರ ಬದಲು ಪುಸ್ತಕದ "ಮುನ್ನುಡಿ" ಭಾಗದಲ್ಲಿ ಒಂದು ಕಡೆ ಇದ್ದರೆ ಸಾಕು. ಪ್ರಧಾನವಾಗಿ ಕಾಣಿಸಬೇಕಾದ್ದು ಲೇಖಕರ ಹೆಸರು. ಈ ಮಾತುಗಳು ಕನ್ನಡ ಪ್ರಕಾಶನದ ಆರೋಗ್ಯದ ದೃಷ್ಟಿಯಿಂದ ಗಮನಿಸಬೇಕಾದುವೆಂದು ನಾನು ನಂಬಿದ್ದೇನೆ.

# ಜಾನಪದ

**ಕೆ. ಮರುಳಸಿದ್ದಪ್ಪ, ಎಂ. ಚಿದಾನಂದಮೂರ್ತಿ**

**ಸಿದ್ದಲಿಂಗಯ್ಯ**

ಈ ವರ್ಷ ಜಾನಪದ ಮಹಾಪೂರವೇ ಬಂದಂತಾಗಿದೆ. ಒಟ್ಟು ಇಪ್ಪತ್ತೈದು ಕೃತಿಗಳು ಈ ಸಮೀಕ್ಷೆಗೆ ಒಳಪಟ್ಟಿವೆ. ಹೋದ ವರ್ಷಕ್ಕಿಂತ ಎರಡು ಪಟ್ಟು ಜಾಸ್ತಿ ಸಂಖ್ಯೆಯಲ್ಲಿ ಕೃತಿಗಳು ಪ್ರಕಟವಾಗಿರುವುದಕ್ಕೆ ಕಾರಣ, ಇದು ಕರ್ಣಾಟಕದ ಬೆಳ್ಳಿ ಹಬ್ಬದ ವರ್ಷ. ರಜತವಾರ್ಷಿಕ ಸ್ಮರಣೆಗಾಗಿ ಸರ್ಕಾರದ ನೆರವಿನಿಂದ ಕನ್ನಡ ಸಾಹಿತ್ಯ ಪರಿಷತ್ತು ಅನೇಕ ಕೃತಿಗಳನ್ನು ಪ್ರಕಟಿಸಿತು. ಸರ್ಕಾರದ ಅನುದಾನ ಪಡೆಯುವ ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಗಳು ಹೀಗೆ ಜಾನಪದ ಪ್ರಕಟನೆಗೆ ನೆರವಾಗುವುದು ಅವರ ಕರ್ತವ್ಯ.

ವೈವಿಧ್ಯದ ದೃಷ್ಟಿಯಿಂದ ಈ ವರ್ಷ ಪ್ರಕಟವಾಗಿರುವ ಜಾನಪದ ಕೃತಿಗಳು ಗಮನಾರ್ಹವಾಗಿವೆ. ಜನಪ್ರಿಯ ಪರಂಪರೆಗೆ ಸೇರಿದ ಶಿಶುನಾಳ ಶರೀಫ, ಸಾತು ಕ್ಯಾಮಣ್ಣನಿಂದ ಹಿಡಿದು ಜಾನಪದ ಪರಂಪರೆಯ ಮಹಾಸತಿಯರ ಕಥನ ಗೀತೆಗಳು, ಗ್ರಾಮದೇವತೆಯರು, ಜನಪದ ಬಿಡಿ ಹಾಡುಗಳು, ನಿರ್ದಿಷ್ಟ ಜನಾಂಗದ ಪ್ರಾತಿನಿಧಿಕ ಜನಪದ ಸಾಹಿತ್ಯ, ಜನಪ್ರಿಯ ಗೀತೆಗಳು, ಬೈಗುಳಗಳು, ನಂಬಿಕೆ, ಶಿಶುಪ್ರಾಸ, ಜನಪದ ಕಥೆ, ಮತ್ತು ಜಾನಪದ ವಿಚಾರ–ವಿಮರ್ಶೆಗಳಿವೆ. ಅರ್ಧಪಾಲಿನ ಸಂಖ್ಯೆಯ ಕೃತಿಗಳು ಜಾನಪದ ವಿಚಾರ ವಿಮರ್ಶೆಗಳಿಗೇ ಮೀಸಲಾಗಿರುವುದು, ಜಾನಪದ ಸಂಕಲನಗಳಲ್ಲಿಯೂ ಸಾಂಸ್ಕೃತಿಕ ಹಿನ್ನೆಲೆಯಲ್ಲಿ ದೊರೆತ ಸಾಮಗ್ರಿಯನ್ನು ವಿಶ್ಲೇಷಿಸುವ ಪ್ರಯತ್ನ ನಡೆದಿರುವುದನ್ನು ನೋಡಿದರೆ ಕರ್ನಾಟಕದಲ್ಲಿ ಜಾನಪದ ಅಧ್ಯಯನವನ್ನು ಗಂಭೀರ ಶಿಸ್ತನ್ನಾಗಿ ಪರಿಗಣಿಸಿರುವುದು ಗೋಚರವಾಗುತ್ತದೆ. ಈ ಮಾತಿಗೆ ಅಪವಾದವಾಗಿ ಸಂತೆಗೆ ಮೂರು ಮೊಳ ನೆಯ್ದ ಸಂಗ್ರಹಗಳೂ ಈ ವರ್ಷ ಇಲ್ಲದಿಲ್ಲ. ಆದರೆ ಒಟ್ಟಾರೆಯಾಗಿ ನೋಡಿದಾಗ ಈ ಬಗೆಯ ಅಪೂರ್ಣತೆಗಳನ್ನು ನಿರ್ಲಕ್ಷಿಸಬಹುದಾಗಿದೆ. ಇತ್ತೀಚಿನ ತರುಣರು ವೈಜ್ಞಾನಿಕವಾಗಿ ವೈಚಾರಿಕವಾಗಿ ಜವಾಬ್ದಾರಿಯಿಂದ ತಮ್ಮ ಅಧ್ಯಯನದತ್ತ ಮನಸ್ಸು ಹಾಕುತ್ತಿರುವುದು ಕನ್ನಡ ಜಾನಪದ ಕ್ಷೇತ್ರದ ಭವಿಷ್ಯಕ್ಕೊಂದು ಶುಭ ಸೂಚನೆಯಂತಿದೆ. 'ಬರಕೋ ಪದ ಬರಕೋ', 'ದಾಸಪ್ಪ-ಜೋಗಪ್ಪ', 'ಕತ್ತಾಲ ದಾರಿ ದೂರ', 'ಉತ್ತರ ಕನ್ನಡದ ಹವ್ಯಕರ ಜನಪದ ಕಥೆಗಳು', 'ನಲ್ಲೂರು ದೊರೆ ಕಾಳಿ', 'ಬೀದರ್ ಜಿಲ್ಲೆಯ ಶಿಶುಪ್ರಾಸಗಳು'—ಇಂತಹ ಕೃತಿಗಳು ಯಾವುದೇ ಭಾಷೆಯ ಜಾನಪದ ಅಧ್ಯಯನಕ್ಕೆ ಶೋಭೆ ತರುತ್ತವೆ.

'ಕರ್ನಾಟಕ ಜಾನಪದ'ದಂತಹ ಸಾಮೂಹಿಕ ವಿದ್ವತ್ ಪ್ರಯತ್ನ ಕನ್ನಡ ಜಾನಪದ ಅಧ್ಯಯನದ ಒಂದು ಮೈಲಿಗಲ್ಲು. ಇಷ್ಟೆಲ್ಲಾ ಸಾಧನೆಗಳಿರುವ ಈ ವರ್ಷವನ್ನು ಕನ್ನಡ ಜಾನಪದದ ಸಮೃದ್ಧಿಯ ವರ್ಷವೆಂದೇ ಹೇಳಬಹುದು.

ಬರಕೋ ಪದ ಬರಕೋ : (ಸಂ.) ಶಿವಾನಂದ ಗುಬ್ಬಣ್ಣವರ

ಹತ್ತೊಂಬತ್ತನೆ ಶತಮಾನದ ಅನುಭಾವಿ ಶಿಶುನಾಳ ಶರೀಫರ ತತ್ವ ಪದಗಳ ಸಮಗ್ರ ಸಂಕಲನವಿದು. ಅನೇಕ ಜನಪ್ರಿಯ ಆವೃತ್ತಿಗಳಲ್ಲಿ ಚೆದುರಿ ಹೋಗಿದ್ದಂತೆ ಶರೀಫರ ಗೀತೆಗಳು ಇಲ್ಲಿಯವರೆಗೆ ಪ್ರಕಟಗೊಂಡಿದ್ದವು. ಪ್ರಸ್ತುತ ಸಂಕಲನಕಾರರು ಶಿಶುನಾಳ, ಮಂಡಿಗನಾಳ. ಮುಂತಾದ ಸ್ಥಳಗಳಲ್ಲಿ ಸಂಚರಿಸಿ ಹಾಡುಗಾರರಿಂದ ಹಾಡಿಸಿ ಹೆಚ್ಚಿನ ಪದಗಳನ್ನು ಬರೆದುಕೊಂಡಿದ್ದಾರೆ. ಶರೀಫರಂತಹ ಜನಪ್ರಿಯ ಕವಿಗಳ ಸಮಗ್ರ ಹಾಡುಗಳನ್ನು ಗುರುತಿಸುವುದು, ಅಸಲಿ ಹಾಡುಗಳೊಂದಿಗೆ ಬೆರೆತು ಹೋಗಿರಬಹುದಾದ ಅನ್ಯರಚಿತ ನಕಲಿ ಹಾಡುಗಳನ್ನು ಪ್ರತ್ಯೇಕಿಸಿ, ಸಮಗ್ರ ಹಾಡುಗಳನ್ನು ಸಂಗ್ರಹಿಸುವುದು ಅತಿ ದುಸ್ತರದ ಕೆಲಸ. ಈ ಸಂಗ್ರಹದಲ್ಲಿ ನಾಲ್ಕು ನೂರಾ ಹತ್ತು ಹಾಡುಗಳನ್ನು ಒಂದೆಡೆ ಕಲೆ ಹಾಕುವ ಮೂಲಕ ಇಲ್ಲಿಯವರೆಗೆ ನಡೆದ ಪ್ರಯತ್ನಗಳೆಲ್ಲವನ್ನೂ ಗುಬ್ಬಣ್ಣನವರು ಮೀರಿದ್ದಾರೆ. ದೊರತ ಹಾಡುಗಳನ್ನು ಶಾಸ್ತ್ರೀಯವಾಗಿ ವಿಂಗಡಿಸಿದ್ದಾರೆ. ಹಾಡುಗಳಲ್ಲಿ ಬರುವ ಆಚರಣೆಗಳು, ಹಬ್ಬಗಳು, ಜಾತ್ರೆ-ದೈವಗಳನ್ನು ಕುರಿತ ಟಿಪ್ಪಣಿಯಿದೆ. ಹಾಡುಗಳಲ್ಲಿ ಉಲ್ಲೇಖಗೊಂಡ ಊರುಗಳನ್ನು -ಕುರಿತು ಸಂಗ್ರಹವಾಗಿ ಮಾಹಿತಿ ದೊರಕಿಸಿದ್ದಾರೆ. ಗ್ರಾಮ್ಯ, ಪಾರಿಭಾಷಿಕ ಮತ್ತು ವಿಶಿಷ್ಟ ಪದಗಳ ಅರ್ಥ ತಿಳಿಯಲು ಅನುಕೂಲವಾಗುವಂತೆ ಶಬ್ದಕೋಶವಿದೆ. ಶರೀಫರ ಕಾಲ-ದೇಶ-ಜೀವನ ವಿವರಗಳನ್ನು ಕುರಿತಂತೆ, ಆ ಕಾಲದ ಸಾಂಸ್ಕೃತಿಕ ವಿವರಗಳಿಗೆ ಸಂಬಂಧಿಸಿದಂತೆ, ಅನುಭಾವ ಗೀತೆ-ತತ್ವಪದ-ಲಾವಣಿ-ಮಂಗಳಾರತಿ–ರಿವಾಯತ್-ಕಾಲಜ್ಞಾನ-ಇವೆಲ್ಲವುಗಳ ಪರಿಚಯಕ್ಕೆ ಅನುವಾಗುವಂತೆ ವಿಸ್ತಾರವಾಗಿ ಪ್ರಸ್ತಾವನೆ ಬರೆದಿದ್ದಾರೆ.

ಕನ್ನಡ ನಾಡಿನಲ್ಲಿ ಹತ್ತೊಂಬತ್ತನೆ ಶತಮಾನದಲ್ಲಿ ಬೀಸಿ ಹೋದ ಅನುಭಾವಿ ಪರಂಪರೆಯ ಆಂದೋಲನದ ಸಾಂಸ್ಕೃತಿಕ ಅಧ್ಯಯನಕ್ಕೆ ಪೂರಕವಾಗುವಂತಹ ಕೃತಿಯನ್ನು ಪ್ರಕಟಿಸಿದ ಲೇಖಕರು ಅಭಿನಂದನಾರ್ಹರು. ಶರೀಫ್ ಸಾಹೇಬರನ್ನು ಶಾಸ್ತ್ರೀಯ ಅರ್ಥದಲ್ಲಿ ಜನಪದ ಕವಿ ಎಂದು ಗುರುತಿಸುವಂತಿಲ್ಲವಾದರೂ ಅವರ ಪದಗಳೆಲ್ಲ ಇಂದಿನವರೆಗೂ ಪ್ರಸಾರವಾಗಿರುವುದು, ಉಳಿದುಕೊಂಡು ಬಂದಿರುವುದು ವಾಕ್ ಪರಂಪರೆಯಲ್ಲಿ ಎಂಬುದನ್ನು ನೆನೆದರೆ ಅವುಗಳಿಗಿರುವ ಜಾನಪದ ಮಹತ್ವ ಅರಿವಾದೀತು. ವಚನಕಾರರು, ದಾಸರು, ಸರ್ವಜ್ಞ, ನಿಜಗುಣ ಶಿವಯೋಗಿ, ಮುಪ್ಪಿನ ಷಡಕ್ಷರಿಯಂತಹ ನೂರಾರು ಜನಪ್ರಿಯ ಅನುಭಾವಿ ಕವಿಗಳ ಸಾಲಿನಲ್ಲಿ ಶರೀಫರು ಸೇರಿಹೋಗಿದ್ದಾರೆ. ಅವರು ಹುಟ್ಟಿನಿಂದ ಮುಸ್ಲಿಮರೆನ್ನುವುದು ಕೇವಲ ಒಂದು ಸಂಗತಿ ಸತ್ಯವಾಗಿ ಮಾತ್ರ ಉಳಿದಿದೆ. ಇಂದಿಗೂ ಶಿಶುನಾಳದ ಶರೀಫರ ಗದ್ದುಗೆಗೆ

ಭಕ್ತಿಯಿಂದ ನಡೆದುಕೊಳ್ಳುವ ಹಿಂದೂಗಳು ಅವರನ್ನು ತಮ್ಮ ನೂರಾರು ಸಂತರಲ್ಲೊಬ್ಬರೆಂದೇ ಪರಿಗಣಿಸುತ್ತಾರೆ. ಹಿಂದೂ ಮುಸ್ಲಿಂ ಮೈತ್ರಿಗೆ ಶರೀಫರು ಒಂದು ಸಂಕೇತ ಮುಂತಾಗಿ ಹೇಳುವುದು ಕೇವಲ ಅಲಂಕಾರಿಕವಾದೀತು. ಎಲ್ಲ ಧರ್ಮಗಳ ಎಲ್ಲೆಯನ್ನೂ ಮೀರಿದ ಅನುಭಾವಿಯಾದ ಅವರ ಗೀತೆಗಳಿರುವ ಮಹತ್ವವೂ ಕೇವಲ ಧಾರ್ಮಿಕವಾದುದಲ್ಲ. ತಮ್ಮ ಕಾಲದ ಸಾಮಾಜಿಕ ಆರ್ಥಿಕ ಶೋಷಣೆಯ ವಿವಿಧ ನೆಲೆಗಳನ್ನು ಅವರು ತಮ್ಮ ಗೀತೆಗಳಲ್ಲಿ ಕಂಡುಕೊಂಡಿದ್ದಾರೆ. ಶರೀಫರ ಚೇತನ ಅನುಭಾವದ ಮುಗಿಲಿನಲ್ಲಿ ವಿಹರಿಸಿದರೂ ಅವರ ಮೂಲ ಬೇರು ಉತ್ತರ ಕರ್ನಾಟಕದ ಮಣ್ಣಿನಲ್ಲಿ ಹುದುಗಿದೆಯೆಂದೇ ಅವರ ಗೀತೆಗಳು ಕರ್ನಾಟಕದ ಸಾಂಸ್ಕೃತಿಕ ಇತಿಹಾಸದ ಮಹತ್ವದ ದಾಖಲೆಗಳಾಗಿ ಉಳಿಯುತ್ತವೆ. 'ಬರಕೋ ಪದ ಬರಕೋ' ಎಂಬ ಕೃತಿ. ಈ ಎಲ್ಲ ಚರ್ಚೆಗೂ ಅನುವಾಗುವಂತೆ ಸಮಗ್ರವಾಗಿ ಹೊರ ಬಂದಿರುವುದು ಸಂತಸದ ವಿಚಾರವಾಗಿದೆ.

ಸಾತು ಕ್ಯಾಮಣ್ಣನ ಲಾವಣಿಗಳು : (ಸಂ.) ನಿಂಗಣ್ಣ ಸಣ್ಣಕ್ಕಿ

ಉತ್ತರ ಕರ್ನಾಟಕದ ಜನಪ್ರಿಯ ಪರಂಪರೆಯ ಲಾವಣಿಕಾರರಲ್ಲಿ ಒಬ್ಬನಾದ ಸಾತುಕ್ಯಾಮಣ್ಣನ ಹದಿನೈದು ಲಾವಣಿಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇಲ್ಲಿನ ಬಹುಪಾಲು ಲಾವಣಿಗಳಿಗೆ ಪೌರಾಣಿಕ ವ್ಯಕ್ತಿ ಸಂಗತಿಗಳೇ ವಸ್ತುವನ್ನೊದಗಿಸಿವೆ. ತತ್ವ ಚಿಂತನೆ, ಸ್ತುತಿ ಪರವಾದ ಲಾವಣಿಗಳೂ ಇವೆ. ಎರಡು ಮೂರು ಲಾವಣಿಗಳಿಗೆ ಸಮಕಾಲೀನ ಹಿನ್ನೆಲೆಯಿದೆ. 'ನಾವ ಮುಳುಗಿದ ಲಾವಣಿ' ಕ್ರಿ.ಶ. 1914ರಲ್ಲಿ ನಡೆದ ಘಟನೆಯೊಂದನ್ನು ಕಥಿಸುತ್ತದೆ. ನದಿಯ ಪ್ರವಾಹದಲ್ಲಿ ಮುಳುಗಿ ಹೋದ ದೋಣಿಯೊಂದರಲ್ಲಿದ್ದು ಪಾರಾಗಿ ಬಂದ ಕೆಲವೇ ವ್ಯಕ್ತಿಗಳಲ್ಲಿ ಒಬ್ಬಾಕೆಯಿಂದ ಕಥಾ ವಿವರವನ್ನು ಸಂಗ್ರಹಿಸಿದ್ದ ಸಾತು ಕ್ಯಾಮಣ್ಣ 'ನಾವ ಮುಳುಗಿದ ಲಾವಣಿ' ಬರೆದಿದ್ದಾನೆ. ಹಲವಾರು ಹಳ್ಳಿಯ ಜನರನ್ನು ಬಲಿ ತೆಗೆದುಕೊಂಡ ಈ ದುರಂತ ಘಟನೆಯ ಘೋರ ಪರಿಣಾಮವನ್ನು ಆ ಕಾಲದ ಜನ ಕಥೆಕಟ್ಟಿ ಹೇಳಿದಂತೆ ; ಮನೆ ಮನೆಗಳಲ್ಲಿ ಕವೀಶ್ವರರು ಹುಟ್ಟಿದರಂತೆ—ಹೀಗೆ ವರ್ಣಿಸುವ ಸಾತು ಕ್ಯಾಮಣ್ಣನ ಲಾವಣಿಯೂ ದುರಂತ ರಮ್ಯವಾಗಿದೆ. ಅನೇಕ ಲಾವಣಿಗಳನ್ನು ಬಯಲಾಟಗಳನ್ನು ಬರೆದಿದ್ದನೆಂದು ಈ ಗ್ರಂಥ ಒಂದು ಮಹತ್ವದ ಘಟ್ಟವಾಗಿದ್ದು, ಮುಂದೆ ಒಂದೊಂದಾಗಿ ಎಲ್ಲ ಕೃತಿಗಳೂ ಪ್ರಕಟವಾಗಬಹುದೆಂದು ನಿರೀಕ್ಷಿಸಬಹುದಾಗಿದೆ. ಪ್ರತೀತಿಯಿರುವ ಸಾತುಕ್ಯಾಮಣ್ಣನ ಕೃತಿಗಳ ಸಂಗ್ರಹದಲ್ಲಿ ಪ್ರಕಟವಾಗಿರುವ ಸಾತು ಕ್ಯಾಮಣ್ಣನ ಜೀವನ ವಿವರಗಳೊಂದಿಗೆ ಅವನ ಕೃತಿಗಳ ಪರಿಚಯವನ್ನೂ ಮಾಡಿಕೊಡುವ ಸಂಪಾದಕರ ಪ್ರಸ್ತಾವನೆ ಅಭ್ಯಾಸಪೂರ್ಣವಾಗಿದೆ.

ಕತ್ತಾಲ ದಾರಿ ದೂರ : (ಸಂ.) ಕೃಷ್ಣಮೂರ್ತಿ ಹನೂರ

ಕನ್ನಡ ನಾಡಿನ ಚಿತ್ರದುರ್ಗ ಜಿಲ್ಲೆಯ ಇತಿಹಾಸ, ಸಾಹಸ ಪರಾಕ್ರಮಗಳಿಂದ ತುಂಬಿ ಹೋಗಿದೆ. ಜಿಲ್ಲೆಯ ತುಂಬ ಕಾಣಸಿಗುವ ಕೋಟೆ ಕೊತ್ತಲಗಳು ಇಲ್ಲಿ

ಹೋರಾಡಿ ಅಳಿದ ಪಾಳೆಯಗಾರರ ವೀರ ಗಾಥೆಗಳಾಗಿವೆ. ಊರುಗಳ ಸುತ್ತ ಅವರ ಪರಾಕ್ರಮಗಳಿಗೆ ಸಾಕ್ಷಿಯಾಗಿ ವೀರಗಲ್ಲುಗಳಿವೆ. ವೀರರನ್ನನುಸರಿಸಿ ಚಿತೆಯೇರಿದ ಸತಿಯರ ಮಹಾಸತಿ ಕಲ್ಲುಗಳಿವೆ. ಇವರೆಲ್ಲರನ್ನೂ ಹಾಡಿ ಹೊಗಳುವ ಹಾಡು. ಲಾವಣಿ, ಐತಿಹ್ಯಗಳು ಹಳ್ಳಿ ಹಳ್ಳಿಗಳಲ್ಲಿಯೂ ಪ್ರಚಾರದಲ್ಲಿವೆ. ಪ್ರಸ್ತುತ ಸಂಕಲನದಲ್ಲಿ ಹನೂರರು ಚಿತ್ರದುರ್ಗ ಜಿಲ್ಲೆಯಲ್ಲಿ ಸಂಗ್ರಹಿಸಿ ಸಂಪಾದಿಸಿದ ಏಳೆಂಟು ಕಥನ ಗೀತೆಗಳ ವಸ್ತು, ಮಹಾಸತಿಯರಿಗೆ ಸಂಬಂಧಿಸಿದೆ. ಉಳಿದವು ಪೌರಾಣಿಕ-ಕೌಟುಂಬಿಕವೆನ್ನ ಬಹುದಾದ ಸ್ಥೂಲ ಹಿನ್ನೆಲೆ ಪಡೆದಿದ್ದರೂ ತಮ್ಮ ಸುತ್ತಣ ಪರಿಸರವನ್ನೇ ಉಸಿರಾಡುತ್ತಿವೆ.

ಸಂಪಾದಕರು ತಮ್ಮ ದೀರ್ಘವಾದ ಪ್ರಸ್ತಾವನೆಯಲ್ಲಿ ಚಿತ್ರದುರ್ಗ ಜಿಲ್ಲೆಗಿರುವ ಜಾನಪದೀಯ ಮಹತ್ವ, ದೇವದಾಸಿ ಪದ್ಧತಿ, ಸಹಗಮನ-ಅನುಗಮನ, ಮಹಾಸತಿ ಆಚರಣೆಯ ವಿವರಗಳು, ಸ್ತ್ರೀ ಬಲಿದಾನದ ಇತರ ಪ್ರಕಾರಗಳು ಮತ್ತು ಈ ಎಲ್ಲ ಕಥನ ಗೀತೆಗಳ ಬೆನ್ನೆಲುಬಾದ ಗ್ರಾಮೀಣ ಬದುಕಿನ ರೀತಿ ನೀತಿ ರಿವಾಜುಗಳನ್ನು ರಮ್ಯವಾಗಿ ವಿವರಿಸಿದ್ದಾರೆ. ಈ ವಿವರಣೆ ಕೇವಲ ಭಾವುಕವಾದ ರಮ್ಯವೂ ಆಗಿರದೆ ಜಡವಾದ ಶಾಸ್ತ್ರೀಯವೂ ಆಗಿರದೆ ಪ್ರಗತಿಪರ ವಿಚಾರ ವಿಮರ್ಶೆಗಳಿಂದ ತುಂಬಿಕೊಂಡಿದೆ. ನಮ್ಮ ಮಹಾಸತಿ ಪದ್ಧತಿ, ಬಲಿದಾನದಂತಹ ಆಚರಣೆಗಳ ಹಿಂದೆ ಸ್ವಯಂಪ್ರೇರಿತ ತ್ಯಾಗಕ್ಕಿಂತ ಒತ್ತಾಯದ ಅಮಾನುಷ ಕ್ರೌರ್ಯಗಳೇ ಹೆಚ್ಚಿನ ಸಂಖ್ಯೆಯಲ್ಲಿ ಇದ್ದಿರಬಹುದಾದ ಸಾಧ್ಯತೆಯನ್ನು ಸಂಪಾದಕರು ಮನಗಂಡಿರುವುದು ನ್ಯಾಯವಾಗಿಯೇ ಇದೆ. ತಮಗೆ ದೊರೆತ ಸಾಂಸ್ಕೃತಿಕ ದಾಖಲೆಗಳ ಸಂಗತಿ ಸತ್ಯದ ಹಿಂದೆ ಅಡಗಿರಬಹುದಾದ ಎಷ್ಟೋ ಅಂಶಗಳನ್ನು ಅವರು ನಿರ್ಲಿಪ್ತವಾಗಿ ಪರಿಶೀಲಿಸಿದ್ದಾರೆ. 'ಸಾಹಿತ್ಯ ಸಂಗ್ರಹಾನುಭವದ ಕೆಲವು ಪುಟಗಳು' ಈ ಸಂಕಲನದ ಸಲುವಾಗಿ ಅವರು ಪಟ್ಟ ಪಾಡುಗಳನ್ನು ರಸವತ್ತಾಗಿ ವಿವರಿಸುತ್ತವೆ.

ಐತಿಹಾಸಿಕ ಲಿಖಿತ ದಾಖಲೆಗಳಾದ ಶಾಸನ ಮತ್ತು ಕಾವ್ಯಗಳು ಭಾರತದ, ಮೇಲುವರ್ಗದ ಇತಿಹಾಸವನ್ನು ವೈಭವಿಸಿದರೆ, ಜನಪದ ಸಾಹಿತ್ಯದ ಹಾಡುಗಳು ಲಾವಣಿಗಳು ಮತ್ತು ಐತಿಹ್ಯಗಳು ಸಾಮಾನ್ಯರ ಬದುಕಿನ ವಿವರವನ್ನು ಕಟ್ಟಿಕೊಡುತ್ತವೆ. ಇವೆರಡೂ ದಾಖಲೆಗಳನ್ನು ಪರಸ್ಪರ ಪೂರಕವಾಗಿ ಬಳಸಿಕೊಂಡ ಇತಿಹಾಸ ಮಾತ್ರ ಬೆಲೆಯುಳ್ಳ ಸಾಂಸ್ಕೃತಿಕ ದಾಖಲೆಯಾಗುತ್ತದೆ. ಆದರೆ ನಮ್ಮ ಇತಿಹಾಸವೆಲ್ಲ ಕೇವಲ ಅಭಿಜಾತ ಪರಂಪರೆಯ ದಾಖಲೆಗಳನ್ನು ಮಾತ್ರ ಬಳಸಿಕೊಂಡು ಜಾನಪದ ಪರಂಪರೆಯನ್ನು ಕಡೆಗಣಿಸಿದೆ. ಇದಕ್ಕೆ ಕಾರಣ, ಈ ನಿಟ್ಟಿನಲ್ಲಿ ಸಮೃದ್ಧ ಜಾನಪದ ಸಂಗ್ರಹ ಕಾರ್ಯ ನಡೆಯದೇ ಇರುವುದು. ಪ್ರಸ್ತುತ ಸಂಕಲನದಂತಹ ಕೃತಿಗಳಿಂದ ಜಾನಪದ ಕ್ಷೇತ್ರಕ್ಕೆ ಸಿಗುವ ಲಾಭಕ್ಕಿಂತ ಇತಿಹಾಸಕ್ಕೆ ಸಿಗುವ ಲಾಭ ಮಹತ್ವಪೂರ್ಣವಾದುದು. ಇಂತಹ ಅಪೂರ್ವ ಬಗೆಯ–ಇತಿಹಾಸ ಸಂಶೋಧನೆ ಮತ್ತು ಜಾನಪದ ಅಧ್ಯಯನವೆರಡಕ್ಕೂ ಅವಕಾಶವಿರುವ-ಸಾಮಗ್ರಿಯನ್ನು ಹೊರತಂದು ಪ್ರಕಟಿಸಿದ ಸಂಪಾದಕರು ಅಭಿನಂದನಾರ್ಹರು.

ನಲ್ಲೂರು ದೊರೆ ಕಾಳಿ : (ಸಂ.) ನಲ್ಲೂರು ಪ್ರಸಾದ್

ಈ ವರ್ಷ ಪ್ರಕಟವಾಗಿರುವ ಜಾನಪದ ಗ್ರಂಥಗಳಲ್ಲಿ ಇದೊಂದು ವಿಶಿಷ್ಟ ಬಗೆಯ ಕೃತಿ. ಗ್ರಾಮದೇವತೆಯೊಬ್ಬಳನ್ನು ಕೇಂದ್ರವಾಗಿಟ್ಟುಕೊಂಡು ಹಳ್ಳಿಯೊಂದರ ಧಾರ್ಮಿಕ, ಸಾಮಾಜಿಕ ಬದುಕನ್ನು ಹಬ್ಬ ಜಾತ್ರೆ, ಆಚರಣೆಗಳ ಸಮೇತ ಪರಿಚಯ ಮಾಡಿಕೊಡುವ ಪ್ರಯತ್ನವನ್ನು ಇಲ್ಲಿ ಕಾಣಬಹುದಾಗಿದೆ. ಸಂಗ್ರಹವಾಗಿ ಊರಿನ ಭೌಗೋಳಿಕ ವಿವರ, ಆರ್ಥಿಕ ಸ್ಥಿತಿಗಳ ನೋಟವೂ ಕಾಣಸಿಗುತ್ತದೆ. ಹಳ್ಳಿಯ ಎಲ್ಲ ಚಟುವಟಿಕೆಗಳಿಗೂ ಕೇಂದ್ರವಾಗಿರುವ ಗ್ರಾಮದೇವತೆ ದೊರೆ ಕಾಳಿಗೆ ಸಂಬಂಧಿಸಿದ ಉತ್ಸವಗಳು, ಜಾತ್ರೆ, ಆಚರಣೆಗಳ ಸಮಗ್ರ ಪರಿಚಯವಿದೆ. ಇದೆಲ್ಲಕ್ಕೂ ಹಿನ್ನೆಲೆ ಯಾಗಿ ದೊರೆ ಕಾಳಿಗೆ ಸಂಬಂಧಿಸಿದ ಹತ್ತಾರು ಸುಂದರ ಜನಪದ ಗೀತೆಗಳನ್ನು ಸಂಗ್ರಹಿಸಿದ್ದಾರೆ. ದೊರೆ ಕಾಳಿಯು ಮೂಲದಲ್ಲಿ ವೈಷ್ಣವ ದೇವತೆಯಿದ್ದು ಕ್ರಮೇಣ ಕಾಳಿಯಾಗಿ ಗ್ರಾಮದೇವತೆಯಾಗಿರುವ ಸಾಧ್ಯತೆಯನ್ನು ಊಹಿಸಲು ಪ್ರಯತ್ನ ಪಟ್ಟಿದ್ದಾರೆ. ನಲ್ಲೂರಿನವರೇ ಆದ ಸಂಪಾದಕರನ್ನು ಈ ವಿಚಾರದಲ್ಲಿ ಪ್ರಶ್ನಿಸಿ ಸಂದೇಹಿಸುವುದು ಸಾಹಸದ ಮಾತಾದರೂ ಒಂದು ಅಂಶವನ್ನು ಮಾತ್ರ ಗಮನಿಸ ಬೇಕಾಗಿದೆ. ಈ ನಾಡಿನ ಯಾವುದೇ ದೇವತೆ-ಆಚರಣೆಗಳು ಸಂಸ್ಕೃತೀಕರಣಕ್ಕೆ ಒಳಗಾಗುವ ಸಂಭವವೇ ಹೆಚ್ಚು; ಸಾಧ್ಯತೆಯೂ ಅದೇ ಆಗಿರುತ್ತದೆ. ದೊರೆ ಕಾಳಿಗೂ ಸಂಬಂಧಿಸಿದಂತೆ ಸಂಪಾದಕರೇ ಹೇಳಿರುವಂತೆ ಆಕಾರವಿಲ್ಲದ ಮೂಲ ವಿಗ್ರಹ ವೊಂದಿದೆ : ಮುಂದಿನ ಕಾಲದಲ್ಲಿ ಲಕ್ಷ್ಮಿಯ ಆಕಾರವಿರುವ ವಿಗ್ರಹ ಪ್ರಚಾರಕ್ಕೆ ಬಂದಿದೆ. ಈ ಸಂಗತಿಯನ್ನು ಆಧರಿಸಿ ಊಹಿಸುವುದಾದರೆ ವಿಗ್ರಹವನ್ನು ಕೆತ್ತಿಸುವ ಕಾಲದಲ್ಲಿ ಸಾಕಷ್ಟು ವಿದ್ಯಾವಂತರಲ್ಲದ ದೊರೆ ಕಾಳಿಯ ಭಕ್ತರು ಮೇಲು ಜಾತಿಯವರ ನಿರ್ದೇಶನದಲ್ಲಿ ಕೆಲಸ ಮಾಡಿಸಿರಬಹುದು. ಇಂದಿಗೂ ಅರ್ಚಕರಾಗಿರುವ ಈ ಮೇಲು ಜಾತಿಯವರ ಕೈವಾಡದಿಂದ ಕಾಳಿಯು ಲಕ್ಷ್ಮಿಯಾಗಿ ವಿಗ್ರಹರೂಪ ಪಡೆದಿರಲೂ ಬಹುದು. ಹೀಗೆ ತರ್ಕಿಸಲು ತಕ್ಕ ಆಧಾರಗಳು ಸಂಪಾದಕರ ಮಾತಿನಲ್ಲಿಯೇ ಹುದುಗಿವೆ. ಊಹಾಪೋಹಗಳೇನೇ ಇರಲಿ, ಒಂದು ದೇವತೆಗೆ ಸಂಬಂಧಿಸಿದಂತೆ ಇಷ್ಟೊಂದು ಸಮಗ್ರವಾಗಿ ಆಚರಣೆಗಳನ್ನು, ಹಾಡುಗಳನ್ನು ಕಲೆಹಾಕಿ ಸಾಕಷ್ಟು ವಿವೇಕದಿಂದ ವಿಶ್ಲೇಷಿಸುವ ಸಂಪಾದಕರ ಪ್ರಯತ್ನ ಪ್ರಶಂಸನೀಯವಾಗಿದೆ. ತಮ್ಮ ಸ್ವಂತ ಊರಿಗೇ ಸೇರಿದ ಜಾನಪದ ಅಧ್ಯಯನವಾದರೂ ಉಡಾಫೆಯ ತೀರ್ಮಾನ, ಗಳಿಗೆ ಬರದೆ ವೈಜ್ಞಾನಿಕವಾಗಿ ಮುಂದುವರಿದ ನಿರೂಪಕರ ಪರಿಚಯ, ಅರ್ಥಕೋಶ, ಆಯಗಾರರ ಮಾಹಿತಿ, ಹರಕೆ ಮತ್ತು ಒಕ್ಕಲುಗಳಿಗೆ ಸಂಬಂಧಿಸಿದಂತಹ ನಂಬಿಕೆಗಳು. ಜಾತ್ರೆ-ಉತ್ಸವದ ನಿರೂಪಣೆ—ಮುಂತಾದುವನ್ನೆಲ್ಲಾ ಎಚ್ಚರದಿಂದ ಪರಿಶೀಲಿಸಿ ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಅಲ್ಲಲ್ಲಿ ಕಾಣಸಿಗುವ ಮುದ್ರಣ ದೋಷಗಳು ಅರ್ಥಕ್ಕೆ ಭಂಗ ತರುವಂತಿರುವುದನ್ನು ನಿವಾರಿಸಬಹುದಿತ್ತು. ದೊರೆಕಾಳಿಯ ಫೋಟೋ ಪ್ರತಿಯೊಂದನ್ನು ಮುಖಪುಟದಲ್ಲಿ ಅಚ್ಚು ಹಾಕಿಸಿದ್ದರೆ ರಕ್ಷಾಕವಚದ ಅರ್ಥವಂತಿಕೆ ಹೆಚ್ಚಾಗುತ್ತಿತ್ತು.

ಬಣ್ಣವಾಡು : (ಸಂ.) ದೇವಂಗಿ ಚಂದ್ರಶೇಖರ

ಹಲವು ಪ್ರಕಟಿತ ಮೂಲಗಳಿಂದಲೇ ಆಯ್ದ ಜನಪದ ಗೀತೆಗಳ ಸಂಕಲನವಿದು. ಈ ವಿಚಾರವನ್ನು ಸಂಪಾದಕರೇ ಪ್ರಸ್ತಾವನೆಯಲ್ಲಿ ಒಪ್ಪಿಕೊಂಡಿರುವಾಗ ಆಯಾ ಮೂಲಗಳ ಮಾಹಿತಿಯನ್ನು ಏಕೆ ಒದಗಿಸಲಿಲ್ಲವೋ ಗೊತ್ತಾಗುವುದಿಲ್ಲ. ಹಲವು ಬಗೆಯ ನೂರಾರು ಜನಪದ ಗೀತೆಗಳನ್ನು ಇಲ್ಲಿ ಆಯ್ದುಕೊಳ್ಳಲಾಗಿದೆ. ಜನಪ್ರಿಯ ಹಾಡುಗಳಿಗೆ ಸಹಜವಾಗಿಯೇ ಆದ್ಯತೆ ದೊರೆತಿರುವಂತಿದೆ. ಜನಪದ ಗೀತೆಗಳ ಹಾಡುಗಾರರಿಗೆ ಮಾತ್ರ ಇಂತಹ ಸಂಕಲನಗಳು ಹೆಚ್ಚು ಉಪಯುಕ್ತವೆನಿಸುತ್ತವೆ. ವೈಜ್ಞಾನಿಕ ರೀತಿಯಲ್ಲಿ ಜನಪದ ಸಾಹಿತ್ಯ ಸಂಗ್ರಹ ಮತ್ತು ಅಧ್ಯಯನ ಇಂತಹ ಕೃತಿಗಳ ಗುರಿಯಲ್ಲಿರುವುದರಿಂದ ಆ ಬಗೆಯ ವಿಮರ್ಶೆಯೂ ಇಲ್ಲಿಗೆ ಅಪ್ರಕೃತವಾಗುತ್ತದೆ. ಕನ್ನಡ ನಾಡಿನ ಉದ್ದಗಲಕ್ಕೂ ಹರಡಿರುವ ದೇವ ದೇವತೆಗಳು, ಕೆರೆ ಕಟ್ಟೆಗಳು ಮುಂತಾದ ಪ್ರಾದೇಶಿಕ ಸಂಸ್ಕೃತಿಯ ವಿವರಗಳು ಮಾತ್ರವಲ್ಲ, ಕನ್ನಡಿಗರ ಹಬ್ಬ ಆಚರಣೆಗಳು, ಪ್ರೀತಿ, ಪ್ರೇಮ, ಹಾಸ್ಯ, ದುಃಖ ದುಮ್ಮಾನಗಳ ಜೀವನ ವಿವರಗಳೂ ಇಲ್ಲಿನ ಗೀತೆಗಳಲ್ಲಿ ಪ್ರತಿಬಿಂಬಿಸಿವೆ. ಜನಪದ ಸಾಹಿತ್ಯ ಪ್ರಚಾರದ ನೆಲೆಯಿಂದ ನೋಡಿದರೆ ಈ ಸಂಕಲನಕ್ಕಿರುವ ಮಹತ್ವವನ್ನು ಗುರುತಿಸಬಹುದಾಗಿದೆ.

ಎರಡು ಕಿನ್ನರಿ ಜೋಗಿ ಕಾವ್ಯಗಳು : (ಸಂ.) ವಸಂತ ಮಾಲಾ

ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೋಕಿನ ಹುರಳಿ ಗ್ರಾಮದ ಸುಮಾರು ಐವತ್ತು ವರ್ಷದ ಲಕ್ಷ್ಮಣ ಮತ್ತು ಅವರ ಸಹಾಯಕ ಕೆಸವಣ್ಣಪ್ಪ ಹಾಡಿದ ಎರಡು ಕಿನ್ನರಿ ಜೋಗಿ ಕಾವ್ಯಗಳು ಇಲ್ಲಿ ಸಂಗ್ರಹಗೊಂಡಿವೆ. ಐದಾರು ಪುಟಗಳ ಚಿಕ್ಕ ಪ್ರಸ್ತಾವನೆಯಲ್ಲಿ ಎರಡೂ ಕಾವ್ಯಗಳ—ಮಹಾಸತಿ ಶೀಲಾವತಿ ಮತ್ತು ಬೆಳ್ಳಿ ಮರ-ಬಂಗಾರದೆಲೆ-ಕಥಾ ಸಂಗ್ರಹವಿದೆ. ಅನುಬಂಧವೆಂದು ಕೊಡಲಾಗಿರುವ ಮೂರು ನಾಲ್ಕು ಪುಟಗಳಲ್ಲಿ ಎರಡೂ ಕತೆಗಳ ಮುಖ್ಯ ಆಶಯಗಳ ಪಟ್ಟಿ, ಗಾದೆಗಳು, ನಂಬಿಕೆಗಳು, ವಾಗ್ರೂಢಿಗಳು ಮತ್ತು ಅಂಕಿತ ನಾಮಸೂಚಿ ಮುಂತಾದುವುಗಳನ್ನು ಪಟ್ಟಿ ಮಾಡಲಾಗಿದೆ.

ಮುತ್ತು ಮುತ್ತಿನ ತ್ವಾಟ : (ಸಂ.) ಚಂದ್ರಶೇಖರ ಕಂಬಾರ ಮತ್ತು ಜಯಪ್ರಕಾಶ ಬರಗೂರು

ನೂರಾರು ಜನಪದ ಬಿಡಿ ಗೀತೆಗಳ ಸಂಕಲನವಿದು. ಪುರಾಣ ಕಥೆ, ಕೋಲಾಟ-ಬೀಸುವ ಕಲ್ಲಿನ ಪದ, ಸೋಬಾನೆ ಪದ, ಸಾಂಸಾರಿಕ ಗೀತೆ, ಕಥನ ಗೀತೆಗಳು ಹೀಗೆ ಹಲವು ಬಗೆಯ ಗೀತೆಗಳನ್ನು ಸಂಗ್ರಹಿಸಿರುವುದರಿಂದ ಅವುಗಳ ಅಧ್ಯಯನಕ್ಕೆ ಹಿನ್ನೆಲೆಯೂ ಒಂದು ಏಕ ಸೂತ್ರವಿಲ್ಲದಂತಾಗಿದೆ. ಜಯಪ್ರಕಾಶ ಬರಗೂರರು ತಮ್ಮ ಚಿಕ್ಕ ಪ್ರಸ್ತಾವನೆಯಲ್ಲಿ ಈ ಎಲ್ಲ ಪ್ರಕಾರಗಳ ವಿಶೇಷ ಅಂಶಗಳನ್ನು, ಕಥನ ಗೀತೆಗಳ ಕಥೆಯನ್ನು ನಿರೂಪಿಸಿದ್ದಾರೆ. ಗ್ರಂಥದ ಕೊನೆಗೆ ನಿರೂಪಕರ ಪರಿಚಯವಿದೆ. ಇನ್ನೂ

ಹೆಚ್ಚು ಮಾಹಿತಿಗಳಿಂದ ಕೂಡಿ, ಶಬ್ದಾರ್ಥಕೋಶ, ಆಶಯ ಸೂಚಿಗಳೆಲ್ಲವನ್ನೂ ಒಳಗೊಂಡಂತೆ ಈ ಗ್ರಂಥವನ್ನು ಪ್ರಕಟಿಸಲು ಸಾಧ್ಯವಿತ್ತೆಂಬುದನ್ನು ಮಾತ್ರ ಇಲ್ಲಿ ಸೂಚಿಸಬಹುದಾಗಿದೆ.

ಅರುಂಬದೆತ್ತು ಐನೂರು : (ಪ್ರ.) ಕರ್ನಾಟಕ ಜಾನಪದ ಅಕಾಡೆಮಿ

ಆಯ್ದ ಹಲವು ಜನಪದ ಗೀತೆಗಳ ಸಂಕಲನವಿದು. ಜನಪದ ಗೀತೆಗಳ ಮುವ್ವತ್ತು ನಾಲ್ಕು ಸಂಕಲನಗಳಿಂದ ಆಯ್ದುಕೊಂಡಿರುವ ಸಂಪಾದಕ ಮಂಡಲಿಯ ಕಾರ್ಯ ಸಾಕಷ್ಟು ಪ್ರಾತಿನಿಧಿಕವಾಗಿದೆ. ತಾವು ಆಯ್ದುಕೊಂಡ ಮೂಲ ಸಂಕಲನಗಳ ಪಟ್ಟಿಯನ್ನು ಅವರು ಕೊಟ್ಟಿದ್ದಾರೆ. ಬೀಸುವ ಕಲ್ಲಿನ ಪದ, ಕೋಲಾಟದ ಪದ, ಒಗಟಿನ ಹಾಡು, ಪ್ರಣಯಗೀತೆ, ಮದುವೆ ಹಾಡು, ತವರಿನ ಪದ, ಮಳೆಯ ಹಾಡು ಪುರಾಣ ಕಥಾ ಗೀತೆಗಳು, ತತ್ವಪದ-ಹೀಗೆ ಹಲವು ಹನ್ನೊಂದು ಬಗೆಯ ವಸ್ತು ವೈವಿಧ್ಯವಿದೆ ; ಹಲಸಂಗಿ ಚೆನ್ನಮಲ್ಲಪ್ಪನವರಿಂದ ಹಿಡಿದು ಶಿವಾನಂದ ಗುಬ್ಬಣ್ಣ ನವರ ತನಕ ಸಂಗ್ರಾಹಕರಿಗೆ ಪ್ರಾತಿನಿಧ್ಯ ದೊರೆತಿದೆ. ಜನಪದ ಸಾಹಿತ್ಯ ಪ್ರಸಾರಕ್ಕೆ ಅಕಾಡೆಮಿ ಹಾಕಿಕೊಂಡಿರುವ ಹಲವು ಯೋಜನೆಗಳಲ್ಲಿ ಉತ್ತಮ ಜನಪದ ಸಾಹಿತ್ಯ ವನ್ನು ಪ್ರಕಟಿಸಿ ಕಡಿಮೆ ಬೆಲೆಗೆ ಮಾರಾಟ ಮಾಡುವ ಈ ಯೋಜನೆ ಇನ್ನೂ ಅರ್ಥ ಪೂರ್ಣವಾಗುವಂತೆ ಯೋಜಿಸಲು ಸಾಧ್ಯವಿದೆ.

ಲಂಬಾಣಿಗರ ಜನಪದ ಗೀತೆಗಳು : (ಸಂ.) ಬೆನಕನ ಹಳ್ಳಿ ಜಿ. ನಾಯಕ್

ಕನ್ನಡ ನಾಡಿನ ಸಾಂಸ್ಕೃತಿಕ ಪರಿಸರದಲ್ಲಿ ಒಂದು ಪ್ರತ್ಯೇಕ ನಡುಗುಡ್ಡೆಯಾಗಿಯೇ ಉಳಿದು, ತಮ್ಮ ವೈಶಿಷ್ಟ್ಯವನ್ನು ಸಮರ್ಥವಾಗಿ ಕಾಪಾಡಿಕೊಂಡು ಬಂದಿರುವ ಲಂಬಾಣಿಗರು ಗಂಭೀರ ಅಧ್ಯಯನಕ್ಕೆ ಯೋಗ್ಯವಾದ ಒಂದು ವಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಅವರ ಅನೇಕ ಜನಪದ ಗೀತೆಗಳನ್ನು ಪ್ರಸ್ತುತ ಸಂಕಲನದಲ್ಲಿ ಸಂಗ್ರಹಿಸ ಲಾಗಿದೆ. ಲಂಬಾಣಿಗರ ಹಲವು ಬಗೆಯ ಸಂಪ್ರದಾಯದ ಹಾಡುಗಳನ್ನು ಒಳ ಗೊಂಡಿರುವ ಈ ಸಂಗ್ರಹ ಸ್ವಾಗತಾರ್ಹವಾದುದಾದರೂ, ಈ ಹಾಡುಗಳನ್ನು ಆಧರಿಸಿ ಸಂಪಾದಕರು ನಡೆಸಿರುವ ಅಧ್ಯಯನ ತೀರಾ ತೆಳುವಾದುದು. ಆರೆಂಟು ಪುಟಗಳ ಚಿಕ್ಕ ಪ್ರಸ್ತಾವನೆಯು ಲಂಬಾಣಿಗರನ್ನು ಕುರಿತು ಅನ್ಯರು ನಡೆಸಿದ ಅಧ್ಯಯನ ಗಳನ್ನು ಖಂಡಿಸುವುದಕ್ಕೆ ಮೀಸಲಾಗಿರುವಂತಿದೆ. ಯಾವುದೇ ಸಾಂಸ್ಕೃತಿಕ ಅಧ್ಯಯನ ಆಯಾ ಪಂಗಡಗಳಲ್ಲಿ ಹುಟ್ಟಿ ಬಂದವರ ಗುತ್ತಿಗೆಯಲ್ಲ ಎಂಬ ಸಂಗತಿಯನ್ನು ನಾವೆಲ್ಲ ಮನಗಾಣಬೇಕಾಗಿದೆ. ವಿದೇಶಿ ವಿದ್ವಾಂಸರು ನಮ್ಮ ನಾಡಿನ ಗಿರಿಜನ ಬದುಕನ್ನು ಅತ್ಯಂತ ಸಮರ್ಥವಾಗಿ ವಿಶ್ಲೇಷಿಸಿದ್ದಾರೆ. ಸ್ವತಹ ಗಿರಿಜನ ಸಮೂಹದಲ್ಲಿ ಹುಟ್ಟಿ ಬಂದವನಿಗೆ ಹಲವು ಸಂಗತಿಗಳು ಮಾಹಿತಿಗಳು ಸುಲಭವಾಗಿ ದೊರಕಬಹುದು. ಆದರೆ ದೊರಕಿದ ಮಾಹಿತಿ-ಸಂಗತಿಗಳನ್ನು ಬಳಸಿಕೊಂಡು ಆತ ನಡೆಸುವ ಅಧ್ಯಯನ

ಸಮಗ್ರವಾಗಿದೆಯೇ? ಎಂಬುದೇ ಗಮನಿಸಬೇಕಾದ ಮುಖ್ಯ ಸಂಗತಿ. ಈ ನಿಟ್ಟಿನಿಂದ ನೋಡಿದಾಗ ಲಂಬಾಣಿಗರ ಸಾಂಸ್ಕೃತಿಕ ಅಧ್ಯಯನವನ್ನು ಇನ್ನೂ ಸಮಗ್ರವಾಗಿ ನಡೆಸಲು ಸಂಪಾದಕರಿಗೆ ಅವಕಾಶವಿದೆಯೆಂಬುದನ್ನು ಇಲ್ಲಿ ಸೂಚಿಸಬಹುದಾಗಿದೆ.

ಬೀದರ್ ಜಿಲ್ಲೆಯ ಶಿಶು ಪ್ರಾಸಗಳು : (ಸಂ.) ಎಚ್. ಎಸ್. ಸಿದ್ದಗಂಗಪ್ಪ

ಬೀದರ್ ಜಿಲ್ಲೆಯಲ್ಲಿ ಸಂಗ್ರಹಿಸಲಾದ ನೂರಾರು ಶಿಶುಪ್ರಾಸಗಳು ಈ ಸಂಕಲನದಲ್ಲಿವೆ ವಿಸ್ತಾರವಾದ ಪ್ರಸ್ತಾವನೆ ಈ ಸಂಕಲನದ ಬೆಲೆಯನ್ನು ಹೆಚ್ಚಿಸುವಂತಿದೆ. ಶಿಶು ಪ್ರಾಸಗಳ ಲಕ್ಷಣ. ಪ್ರಾಸಬದ್ಧತೆ ವಸ್ತು, ವರ್ಗಗಳು. ಪ್ರಾದೇಶಿಕವಾಗಿ ಶಿಶು ಪ್ರಾಸಗಳಲ್ಲಿ ವ್ಯತ್ಯಾಸವಿಲ್ಲದಿರುವುದು ಈ ಎಲ್ಲ ಅಂಶಗಳನ್ನು ಅಲ್ಲಿ ಚರ್ಚಿಸಿದ್ದಾರೆ. ತಾವು ಮಾಡಿಕೊಂಡಿರುವ ಹದಿನೆಂಟು ವರ್ಗಗಳ ಮಿಕ್ಕ ಲಕ್ಷಣವನ್ನೂ ಪ್ರತ್ಯೇಕವಾಗಿ ವಿವರಿಸಿದ್ದಾರೆ. ಹಾಡುಗಾರರ ವಿವರ, ಅರ್ಥಕೋಶ, ಒಗಟಿಗೆ ಉತ್ತರ, ಕೆಲವು ಪ್ರಮುಖ ಪ್ರಾಸಗಳ ವಿವರಣೆಗಳನ್ನು ಅನುಬಂಧವಾಗಿ ಕೊಟ್ಟಿದ್ದಾರೆ. ಕೆಲವು ಪ್ರಾಸಗಳ ಹಿಂದೆ ಹೊಳೆಯುವ ಸಾಮಾಜಿಕ ವಿಮರ್ಶೆಯನ್ನು ಮಾನಸಿಕ ವಿಕೃತಿಗಳನ್ನು ಗುರುತಿಸಬಹುದಿತ್ತು. ಆದರೂ ಸುಮಾರು ನಲವತ್ತು ಪುಟಗಳ ಈ ಚಿಕ್ಕ ಕೃತಿಯಲ್ಲಿ ಎದ್ದು ಕಾಣುವ ಸಂಪಾದಕರ ವೈಜ್ಞಾನಿಕ ಶಿಸ್ತು ಮತ್ತು ವ್ಯವಸ್ಥೆ ಗಮನಾರ್ಹವಾಗಿದೆ.

ಹಸರ ಗಿಡದ ಮ್ಯಾಲ ಮೊಸರು ಚಲ್ಲೇದ : (ಸಂ.) ಜಂಬುನಾಥ ಕಲ್ಯಾಣಿ

ಇದೊಂದು ಒಗಟುಗಳ ಸಂಗ್ರಹ. ದೇಹಾಂಗಗಳು, ಕೃಷಿ ಸಲಕರಣೆಗಳು, ಜೀವ ಸಂಬಂಧ ವಸ್ತುಗಳು ವೃತ್ತಿ ಜನ್ಯ ಹಾಗೂ ಇತರ ವಸ್ತುಗಳು, ಅಶ್ಲೀಲ ಮೆರುಗುಳ್ಳ ಒಗಟುಗಳು ಹೀಗೆ ಸ್ಥೂಲವಾಗಿ ವಿಂಗಡಿಸಿಕೊಂಡು ಅನೇಕ ಒಗಟುಗಳನ್ನು ಇಲ್ಲಿ ಸಂಗ್ರಹಿಸಿದ್ದಾರೆ. ಸಂಗ್ರಹಗೊಂಡಿರುವ ಒಗಟುಗಳು ವೈವಿಧ್ಯಮಯವಾಗಿರುವಂತೆ ಒಂದೊಂದೂ ಒಗಟಿಗೆ ಸಂಪಾದಕರ ವ್ಯಾಖ್ಯಾನ ಮನರಂಜಕವಾಗಿದೆ. ಉದಾಹರಣೆಗೆ 'ಮಳಿ ಇಲ್ಲ ಬೆಳೀತದ' ಎಂಬ ಒಗಟಿಗೆ ಸಂಪಾದಕರ ವ್ಯಾಖ್ಯಾನ ಹೀಗಿದೆ : "ಮಳೆಯಿಲ್ಲದೆ ಬೆಳೆಯುವಂತಹ ಪವಾಡಮಯವಾದ ವೃಕ್ಷವನ್ನು ಅರಸುತ್ತಾ ನಮ್ಮ ಮನ ಮಯೂರ ಕಾಡು ಮೇಡುಗಳನ್ನು ಸುತ್ತು ಹಾಕಿ ದಣಿಯುತ್ತದೆ. ಬೇಗನೆ ಉತ್ತರ ಹೊಳೆಯದ್ದಕ್ಕೆ ತಲೆಯನ್ನು ಕರಕರನೆ ಕೆರೆಯುತ್ತೇವೆ. ತಲೆಯ ಮೇಲೆ ಹುಲುಸಾಗಿ ಬೆಳೆದ ಕೂದಲು ರಾಶಿಯೇ ಒಗಟಿನ ವಸ್ತು ಗುರಿ ಎಂದರಿತಾಗ ಅವೆ ಕೂದಲನ್ನು ಜಗ್ಗಿಕೊಂಡು ನಮ್ಮ ಪೆದ್ದತನವನ್ನು ಜರೆಯುತ್ತೇವೆ." ಹೆಚ್ಚು ಕಡಿಮೆ ಇದೇ ಬಗೆಯ ವ್ಯಾಖ್ಯಾನವನ್ನು ಎಲ್ಲ ಒಗಟುಗಳಿಗೂ ಕೊಡಲಾಗಿದೆ ಯಾದುದರಿಂದ ಇದಕ್ಕಾಗಿ ನಾವೂ ವಿಶೇಷವಾಗಿ ತಲೆ ಕೆರೆದುಕೊಳ್ಳಬೇಕಿಲ್ಲ.

ಉತ್ತರ ಕರ್ನಾಟಕದ ಬೈಗುಳಗಳು : (ಸಂ.) ಮೃತ್ಯುಂಜಯ ಹೊರಕೇರಿ

ಉತ್ತರ ಕರ್ನಾಟಕದ ಸಾವಿರಾರು ಬೈಗುಳಗಳನ್ನು ಒಂದೆಡೆ ಕಲೆ ಹಾಕಿರುವ ಸಂಪಾದಕರ ಪ್ರಯತ್ನವನ್ನು ಮೆಚ್ಚಬಹುದಾದರೂ ಆಯ್ಕೆಯಲ್ಲಿ ಅವರು ನಾಜೋಕಾಗಿ

ವರ್ತಿಸಿರುವಂತಿದೆ. ಬೈಗುಳಗಳು ಹೇಳಿ ಕೇಳಿ ನೀತಿ ನಿಯಮಗಳನ್ನು ಮೀರಿದಂತಹವು. ಅವುಗಳ ಸ್ವಚ್ಛಂದ ಅತಿರೇಕಗಳನ್ನು ಇಡಿಯಾಗಿ ನೋಡಿದರೆ ಮಾತ್ರ ಅವುಗಳ ಹಿಂದಿರುವ ಮಾನಸಿಕ ಅಸ್ವಾಸ್ಥ್ಯ ಮತ್ತು ಸಾಮಾಜಿಕ ಆಕ್ರೋಶಗಳನ್ನು ಗುರುತಿಸಲು ಸಾಧ್ಯ. ಹೀಗಿರುವಾಗ ಕೆಲವು ಅಶ್ಲೀಲವೆನ್ನಿಸಬಹುದಾದ ಬೈಗುಳಗಳನ್ನು ಸ್ವಲ್ಪ ಭಾಗ ಮುದ್ರಿಸಿ ಉಳಿದುದನ್ನು ಚುಕ್ಕೆ ಹಾಕಿ ಬಿಡಬಹುದಾದರೆ, ಅರ್ಥಗ್ರಹಣಕ್ಕೆ ಚ್ಯುತಿಯುಂಟಾಗುತ್ತದೆ. ಅಲ್ಲದೆ, 'ಉತ್ತರ ಕರ್ನಾಟಕದ ಬೈಗುಳಗಳು' ಎಂಬ ಗ್ರಂಥದ ಶೀರ್ಷಿಕೆಯನ್ನು ಸಮರ್ಥಿಸುವಂತಹ ಪ್ರಾದೇಶಿಕ ವೈಶಿಷ್ಟ್ಯವಿರುವ ಒಂದೂ ಬೈಗುಳ ಅಲ್ಲಿ ಕಾಣುವುದಿಲ್ಲ. ಉತ್ತರ ಕರ್ನಾಟಕದ ಭಾಷೆಯಲ್ಲಿರುವ ಬೈಗುಳಗಳು ಎಂದು ಬೇಕಾದರೆ ಕರೆಯಲಿ ! ಒಂದು ನಿರ್ದಿಷ್ಟ ಹಳ್ಳಿ, ಪಟ್ಟಣ, ಜಾತಿ, ಉಪಜಾತಿ, ಕಸಬುಗಳನ್ನು ಅಣಕಿಸುವ ಗೇಲಿ ಮಾಡುವ ಪ್ರವೃತ್ತಿಯಿರುವ ಬೈಗುಳಗಳನ್ನೂ ಸಂಪೂರ್ಣವಾಗಿ ಕೈ ಬಿಡಲಾಗಿದೆ. ಸಂಗ್ರಹಕ್ಕೆ ತೊಡಗಿದಾಗ ಸಿಕ್ಕಿದ ಈ ಮಾದರಿಯ ಹಲವಾರು ಬೈಗುಳಗಳನ್ನು ಮುದ್ರಿಸಲು ಸಂಪಾದಕರು ಹಿಂಜರಿಯುವಂತಿದೆ. ಹೀಗಾಗಿ ಬೈಗುಳಗಳ ರೂಕ್ಷತೆ, ಹೊಲಸು, ಅಸಭ್ಯತೆ, ಅನಾಗರಿಕತೆಗಳ ನಿಜದರ್ಶನ ಇಲ್ಲಿ ನಮಗಾಗುವುದೇ ಇಲ್ಲ. ಸಮಾಜ ಶಾಸ್ತ್ರೀಯ ಹಿನ್ನೆಲೆಯಲ್ಲಿ ಮನೋವಿಜ್ಞಾನದ ನೆರವಿನಿಂದ ಬೈಗುಳಗಳ ಅಧ್ಯಯನ ನಡೆಸಬೇಕಾದರೆ ಯಾವುದೇ ಮಡಿವಂತಿಕೆಯಿಲ್ಲದೆ ಉದಾಹರಣೆಗಳನ್ನು ಕೊಡಬೇಕಾಗುತ್ತದೆ. ಪ್ರಸ್ತಾವನೆಯಲ್ಲಿ ಇಂತಹ ಒಂದು ಪ್ರಯತ್ನ ನಡೆದಿದೆ. ಕೊನೆಯಲ್ಲಿ ಕೊಟ್ಟಿರುವ ಶಬ್ದಾರ್ಥಸೂಚಿ ಉಪಯುಕ್ತವಾಗಿದೆ.

ತುಮಕೂರು ಜಿಲ್ಲೆಯ ಜಾನಪದ ನಂಬಿಕೆಗಳು : (ಸಂ.) ಎನ್. ಎಸ್. ತಿಮ್ಮೇಗೌಡ

ತುಮಕೂರು ಜಿಲ್ಲೆಯ ದಕ್ಷಿಣ ಪ್ರಾಂತ್ಯದ ಒಕ್ಕಲಿಗ ಸಮೂಹದಿಂದ ಸಂಗ್ರಹಿಸಿರುವುದಾಗಿ ಹೇಳಿಕೊಂಡಿರುವ ಈ ನಂಬಿಕೆಗಳೆಲ್ಲವೂ ಜಾನಪದೀಯವಾಗಿ ಮಹತ್ವದವೆಂದು ಹೇಳುವಂತಿಲ್ಲ 'ಊಟಮಾಡುವಾಗ ನೆತ್ತಿ ಹತ್ತಿದರೆ ತಟ್ಟಿಕೊಂಡು ಮೇಲೆನೆತ್ತಿ ನೋಡಬೇಕು',-'ಉಣ್ಣುವಾಗ ದೀಪ ಆರಿದರೆ ಉಣ್ಣೋದನ್ನ ನಿಲ್ಲಿಸಬೇಕು', 'ಪಂಕ್ತೀಲಿ ಕೂತಾಗ ಊಟ ಮುಗಿದರೆ ಎಲೆ ಎತ್ತೋವರೆಗೆ ಎದ್ದು ಹೋಗಬಾರದು', 'ಉಂಡ ತಕ್ಷಣಸ್ನಾನ ಮಾಡಬಾರದು', 'ಅಡುಗೆಯಾದಮೇಲೆ ಒಲೆ ಆರಿಸಬೇಕು', 'ಚಾಪೆಯನ್ನು ತಲೆಕೆಳಗೆ ಹಾಕಬಾರದು' ಮುಂತಾದ ಸಾಮಾನ್ಯ ನಂಬಿಕೆಗಳಿಗೆ ಯಾವುದೇ ಸಾಂಸ್ಕೃತಿಕ ಮಹತ್ವವಿಲ್ಲ. ಕೇವಲ ಸಾಮಾನ್ಯ ಪರಿಜ್ಞಾನಕ್ಕೆ ಸಂಬಂಧಿಸಿದ ಇಂತಹ ನಂಬಿಕೆಗಳನ್ನೆಲ್ಲ ಸಂಗ್ರಹಿಸುತ್ತಾ ಹೋದರೆ ಒಂದು ಭಾಷೆಯಲ್ಲಿ ಕೋಟಿಗಟ್ಟಲೆ ನಂಬಿಕೆ ದೊರೆತರೂ ಆಶ್ಚರ್ಯಪಡಬೇಕಿಲ್ಲ.

ಆದರೆ ಪ್ರಸ್ತುತ ಸಂಕಲನದಲ್ಲಿ ಸಾಂಸ್ಕೃತಿಕವಾಗಿ ಮಹತ್ವವಿರುವ ಅನೇಕ ನಂಬಿಕೆಗಳೂ ಇವೆ. ಈ ಬಗೆಯ ನಂಬಿಕೆಗಳನ್ನು ಸಾಮಾಜಿಕ, ಆರ್ಥಿಕ, ಮನೋವೈಜ್ಞಾನಿಕ ಹಿನ್ನೆಲೆಯಲ್ಲಿ ಪರಿಶೀಲಿಸಿ ಅವುಗಳ ಪ್ರಾದೇಶಿಕ ಬಣ್ಣ ವಾಸನೆಗಳನ್ನು ಗುರುತಿಸಲು ಪ್ರಯತ್ನಿಸಬಹುದಿತ್ತು. ಪ್ರಸ್ತಾವನೆಯಲ್ಲಿ ನಂಬಿಕೆ ಎಂದರೇನು? ಎಂಬುದನ್ನು

ಕುರಿತ ವಿದ್ವತ್ ಪೂರ್ಣ ವಿವರಣೆಯಿದೆ. ಆದರೆ ತುಮಕೂರು ಜಿಲ್ಲೆಯ ನಂಬಿಕೆಗಳ ಹಿಂದೆ ನಾವು ಕಾಣುವ ಸಾಮಾಜಿಕ ವಿವರಗಳೇನು ? ಆರ್ಥಿಕ ವ್ಯವಸ್ಥೆ ಹೇಗಿವೆ? ವರ್ಗ–ವರ್ಣ ಭೇದಗಳು ಇಲ್ಲಿ ಪ್ರತಿಬಿಂಬಿತವಾಗಿವೆಯೇ? ಒಕ್ಕಲಿಗ ಜನಾಂಗದ ಕೃಷಿಕ ಹಿನ್ನೆಲೆಗೂ ಈ ನಂಬಿಕೆಗಳಿಗೂ ಇರುವ ಸಂಬಂಧದ ಸಾಂಸ್ಕೃತಿಕ ಸ್ವರೂಪವೇನು? —ಹೀಗೆಲ್ಲಾ ವಿಚಾರಿಸಲು ಸಾಧ್ಯವಿತ್ತು. ಪ್ರಸ್ತಾಪನೆಯಲ್ಲಿ ಸಂಪಾದಕರು ಈ ಬಗೆಯ ಅಧ್ಯಯನಕ್ಕೆ ಅವಕಾಶವಿದೆಯೆಂದು ನಮ್ರವಾಗಿ ಒಪ್ಪಿಕೊಂಡಿದ್ದಾರೆ. ಮುಂದೆಯೂ ಈ ಬಗೆಯ ಅಧ್ಯಯನವನ್ನು ಕೈಗೆತ್ತಿಕೊಳ್ಳಲು ಅವರಿಗೆ ಈ ಸಂಕಲನದ ಸಂಪಾದನೆಯ ಅನುಭವ ಪೂರ್ವ ಸಿದ್ಧತೆಯಾಗಲೆಂದು ಬಯಸಬಹುದಾಗಿದೆ.

—ಕೆ. ಮರುಳಸಿದ್ದಪ್ಪ

ಂ ಂ ಂ ಂ

ಉತ್ತರ ಕನ್ನಡದ ಹವ್ಯಕರ ಜನಪದ ಕಥೆಗಳು ಶಾಂತಿ ನಾಯಕ ಅವರು ಹೊನ್ನಾವರ ತಾಲ್ಲೂಕಿನ ಪ್ರದೇಶದ ಬಹುಮಟ್ಟಿಗೆ ಹನ್ನೆರಡು ಹದಿನೆಂಟು ವಯಸ್ಸಿನ ಹವ್ಯಕ ಜಾತಿಯ ಮಕ್ಕಳಿಂದ ಸಂಗ್ರಹಿಸಿದ ಜಾನಪದ ಕಥೆಗಳ ಸಂಕಲನ. (ಮಕ್ಕಳಾದ್ದರಿಂದ ಅವರು ಬಾಲ್ಯದಲ್ಲಿ ಕೇಳಿದ ಒಂದೆರಡು ಇಂಗ್ಲಿಷ್ ಕತೆಗಳ ಕನ್ನಡಾನುವಾದಗಳು ಇಲ್ಲಿ ಸೇರಿಕೊಂಡಿರುವ ಹಾಗಿದೆ. ಉದಾ: 'ನಡೆ ಕುಂಬಳವೆ ಟರ್ರಾಪುರ್ರಾ') ಅರವತ್ತಮೂರು ಚಿಕ್ಕ ಕತೆಗಳಿರುವ ಈ ಸಂಗ್ರಹಕ್ಕೆ ಹದಿನಾರು ಪುಟಗಳ ಒಳ್ಳೆಯ ಪೀಠಿಕೆ ಇವೆ. ಜಾನಪದ ಕತೆಗಳನ್ನು ತೌಲನಿಕ ಅಭ್ಯಾಸ ಮಾಡುವತ್ತ ಉದಾಹರಣೆಗಳೊಂದಿಗೆ ಶಾಂತಿನಾಯಕ್ ಗಮನ ಸೆಳೆದು. ಈ ಸಂಕಲನದ ಕೆಲವು ಕತೆಗಳಿಗೂ ಪಂಚತಂತ್ರದ ಮತ್ತು ಇತರ ಕತೆಗಳಿಗೂ ಸಾಮ್ಯವನ್ನು ತೋರಿದ್ದಾರೆ. ಹವ್ಯಕ ಭಾಷೆಯ ಸ್ಥೂಲ ಪರಿಚಯ ಮೂರು ಪುಟಗಳಲ್ಲಿದೆ. ಸಂಕಲನಕಾರರಿಗೆ ಜಾನಪದ ಕತೆಗಳನ್ನು ನೋಡುವ. ವಿಶ್ಲೇಷಿಸುವ ದೃಷ್ಟಿಯಿದೆಯೆಂಬುದು ಸಂತೋಷ ತರುವ ವಿಷಯ.

ಜಾನಪದ ಕತೆಗಳನ್ನು ಯಾವ ಭಾಷೆಯಲ್ಲಿ ಹಿಡಿದಿಡಬೇಕು? ವಕ್ತ ಹೇಳುವ ಉಪಭಾಷೆಯಲ್ಲೇ ಅಥವಾ ಕ್ಷೇತ್ರಕರ್ತ ತನ್ನ ಬರಹಗಳಿಗೆ ಬಳಸುವ ಗ್ರಾಂಥಿಕ ಭಾಷೆಯಲ್ಲೇ? ಈ ಪ್ರಶ್ನೆ ಹಲವರಿಗೆ ಪ್ರಶ್ನೆ ಅಲ್ಲವೇ ಅಲ್ಲ. ಕತೆಗಳನ್ನು ವಕ್ತನ(ಳ) ಆಡುಮಾತಿನಲ್ಲೇ ಹಿಡಿದಿಟ್ಟರೆ ಕತೆಯನ್ನು ಅದನ್ನು ಹೇ(ಕೆ)ಳಿದ ವಾತಾವರಣದಲ್ಲೇ ಗ್ರಹಿಸಲು ಸಾಧ್ಯವಾಗುತ್ತದೆ ಎಂಬ ಸಹಜ. ಅಭಿಮಾನದ ಪ್ರತಿಕ್ರಿಯೆ ಬರುವುದು ತೀರ ಸ್ವಾಭಾವಿಕ. ಆದರೆ ಉಪಭಾಷೆಯಲ್ಲಿ ಪ್ರಕಟವಾಗುವ ಕತೆಗಳನ್ನು ಓದುವುದು ಬಹಳ ಪ್ರಯಾಸಕರ. ಒಂದೆರಡು ಕತೆಗಳನ್ನು ಓದುವುದರಲ್ಲಿ ನಮ್ಮ ಆಸಕ್ತಿ ಕಮರು

ತ್ತದೆ. ಏಕೆಂದರೆ ಕತೆಗಳ ಬಹುಭಾಗ ಅರ್ಥವಾಗುವುದೇ ಇಲ್ಲ. ಮತ್ತು ನನ್ನ ಮಟ್ಟಿಗೆ ಹೇಳುವುದಾದರೆ, ಜಾನಪದ ಕತೆಗಳ ಕಥಾಂಶ ಬಹುಕಡೆಗಳಲ್ಲಿ ಮುಖ್ಯವಾಗುವುದರಿಂದ ಎಲ್ಲ ಕತೆಗಳನ್ನು ವಕ್ತನ ಆಡುಮಾತಿನಲ್ಲೇ ಕೊಡುವುದು ಅನಗತ್ಯ. ಒಂದೆರಡು, ಬೇಕಾದರೆ ನಾಲ್ಕಾರು, ಕತೆಗಳನ್ನು ಅಂತ್ಯದಲ್ಲಿ ಕುತೂಹಲಕ್ಕಾಗಿ ವಕ್ತನ ಆಡುಮಾತಿನಲ್ಲಿ ಕೊಡಬಹುದು (ಹೇಗೂ ಅವುಗಳ ಗ್ರಾಂಥಿಕರೂಪ ಮೊದಲಲ್ಲಿ ಬಂದಿರುತ್ತದೆ). ನಾನು ಬೆಳಗಾಂ, ರಾಯಚೂರು ಕಡೆಯ ಕತೆಗಳನ್ನು ಓದಲು ಯತ್ನಿಸಿ ವಿಫಲನಾಗಿದ್ದೇನೆ. ಹಾಗೆಯೇ ಇಲ್ಲಿಯ ಹವ್ಯಕರ ಕತೆಗಳನ್ನೂ ಪೂರ್ತಿ ಓದಲು ಸಾಧ್ಯವಾಗುವುದಿಲ್ಲ ; ಕಷ್ಟ ಪಟ್ಟು ಓದಿದ ಕತೆಗಳೂ ನನಗೆ ಪೂರ್ತಿಯಾಗಿ ಗ್ರಹಿಕೆಯಾಗಲಿಲ್ಲ. ಇದು ಶಾಂತಿ ನಾಯಕ ಅವರ ಸಂಕಲನದ ವಿಮರ್ಶೆಯಾಗಿ ಬರೆದದ್ದು ಅಲ್ಲ ; ಇದು ಒಂದು ತಾತ್ವಿಕ ಪ್ರಶ್ನೆ, ಹಲವು ಅಂತಹ ಸಂಕಲನಗಳಿಗೆ ಅನ್ವಯಿಸತಕ್ಕದ್ದು, ಮುಂದೆ ಸಂಕಲನ ಮಾಡಬೇಕಾದವರು ಯೋಚಿಸಬೇಕಾದ ಸಂಗತಿ. ಈ ಸಂಕಲನಕಾರರೇನೋ, ಅಂತ್ಯದಲ್ಲಿ ಎರಡು ಕತೆಗಳ ಗ್ರಾಂಥಿಕ ಅನುವಾದವನ್ನು ಕೊಟ್ಟಿದ್ದಾರೆ. ಈ ಕ್ರಿಯೆ ನನಗೆ ಅನ್ನಿಸುವಂತೆ ತಿರುಗು ಮುರುಗು ಆಗಬೇಕು.

'ಗುಲಗಂಜಿ ಮಾದೇವಿ'ಯಲ್ಲಿ ಕುರುವ ಬಸವರಾಜ್ ಶಿವಮೊಗ್ಗ ಜಿಲ್ಲೆಯ ಹೊನ್ನಾಳಿ ತಾಲ್ಲೂಕಿನಲ್ಲಿ ಸಂಗ್ರಹಿಸಿದ ಹದಿನಾಲ್ಕು ಜಾನಪದ ಕತೆಗಳಿವೆ. ಇಲ್ಲೂ ಕತೆಗಳನ್ನು ಪ್ರದೇಶದ ಉಪಭಾಷೆಯಲ್ಲಿ ಸಂಗ್ರಹಿಸಿದ್ದಾರೆ. ಈ ಉಪಭಾಷೆ ನನಗೆ ತೀರ ಪರಿಚಿತವಾದುದರಿಂದ ಬಹುಭಾಗ ಅರ್ಥವಾಗುತ್ತದೆ ; ಆದರೂ ಓದುವುದು ಪ್ರಯಾಸ. ಬೇರೆ ಉಪಭಾಷಾ ಪ್ರದೇಶದ ಓದುಗರ ಪಾಡನ್ನು ನಾನು ಊಹಿಸಿಕೊಳ್ಳಬಲ್ಲೆ. ಮೇಲಿನ ಪ್ಯಾರಾದಲ್ಲಿ ಹೇಳಿದ ಮಾತುಗಳನ್ನೇ ಇಲ್ಲೂ ಬರೆಯುವ ಅಗತ್ಯವಿಲ್ಲ.

ಇಲ್ಲಿನ ಅನುಬಂಧಗಳಲ್ಲಿ ಕತೆ ಹೇಳಿದ ವಕ್ತರ ಪರಿಚಯ, 'ಜಾನಪದ ಕಥಾ ವಿಭಜನೆ', ಆಶಯಗಳ ಪಟ್ಟಿ, ವಿಶಿಷ್ಟ ಪದಸೂಚಿ, ಶಬ್ದಕೋಶಗಳಿದ್ದು ಹೆಚ್ಚಿನ ಅಭ್ಯಾಸಕ್ಕೆ ಸಹಾಯಕ. ಜಾನಪದಾಸಕ್ತರು ಗಮನಿಸಬೇಕಾದ ಸಂಕಲನ ಇದು.

'ಸಂಸಾರಿ ಹೆಚ್ಚೋ ಸನ್ಯಾಸಿ ಹೆಚ್ಚೋ' ಎಂ.ಎ. ಜಯಚಂದ್ರರು ಬೇರೆ ಬೇರೆ ಕಡೆ ಸಂಗ್ರಹಿಸಿದ ನಲವತ್ತೈದು ಜಾನಪದಕತೆಗಳಿವೆ. ವಕ್ತರ ಉಪಭಾಷೆಯಲ್ಲಿ ಕೆಲವು, ಗ್ರಾಂಥಿಕ ಭಾಷೆಯಲ್ಲಿ ಕೆಲವು ಕತೆಗಳು ಇವೆ. ಮೊದಲಲ್ಲಿ ಏಳುಪುಟದ ಪೀಠಿಕೆಯಲ್ಲಿ ಜಯಚಂದ್ರು ಈ ಸಂಕಲನದ ಕತೆಗಳ ಸಂಕ್ಷಿಪ್ತ ಪರಿಚಯ ಮಾಡಿಕೊಟ್ಟಿದ್ದಾರೆ. ಇಲ್ಲಿನ ಒಂದು ಕತೆಗೂ ವಡ್ಡಾರಾಧನೆಯ ಕಾರ್ತಿಕ ಋಷಿಯ ಕತೆಗೂ ಇರುವ ಸಾಮ್ಯವನ್ನು ಗುರುತಿಸಿದ್ದಾರೆ. ಅನುಬಂಧಗಳಲ್ಲಿ "ಜಾನಪದ ಕಥಾ ವಿಭಜನೆ", "ಜಾನಪದ ಕಥೆಗಾರರು", "ಇಂಗ್ಲಿಷ್ ಪದಸೂಚಿ", "ಅಂಕಿತನಾಮ ಸೂಚಿ", "ಪ್ರಾಣಿ ಪದಸೂಚಿ", "ವಿಷಯ ಸೂಚಿ", "ಸಂಖ್ಯಾಸೂಚಿ", "ಜಾನಪದ ಶಬ್ದಕೋಶ", "ಮುಖ್ಯ ಆಶಯಸೂಚಿ", "ಗಾದೆಗಳು" ಭಾಗಗಳಿವೆ. ಇಲ್ಲೆಲ್ಲ ಸಂಖ್ಯೆಗಳು ಕಥೆಯ ಕ್ರಮಾಂಕವನ್ನು ಸೂಚಿಸುವುದರಿಂದ ಆಯಾ ಅಂಶವನ್ನು ಪ್ರಯಾಸಪಟ್ಟು

ಹುಡುಕಿಕೊಳ್ಳಬೇಕು. ಅದರ ಬದಲು ಅಚ್ಚಾದ ಮೇಲೆ ಸಂಖ್ಯೆಗಳನ್ನು ಕೊಟ್ಟಿದ್ದರೆ ಆಯಾ ಪುಟಸಂಖ್ಯೆಯನ್ನು ನಮೂದಿಸಬಹುದಿತ್ತು, ಇದನ್ನು ಬಿಟ್ಟರೆ ಈ ದೊಡ್ಡ ಸಂಕಲನದ ಜಾನಪದ ಕತೆಗಳನ್ನು ಅಭ್ಯಸಿಸುವವರು ತಮಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳಲು ಬೇಕಾದ ಸಾಮಗ್ರಿಯನ್ನು ಅಂತ್ಯದಲ್ಲಿ ಕೊಟ್ಟಿರುವುದು ಮೆಚ್ಚಬೇಕಾದ ಸಂಗತಿ.

ಇದರಲ್ಲಿ ಕತೆ ಹೇಳಿರುವವರು ಕೆಲವರು ಜೈನರೂ ಇದ್ದು ಜಾನಪದ ಕತೆಗಳು ತಮ್ಮನ್ನು ಹೇಳುವವರ ಧರ್ಮದ ಬಣ್ಣವನ್ನು ಹೇಗೆ ಪಡೆದುಕೊಳ್ಳುತ್ತವೆಯೆಂಬುದನ್ನು ಅಭ್ಯಸಿಸುವುದಕ್ಕೆ ಸಹಾಯ ಮಾಡುತ್ತದೆ. ಇದೊಂದು ಅತ್ಯಂತ ಸ್ವಾಗತಾರ್ಹವಾದ ಜಾನಪದ ಕಥಾಸಂಕಲನ.

—ಎಂ. ಚಿದಾನಂದಮೂರ್ತಿ

○ ○ ○ ○ ○

ಜನಪದ ಸಾಹಿತ್ಯ ಪ್ರವೇಶಿಕೆ : ಸಿ.ಪಿ.ಕೆ.

ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಪರಿಶ್ರಮವಿರುವ ಸಿ.ಪಿ.ಕೆ.ಯವರು ಜಾನಪದ ಕ್ಷೇತ್ರದಲ್ಲೂ ಚಿಂತನೆಗಳನ್ನು ನಡೆಸಿದ್ದಾರೆ. ಪ್ರಸ್ತುತ ಕೃತಿಯ ಶೀರ್ಷಿಕೆಯೇ ಸೂಚಿಸುವಂತೆ ಇಲ್ಲಿ ಜನಪದ ಸಾಹಿತ್ಯಕ್ಕೆ ಸಂಬಂಧಿಸಿದ ಪರಿಚಯಾತ್ಮಕವಾದ ಲೇಖನಗಳಿವೆ. ಪೀಠಿಕೆಯಲ್ಲಿ ಜಾನಪದದ ಬಗ್ಗೆ ಲೇಖಕರು ಮಾಡಿರುವ ಚರ್ಚೆ ಉಪಯುಕ್ತವಾಗಿದೆ. ಗೀತೆ, ಕಥನ ಗೀತೆ—ಲಾವಣಿ, ಗಾದೆ, ಒಗಟು, ಕಥೆಗಳನ್ನು ಕುರಿತಂತೆ ಪ್ರಾಥಮಿಕವೆನ್ನಬಹುದಾದ ಸಂಗತಿಗಳನ್ನು ನಿರೂಪಿಸಿದ್ದಾರೆ. ಒಟ್ಟಿನಲ್ಲಿ ಈ ಕಿರುಕೃತಿ ಜಾನಪದ ಕ್ಷೇತ್ರದ ಹೊಸಬರ ಕುತೂಹಲವನ್ನು ತಣಿಸುತ್ತದೆ.

ಜಾನಪದ ಕಥೆಯ ವಸ್ತು ಮತ್ತು ತಂತ್ರ ಹಾಗೂ ಇನ್ನಿತರ ಲೇಖನಗಳು :
ವೀರಣ್ಣ ದಂಡೆ

ತರುಣ ಜಾನಪದ ವಿದ್ವಾಂಸರಾದ ವೀರಣ್ಣದಂಡೆಯವರು ಜನಪದ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಕುರಿತು ನಡೆಸಿದ ಆಲೋಚನೆಗಳು ಇಲ್ಲಿಯ ಕೆಲವು ಲೇಖನಗಳಲ್ಲಿ ಚೊಕ್ಕವಾಗಿ ಮೂಡಿಬಂದಿವೆ. ಲೇಖಕರು ಜಾನಪದವನ್ನು ಕ್ಷೇತ್ರಕಾರ್ಯದ ಹಿನ್ನೆಲೆಯಲ್ಲಿಯೇ ಹೆಚ್ಚು ಗ್ರಹಿಸುತ್ತಾರೆ. ಎಂಬುದಕ್ಕೆ "ಒಕ್ಕಲಿಗನ ಎರಡು ಸಂಕೇತ ಶಕ್ತಿಗಳು" ಎಂಬ ಲೇಖನ ಉದಾಹರಣೆಯಾಗಿದೆ. ಈ ಎರಡು ಸಂಕೇತಗಳನ್ನು ಕುರಿತಂತೆ ಇವರು ಕೈಕೊಳ್ಳುವ ತೀರ್ಮಾನ ಔಚಿತ್ಯಪೂರ್ಣವೆಂದೇ ಹೇಳಬೇಕು. ಈ ತೀರ್ಮಾನಕ್ಕೆ ಬರಲು ದಂಡೆಯವರು ಸಂಗ್ರಹಿಸಿರುವ ಮಾಹಿತಿಗಳು

ಸಮರ್ಥವಾಗಿವೆ. ನಮ್ಮ ಕೃಷಿ ಸಂಸ್ಕೃತಿಯಲ್ಲಿ ಹುದುಗಿರುವ ಇಂಥ ಅನೇಕ ಶಕ್ತಿ, ಸಂಕೇತಗಳ ಅಧ್ಯಯನ ಇನ್ನೂ ಆಗಬೇಕಾಗಿದೆ. ಮೊದಲ ಲೇಖನದ ಒಳನೋಟ, ಮುಂದಿನ ಲೇಖನಗಳಲ್ಲಿ ಇಲ್ಲದಿದ್ದರೂ ಜಾನಪದ ಶಿಸ್ತು ಮತ್ತು ಅಚ್ಚುಕಟ್ಟುತನ ವನ್ನು ಇವರ ಬರವಣಿಗೆಯಲ್ಲಿ ಗುರುತಿಸಬಹುದು.

ಜನಪದ ಸಾಹಿತ್ಯದಲ್ಲಿ ಜೀವನ ದರ್ಶನ : ಎಸ್. ಬಿ. ತೋಟದ

ಕೆಲವು ಜನಪದ ಗೀತೆಗಳ ಸಂಗ್ರಹಗಳನ್ನು ಬಳಸಿಕೊಂಡು ಆ ಮೂಲಕ ಜೀವನ ದರ್ಶನವನ್ನು ಅರಸುವ ಪ್ರಯತ್ನವನ್ನು ಈ ಪುಟ್ಟ ಕೃತಿಯಲ್ಲಿ ಮಾಡಲಾಗಿದೆ. ಪ್ರಸ್ತಾವನೆಯಲ್ಲಿ ಜನಪದ ಸಂಸ್ಕೃತಿ, ಜನಪದ ಗೀತೆಗಳು ಹುಟ್ಟುವ, ಹಾಡಲ್ಪಡುವ ಸಂದರ್ಭಗಳ ಸೂಕ್ಷ್ಮವಾದ ವಿವೇಚನೆಯಿದೆ. ಗೀತೆಗಳಿಗಿರುವ ಶ್ರಮದ ಹಿನ್ನೆಲೆಯನ್ನೂ ಸೂಚಿಸಲಾಗಿದೆ. ಇಷ್ಟನ್ನು ಬಿಟ್ಟರೆ ಕೃತಿಯ ಉಳಿದ ಭಾಗವೆಲ್ಲ ಜನಪದ ಹಾಡುಗಳ ವೈಭವೀಕರಣಕ್ಕೆ ಮೀಸಲಾಗಿದೆ. ಇಲ್ಲಿ ಮೆಚ್ಚಬಹುದಾದ ಒಂದು ಅಂಶ ರಸವತ್ತಾದ ನಿರೂಪಣೆ.

ಜನಪದದಲ್ಲಿ ಮಳೆರಾಯನ ಮುನಿಸು : (ಸಂ.) ಬಸವರಾಜ ಆಕಳವಾಡಿ

ಮಳೆರಾಯ ಮುನಿಸಿಕೊಂಡಾಗ ಜನಪದ ಜೀವನದ ಮೇಲೆ ಉಂಟಾಗುವ ಭೀಕರ ಪರಿಣಾಮವನ್ನು ಅರಿತ ಲೇಖಕರು ಆ ಧೋರಣೆಯಲ್ಲೇ ಈ ಕೃತಿಯನ್ನು ರಚಿಸಿದ್ದಾರೆ. ಮಳೆರಾಯನಿಗೆ ಸಂಬಂಧಿಸಿದ ವೈದಿಕ, ಜಾನಪದೀಯ ಮಾಹಿತಿಗಳನ್ನು ಕಲೆಹಾಕಿದ್ದಾರೆ. ಮಳೆಯನ್ನು ತರಲು ಜಾನಪದರು ಮಾಡುವ ವಿವಿಧ ಆಚರಣೆಗಳ ನಿರೂಪಣೆ ಇದೆ. ಈ ಕೃತಿಯನ್ನು ಕೃತಿರೂಪದ ಲೇಖನ ಎನ್ನಬಹುದು. ಯಾಕೆಂದರೆ ಇಲ್ಲಿ ಒಂದು ಲೇಖನ ಕೃತಿರೂಪ ಪಡೆದಿರುವುದು ಸ್ಪಷ್ಟವಾಗಿದೆ. ಇದೇನೇ ಇದ್ದರೂ ಲೇಖಕರ ಉದ್ದೇಶ ಮಳೆರಾಯನ ಮುನಿಸನ್ನು ನಿರೂಪಿಸಿ, ಸಂಬಂಧಿಸಿದ ಆಚರಣೆ ಗಳನ್ನು ಹೇಳುವುದು, ಈ ಉದ್ದೇಶ ಈಡೇರಿದೆ.

ಜಾನಪದ ಜೀವನ : ಶ್ರೀ ಕೃಷ್ಣಭಟ್ ಅರ್ತಿಕಜೆ

ಹವ್ಯಕ ಜನಾಂಗದಲ್ಲಿ ಪ್ರಚಲಿತವಾಗಿರುವ ಹಾಡುಗಳ ಅಧ್ಯಯನ ಈ ಕೃತಿಯ ಉದ್ದೇಶ. ದೈವಸ್ತುತಿ, ಪ್ರಕೃತಿ, ತಾಯಿ, ಮಕ್ಕಳ ಹಾಡುಗಳು, ನೀತಿ ಎಂಬ ಐದು ವಿಭಾಗದಲ್ಲಿ ಈ ಅಧ್ಯಯನ ಸಾಗಿದೆ. ಗೀತೆಗಳನ್ನು ಹವ್ಯಕ ಜನಾಂಗದ ಸಾಂಸ್ಕೃತಿಕ, ಭೌಗೋಳಿಕ ಹಿನ್ನೆಲೆಯಲ್ಲಿ ಅರ್ಥ ಮಾಡಿಕೊಳ್ಳುವ ಸೂಚನೆಗಳು ಅಲ್ಲಲ್ಲಿ ಕಂಡು ಬಂದರೂ ಇದು ಫಲಪ್ರದವಾಗಿಲ್ಲ. ಇದು ಲೇಖಕರ ಗುರಿಯಾಗಿತ್ತೇ ಎನ್ನುವ ಸಂಶಯವೂ ನಿವಾರಣೆಯಾಗುವುದಿಲ್ಲ. ಸರಳವಾಗಿ ಐದು ವಿಭಾಗ ಮಾಡಿ ಆಯಾ ವಿಭಾಗಕ್ಕೆ ಸಂಬಂಧಿಸಿದ ಒಂದೊಂದು ತ್ರಿಪದಿಯನ್ನು ನಿರೂಪಿಸಿ ಅದರ

ಆಶಯವನ್ನು ಹೇಳುವುದು ಇವರ ಅಧ್ಯಯನ ವಿಧಾನ. ಜನಪದ ಗೀತೆಗಳೇ ಸರಳ ವಾಗಿರುವುದರಿಂದ ಈ ಬಗೆಯ ಅಧ್ಯಯನ ಹೇಗೆ ಉಪಯುಕ್ತ ಎಂಬುದು ತಿಳಿಯು ವುದಿಲ್ಲ. ಇವಕ್ಕಿಂತ ಸಂಗ್ರಹಗಳೇ ಉತ್ತಮ ಎನಿಸುತ್ತದೆ.

ಜಾನಪದ ಸಮಾಲೋಕನ : ಎಂ. ಜಿ. ಬಿರಾದಾರ

ವಿಷಯ ವೈವಿಧ್ಯದಿಂದ ಕೂಡಿದ ಐದು ಲೇಖನಗಳು ಈ ಕೃತಿಯಲ್ಲಿವೆ. ಸಾಮಾಜಿಕ ಮೌಲ್ಯಗಳು ಮತ್ತು ಹೋಳಿಯನ್ನು ಕುರಿತ ಎರಡು ಲೇಖನಗಳು ಜಾನಪದದ ಸಂಸ್ಕೃತಿಗೆ ಸಂಬಂಧಿಸಿದ್ದು, ಉಳಿದ ಮೂರು ಲೇಖನಗಳು ಜಾನಪದ ಸಾಹಿತ್ಯಕ್ಕೆ ಸಂಬಂಧಿಸಿವೆ. ಜಾನಪದ ಮೌಲ್ಯಗಳನ್ನು ಕುರಿತ ಲೇಖನ ಲೇಖಕರ ಜಾನಪದ ಜಿಜ್ಞಾಸೆಗೆ ಹಿಡಿದ ಕನ್ನಡಿ. ಇಲ್ಲಿ ಇವರ ಆಲೋಚನೆಯ ಅಚ್ಚುಕಟ್ಟು ತನವನ್ನು ಕಾಣಬಹುದು. ಜನಪದ ಸಂಸ್ಕೃತಿಯ ಹಲವಾರು ಮೌಲ್ಯಗಳ ವಿಸ್ತಾರ ವಾದ ಚರ್ಚೆ ಇಲ್ಲಿದೆ. ಆದರೆ ಇದೇ ಮೌಲ್ಯಗಳು ಶಿಷ್ಟ ಸಮಾಜದ ಮೌಲ್ಯಗಳು ಹೇಗಾದವು? ಇದರ ಹಿಂದಿರುವ ಸಾಮಾಜಿಕ ಸಾಂಸ್ಕೃತಿಕ ಕೌತುಕಗಳೇನು ಎಂಬುದನ್ನು ಚರ್ಚಿಸಿದ್ದರೆ ಲೇಖನಕ್ಕೆ ಇನ್ನೂ ತೂಕ ಬರುತ್ತಿತ್ತು. ಹೋಳಿ ಹಬ್ಬವನ್ನು ಕುರಿತ ಲೇಖನ ಸ್ವಾರಸ್ಯಕರವೂ ಅಭ್ಯಾಸಯೋಗ್ಯವೂ ಆಗಿದೆ. ಲಾವಣಿ ಮತ್ತು ಜನಪದ ಸಾಹಿತ್ಯ ಪ್ರಕಾರಗಳನ್ನು ಕುರಿತ ಲೇಖನಗಳು ಲೇಖಕರ ಕ್ಷೇತ್ರಕಾರ್ಯ ಮತ್ತು ವಿದ್ವತ್ತಿನ ಫಲ ಎನ್ನಬಹುದು. ಹೀಗೆ ಜಾನಪದ ಅಭ್ಯಾಸಿಗಳಿಗೆ ಇದೊಂದು ಉಪ ಯುಕ್ತ ಕೃತಿ.

ಜಾನಪದ ಉಪಾಸನೆ : ಜ್ಯೋತಿ ಹೊಸೂರ

ಜಾನಪದ ಸಂಸ್ಕೃತಿ ಮತ್ತು ಸಾಹಿತ್ಯಕ್ಕೆ ಸಂಬಂಧಿಸಿದ ಎಂಟು ಲೇಖನಗಳಿವೆ. ಇವರಲ್ಲಿ ಮೂರು ಇತರರ ಕೃತಿ ವಿಮರ್ಶೆಗಳು. 'ಕನ್ನಡ ಜನಪದ ಸಾಹಿತ್ಯದ ವಿಮರ್ಶಾಕೃಷಿ' ಎಂಬ ಲೇಖನ ವಿದ್ವತ್ಪೂರ್ಣವೂ ಉಪಯುಕ್ತವೂ ಆಗಿದೆ. ಇಲ್ಲಿಯ ಇನ್ನಿತರ ಲೇಖನಗಳೂ ಕೂಡ ಅಭ್ಯಾಸಯೋಗ್ಯವಾಗಿದೆ.

'ಜಾನಪದದಲ್ಲಿ ಸಹಕಾರ' ಎಂಬ ಲೇಖನದಲ್ಲಿ ಗ್ರಾಮೀಣ ಪ್ರದೇಶದಲ್ಲಿರುವ ಸಹಕಾರದ ಸ್ವರೂಪವನ್ನು ಎತ್ತಿತೋರಿಸುವ ಉತ್ಸಾಹವಿದೆ. ಈ ಉತ್ಸಾಹದ ಭರದಲ್ಲಿ ಜಾನಪದ ಸಮಾಜದ ಶ್ರೇಣೀಕರಣ ಲೇಖಕರಿಗೆ ಕಾಣದೆ ಹೋಗಿರುವುದು ಒಂದು ದೋಷವೆಂದೇ ಹೇಳಬೇಕು. ಗೊಂದಲ ಮತ್ತು ಗೊಂದಲಿಗರ ಹಿನ್ನೆಲೆ ಯನ್ನು ಕುರಿತು ಲೇಖಕರು ಬರೆದಿರುವ ಲೇಖನ ಉತ್ತಮವಾಗಿದೆ. ಕೊನೆಯ ಲೇಖನದ ಶೀರ್ಷಿಕೆ "ಗೊಂದಲ"ದ ಗೊಂದಲ. ಲೇಖಕರ ವಿವಾದಪ್ರಿಯತೆಗೆ ಸಾಕ್ಷಿ ಯಾಗಿದೆ.

ಅಸಾದಿ ವೃತ್ತಿಗಾಯಕರು : ಬಸವರಾಜ್ ನೆಲ್ಲಿಸರ

ಕೆಲವು ವಿಶಿಷ್ಟ ಲೇಖನಗಳು, ಕೃತಿಗಳ ಮೂಲಕ ಜಾನಪದ ಕ್ಷೇತ್ರದಲ್ಲಿ ಖ್ಯಾತರಾಗುತ್ತಿರುವ ಬಸವರಾಜ ನೆಲ್ಲಿಸರ ಅವರ ಈ ಕೃತಿ ಹಲವಾರು ಕಾರಣಗಳಿಂದ ವಿಭಿನ್ನವಾಗಿದೆ. ಇಲ್ಲಿಯವರೆವಿಗೂ ವೃತ್ತಿಗಾಯಕರೆಂದು ಒಳಗಾಗದಿದ್ದ ವರ್ಗವೊಂದನ್ನು ಪತ್ತೆ ಹಚ್ಚಿ, ವಿದ್ವತ್ ಲೋಕಕ್ಕೆ ಪರಿಚಯಿಸಿದ್ದಾರೆ. ದಕ್ಷಿಣ ಕರ್ನಾಟಕದ ವೃತ್ತಿಗಾಯಕರನ್ನು ಕುರಿತು ಆಳವಾದ ಅಧ್ಯಯನವನ್ನು ನಡೆಸಿರುವ ಜೀಶಂಪ ಅವರಿಗೆ ಆಸಾದಿಗಳು ಕಣ್ಣಿಗೆ ಬೀಳದೆ ಹೋದದ್ದು ಆಶ್ಚರ್ಯವೆಂದು ಬಸವರಾಜ ನೆಲ್ಲಿಸರ ಅವರು ಹೇಳುತ್ತಾರೆ. ಇದಕ್ಕೆ ಆಶ್ಚರ್ಯ ಪಡುವ ಕಾರಣವೇನೂ ಇಲ್ಲ. ಈ ಕ್ಷೇತ್ರಕ್ಕೆ ಜೀಶಂಪ ಅವರ ಕಾಣಿಕೆ ಕಡಿಮೆ ಏನಲ್ಲ. ಇದನ್ನು ಗಮನದಲ್ಲಿಟ್ಟುಕೊಂಡೆ ನೆಲ್ಲಿಸರ ಅವರ ಕೊಡುಗೆಯನ್ನು ಅಭಿನಂದಿಸಬಹುದು.

ದಾಸಪ್ಪ – ಜೋಗಪ್ಪ : ಹಿ. ಚಿ. ಬೋರಲಿಂಗಯ್ಯ

ವೈಷ್ಣವ ಧರ್ಮ ಮತ್ತು ತಿರುಪತಿ ವೆಂಕಟರಮಣನನ್ನು ಪ್ರಚಾರ ಮಾಡಲು ಹುಟ್ಟಿಕೊಂಡ ದಾಸಪ್ಪ ಸಂಪ್ರದಾಯ, ಶೈವಧರ್ಮ ಮತ್ತು ಚುಂಚನಗಿರಿ ಭೈರುವನನ್ನು ಪ್ರಚಾರಮಾಡಲು ಹುಟ್ಟಿಕೊಂಡ ಜೋಗಪ್ಪ ಸಂಪ್ರದಾಯಗಳ ವಿವರವಾದ ಅಧ್ಯಯನ ಈ ಕೃತಿಯ ಗುರಿ. ಕ್ಷೇತ್ರಕಾರ್ಯದ ಬೆನ್ನೆಲುಬೂ ಸೇರಿ ಈ ಕೃತಿ ಶಕ್ತಿಯುತವಾಗಲು ಕಾರಣವಾಗಿದೆ. ಎರಡೂ ಸಂಪ್ರದಾಯಗಳ ಕ್ಷೇತ್ರ ವಿವರಗಳು, ಪದಗಳು, ಮತ್ತು ವಕ್ತಾರರ ಸಂದರ್ಶನಗಳು ಉಪಯುಕ್ತವಾಗಿವೆ. ಕಡೆಗಣಿಸಲ್ಪಟ್ಟ ಜನಪದ ಸಂಪ್ರದಾಯಗಳ ಅಭ್ಯಾಸ ತುರ್ತಾಗಿ ಆಗಬೇಕಾದ ಈ ಸಂದರ್ಭದಲ್ಲಿ ಜಾನಪದ ತಜ್ಞನಿಗೆ ಸಾಮಾಜಿಕ ಎಚ್ಚರವೂ—ಅಗತ್ಯವಾಗಿದೆ. ಈ ಬಗೆಯ ಎಚ್ಚರ ಪ್ರಸ್ತುತ ಲೇಖಕರಲ್ಲಿ, ಕಂಡುಬರುತ್ತಿರುವುದು ಆರೋಗ್ಯಕರ ಸಂಗತಿ. ಸಂಪ್ರದಾಯಗಳ ಇನ್ನೊಂದು ಮುಖವಾಗಬಹುದು. ಶೋಷಣೆಯ ಅರಿವೂ ಇವರಿಗಿದೆ. ಇವರ ಪ್ರಯತ್ನ ಸ್ವಾಗತಾರ್ಹವೆಂದು ಹೇಳಬಹುದು.

ಕರ್ನಾಟಕದ ಜಾನಪದ : (ಸಂ.) ಜಿ. ಎಸ್. ಶಿವರುದ್ರಪ್ಪ

ಬೆಂಗಳೂರು ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಕೇಂದ್ರವು ಏರ್ಪಡಿಸಿದ್ದ 'ಕರ್ನಾಟಕ ಜಾನಪದ' ವಿಚಾರ ಸಂಕಿರಣದಲ್ಲಿ ಮಂಡಿಸಲಾದ ಹದಿನೇಳು ಲೇಖನಗಳನ್ನು, ಅವುಗಳನ್ನು ಕುರಿತು ಕೇಳಿದ ಪ್ರಶ್ನೋತ್ತರ ಸಹಿತ ಪುಸ್ತಕ ರೂಪದಲ್ಲಿ ತರಲಾಗಿದೆ.

ಜಾನಪದ ಮತ್ತು ಕನ್ನಡ ಸಾಹಿತ್ಯ, ಆಧುನಿಕ ಪರಿಸರ ಮತ್ತು ಜನಪದ ಸಾಹಿತ್ಯ, ಸಾಹಿತ್ಯೇತರ ಜಾನಪದ, ಜನಪದ ಸಾಹಿತ್ಯ ವಿಶ್ಲೇಷಣೆ, ಕರ್ನಾಟಕದ

ಜಾನಪದ ಅಧ್ಯಯನ ಸಮಸ್ಯೆಗಳು, ಹೀಗೆ ಐದು ವಿಭಾಗಗಳಲ್ಲಿ ಪ್ರಬಂಧಗಳು ಪ್ರಕಟವಾಗಿವೆ. ಕರ್ನಾಟಕದ ನಾನಾ ಭಾಗಗಳಲ್ಲಿ ಜಾನಪದ ಕ್ಷೇತ್ರದಲ್ಲಿ ದುಡಿಯುತ್ತಿರುವ ತಜ್ಞರ ಲೇಖನಗಳನ್ನು ಈ ಕೃತಿ ಒಳಗೊಂಡಿದೆ. ಕ್ಷೇತ್ರಕಾರ್ಯದ ಆಳವಾದ–ಅನುಭವ, ಅಪಾರವಾದ ವಿದ್ವತ್ ಪರಿಶ್ರಮದ ಪ್ರತಿಫಲವಾದ ಇಲ್ಲಿಯ ಲೇಖನಗಳು ಜಾನಪದಾಭ್ಯಾಸಿಗಳಿಗೆ ಅತ್ಯಂತ ಉಪಯುಕ್ತವಾಗಿವೆ.

"ಕರ್ನಾಟಕ ಜಾನಪದವನ್ನು ಅಧ್ಯಯನ ಮಾಡುವ ವಿವಿಧ ನೆಲೆಗಳನ್ನು ಗುರುತಿಸುವುದು, ಈವರೆಗಿನ ಪ್ರಯತ್ನವನ್ನು ಪರಿಶೀಲಿಸುವುದು, ಆಧುನಿಕ ಸಾಹಿತ್ಯ-ಸಂಸ್ಕೃತಿಗಳ ಸಂದರ್ಭದಲ್ಲಿ ಜಾನಪದ ಸ್ವರೂಪ ವಿಶ್ಲೇಷಣೆಗಳನ್ನು ಕುರಿತು ಆಲೋಚಿಸುವುದು, ವಿವಿಧ ಜ್ಞಾನ ಶಾಖೆಗಳ ನೆರವಿನಿಂದ ಜಾನಪದವನ್ನು ಅಧ್ಯಯನ ಮಾಡುವ ಸಾಧ್ಯತೆಗಳನ್ನು ಕಂಡುಕೊಳ್ಳುವುದು—ಈ ವಿಚಾರ ಸಂಕಿರಣದ ಉದ್ದೇಶಗಳಲ್ಲಿ ಮುಖ್ಯವಾದುವುಗಳು" ಎಂದು ಈ ಕೃತಿಯ ಮುನ್ನುಡಿಯಲ್ಲಿ ಸಂಪಾದಕರಾದ ಜಿ. ಎಸ್. ಶಿವರುದ್ರಪ್ಪನವರು ಹೇಳಿದ್ದಾರೆ. ಅವರ ಮಾತುಗಳ ಹಿನ್ನೆಲೆಯಲ್ಲಿ ಜಾನಪದ ತತ್ವಕ್ಕೆ ಸಂಬಂಧಿಸಿದ ಇತ್ತೀಚಿನ ಕೃತಿಗಳಲ್ಲಿ ಇದು ಮಹತ್ವವಾದದ್ದು ಎನ್ನಬಹುದು.

—ಸಿದ್ಧಲಿಂಗಯ್ಯ

# ಸಂಕೀರ್ಣ

**ಜಿ. ಎಸ್. ಶಿವರುದ್ರಪ್ಪ**

ಈ ವರ್ಷ ಈ ವಿಭಾಗದ ಪರಿಶೀಲನೆಗೆ ದೊರೆತ ಕೃತಿಗಳ ಸಂಖ್ಯೆ ಇಪ್ಪತ್ತ ರಷ್ಟಿವೆ. ಹಿಂದಿನ ಕೆಲವು ವರ್ಷಗಳಿಗೆ ಹೋಲಿಸಿದರೆ, ವೈವಿಧ್ಯದಲ್ಲಾಗಲೀ, ಗುಣ ದಲ್ಲಾಗಲೀ ತೀರಾ ಮಹತ್ವದ್ದೆನಿಸುವ ಯಾವ ಕೃತಿಯೂ ಈ ವರ್ಷ ಕಾಣಲಿಲ್ಲ.

ಸಿಂಗಾರ ಮತ್ತು ಬೆಳ್ಳಿ ಕರ್ನಾಟಕ, ಈ ವರ್ಷದ ಹಾ.ಮಾ. ನಾಯಕರ. ಕೃತಿಗಳು ಮೊದಲನೆಯದು ಅವರು ಬೇರೆ ಬೇರೆಯವರ ಪುಸ್ತಕಗಳಿಗೆ ಬರೆದ ಹನ್ನೆರಡು ಮುನ್ನುಡಿಗಳ ಒಂದು ಸಂಕಲನವಾದರೆ, ಎರಡನೆಯದು ಕರ್ನಾಟಕ ರಾಜ್ಯೋತ್ಸವದ ವರ್ಷದಲ್ಲಿ ಕನ್ನಡವನ್ನು, ಕನ್ನಡಿಗರನ್ನು ಕುರಿತು ಅವರು ಬರೆದ ಲೇಖನ, ಸಂದರ್ಶನ ಇತ್ಯಾದಿಗಳನ್ನು ಒಳಗೊಳ್ಳುವಂಥದ್ದು.

'ಸಿಂಗಾರ', ಹನ್ನೆರಡು ಪುಸ್ತಕಗಳಿಗೆ ನಾಯಕರು ಆಗಾಗ ಬರೆದ ಮುನ್ನುಡಿಗಳ ನ್ನೊಳಗೊಂಡ 165 ಪುಟಗಳ ಪುಸ್ತಕ. ಅವರು ಅನೇಕ ಪುಸ್ತಕಗಳಿಗೆ ಮುನ್ನುಡಿ ಬರೆದಿದ್ದರೂ, ಅವೆಲ್ಲವನ್ನೂ ಒಟ್ಟಿಗೆ ತಾರದೆ ಕೇವಲ ಹನ್ನೆರಡನ್ನು ಮಾತ್ರ ಆಯ್ದು ಸಂಕಲಿಸಿರುವುದಾಗಿ ಹೇಳಿಕೊಂಡಿದ್ದಾರೆ. ಇವುಗಳಲ್ಲಿ ಮೊದಲನೆಯದು ಇಪ್ಪತ್ತು ವರ್ಷಗಳ ಹಿಂದೆ ಅವರು ಚದುರಂಗರ ಸಣ್ಣ ಕತೆಗಳ ಸಂಗ್ರಹಕ್ಕೆ ಬರೆದ ಮುನ್ನುಡಿಯಾದರೆ, ಇತ್ತೀಚಿನದು ಗೊರೂರ್ ಅವರ ಅಮೆರಿಕಾ ಪ್ರವಾಸ ಕಥನಕ್ಕೆ ಬರೆದದ್ದು, ಅವರ ಇನ್ನುಳಿದ ಎಲ್ಲ ಮುನ್ನುಡಿಗಳನ್ನೂ ಹೀಗೆಯೆ ಬೇರೆ ಬೇರೆಯ ಸಂಪುಟಗಳಾಗಿ ತರುವ ಉದ್ದೇಶವಿದೆ ಎಂಬುದನ್ನು ಸೂಚಿಸಿದ್ದಾರೆ.

ಮುನ್ನುಡಿಗಳು ಮೂಲತಹ, ಆಯಾ ಕೃತಿಗಳಿಗಾಗಿ ಬರೆದವು ; ಒಂದು ರೀತಿ ಯಲ್ಲಿ ಆಯಾಕೃತಿಗಳ ಒಂದು ಭಾಗವೇ ಎನ್ನಬಹುದಾದವು. ಆಯಾಕೃತಿಗಳ ಒಳಗಿನ ವಸ್ತುವನ್ನು; ಆ ವಸ್ತುವನ್ನು ನಿರ್ವಹಿಸಿದ ಲೇಖಕರನ್ನು ಕುರಿತು, ಮೆಚ್ಚಿಗೆ, ವ್ಯಾಖ್ಯಾನ ಹಾಗೂ ವಿಮರ್ಶೆಯಾಗಿ ರೂಪುಗೊಂಡಂಥವು. ಹೀಗಿರುವಾಗ ಇಂಥ ಮುನ್ನುಡಿಗಳನ್ನು, ಮೂಲ ಕೃತಿಗಳಿಂದ ಬೇರ್ಪಡಿಸಿ, ಹೀಗೆ ಪ್ರತ್ಯೇಕ ಪುಸ್ತಕವಾಗಿ ಪ್ರಕಟಿಸಬಹುದೆ ಎನ್ನುವ ಪ್ರಶ್ನೆಯೊಂದಿದೆ. ಈ ಪ್ರಶ್ನೆಗೆ ಉತ್ತರವಾಗಿ, ಮಾಸ್ತಿ, ದೇಜಗೌ, ಪರಮೇಶ್ವರಭಟ್ಟ ಮತ್ತು ಸಿ.ಪಿ.ಕೆ. ಇವರು ಈಗಾಗಲೇ ಪ್ರಕಟಿಸಿರುವ ಮುನ್ನುಡಿಗಳ ಸಂಕಲನದ ಪರಂಪರೆಯೊಂದಿದೆ ಎಂಬ ಕಡೆಗೆ ನಾಯಕರು ನಮ್ಮ

ಗಮನವನ್ನು ಸೆಳೆಯುತ್ತಾರೆ. ಮುನ್ನುಡಿಗಳು ಮೂಲತಹ ಅವು ಯಾವ ಹಾಗೂ ಯಾರ ಕೃತಿಗಳಿಗಾಗಿ ಬರೆಯಲ್ಪಟ್ಟುವೊ. ಅವುಗಳ ಒಂದು ಭಾಗವೆಂಬುದು ನಿಜ ವಾದರೂ. ಅವುಗಳನ್ನು ಪ್ರತ್ಯೇಕವಾಗಿ, ಒಂದು ಅನುಕ್ರಮದಲ್ಲಿ ಪ್ರಕಟಿಸಿದಾಗ. ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಹಲವು ಮೌಲಿಕವಾದ ಸಂಗತಿಗಳ ದಾಖಲೆಯೂ ಆಗಬಹುದು. ಮತ್ತು ಸಾಹಿತ್ಯ ಮೀಮಾಂಸೆಯನ್ನು ಕುರಿತ ಸಂಗತಿಗಳೂ ಪ್ರತ್ಯೇಕ ವಾದ ಪರಿಭಾವನೆಗೆ ಅರ್ಹವಾಗಬಹುದು. ನಾಯಕರ ಮುನ್ನುಡಿಯ ಈ ಸಂಕಲನ ದಲ್ಲಿ ಅವರು ಯಾವ ಸಾಹಿತ್ಯ ಪ್ರಕಾರವನ್ನು ಕುರಿತು ಮುನ್ನುಡಿ ಬರೆಯುತ್ತಿದ್ದಾರೋ, ಆಯಾ ಸಾಹಿತ್ಯ ಪ್ರಕಾರದ ಒಂದು ಚಾರಿತ್ರಿಕ ಸಮೀಕ್ಷೆ ಮತ್ತು ಆಯಾ ಸಾಹಿತ್ಯ ಪ್ರಕಾರದಲ್ಲಿ ಪ್ರಸ್ತುತ ಕೃತಿಕಾರರು ನಡೆಸಿದ ಸಾಧನೆ ಇವುಗಳು ದಾಖಲಾಗಿವೆ. ಚದುರಂಗರ ಸಣ್ಣ ಕತೆಯ ಸಂಕಲನಕ್ಕೆ ಮುನ್ನುಡಿ ಬರೆಯುವಾಗ. ಕನ್ನಡದಲ್ಲಿ ಸಣ್ಣ ಕತೆಯ ಒಂದು ಚಾರಿತ್ರಿಕ ಸಮೀಕ್ಷೆಯನ್ನೂ, ಎಸ್. ವಿ. ಪರಮೇಶ್ವರಭಟ್ಟರ ಉಪ್ಪು ಕಡಲು. ಸಿದ್ಧಯ್ಯ ಪುರಾಣಿಕರ ವಚನೋದ್ಯಾನಗಳಿಗೆ ಮುನ್ನುಡಿ ಬರೆಯು ವಾಗ ವಚನ ಪ್ರಕಾರದ ಒಂದು ಚಾರಿತ್ರಿಕ ಸಮೀಕ್ಷೆಯನ್ನೂ. ಗೊರೂರು ಅವರ ಪ್ರವಾಸ ಸಾಹಿತ್ಯಕ್ಕೆ ಬರೆಯುವಾಗ ಪ್ರವಾಸ ಸಾಹಿತ್ಯ ಬೆಳೆದು ಬಂದ ಬಗೆಯನ್ನೂ ನಾಯಕರು ಕೊಡುತ್ತಾರೆ. ಇವು ಸಾಹಿತ್ಯದ ಸಾಮಾನ್ಯ ವಿದ್ಯಾರ್ಥಿಗೆ ಉಪಯುಕ್ತ ವಾದವುಗಳೆಂದು ಬೇರೆ ಹೇಳಬೇಕಾಗಿಲ್ಲ. ಇವರ ಜತೆಗೆ ಆಯಾ ಕೃತಿಕಾರರ ಅಭಿವ್ಯಕ್ತಿ ಗಳನ್ನೂ ಕುರಿತ ವಿಮರ್ಶೆಯ ಅಂಶಗಳೂ ಇದರಲ್ಲಿವೆ.

ಈ ಹನ್ನೆರಡು ಮುನ್ನುಡಿಗಳಲ್ಲಿ ನಾಯಕರು. ಈಗಾಗಲೇ ಗಂಭೀರವಾದ ಸಾಹಿತ್ಯದ . ವಿದ್ಯಾರ್ಥಿಗಳಿಗೆ ತಕ್ಕಮಟ್ಟಿಗೆ ಗೊತ್ತಿರುವ ಸಂಗತಿಗಳನ್ನು ಇನ್ನಷ್ಟು ಚೆನ್ನಾಗಿ ಹೇಳಿದ್ದಾರೆ. ಎಲ್ಲ ಮುನ್ನುಡಿಗಳಿಗೂ ಒಂದು ಸಾಮಾನ್ಯವಾದ ಚೌಕಟ್ಟು ಇದೆ. ಮುನ್ನುಡಿಕಾರರಿಗೂ. ಮುನ್ನುಡಿ ಕೇಳಿದವರಿಗೂ ಇರುವ ವಿಶ್ವಾಸ-ಗೌರವಗಳ ಪ್ರಸ್ತಾಪ. ಮುನ್ನುಡಿ ಬರೆಯಲು ಎತ್ತಿಕೊಂಡ ಸಾಹಿತ್ಯ ಪ್ರಕಾರವನ್ನು ಕುರಿತ ಒಂದು ಚಾರಿತ್ರಿಕ ಸಮೀಕ್ಷೆ. ಪ್ರಸ್ತುತ ಕೃತಿಯನ್ನು ಕುರಿತು. ಪ್ರೋತ್ಸಾಹದ. ಪ್ರಶಂಸೆಯ ಹಾಗೂ ಕ್ವಚಿತ್ತಾಗಿ ವಿಮರ್ಶೆಯ ಮಾತು, ಕಡೆಯಲ್ಲಿ ಅವರವ ಕೃತಿಗಳ ಮುಂದಿನ ನಡೆಯನ್ನು ಕುರಿತು ಹಾರೈಕೆ. ಅಥವಾ ಅಭಿನಂದನೆಯ ಮಾತು—ಇದು ಇಲ್ಲಿರುವ ಬಹುತೇಕ ಮುನ್ನುಡಿ ಲೇಖನದ ಚೌಕಟ್ಟು. ಆದರೆ ಯಾಕೋ ಏನೋ. ನವ್ಯ ಬರೆಹಗಳ ಬಗೆಗೆ ನಾಯಕರಿಗೆ ಅಂತಹ ಒಲವಿರುವಂತ ತೋರದು. ಚದುರಂಗರ ಕತೆ ಗಳಿಗೆ ಮುನ್ನುಡಿ ಬರೆಯುವಾಗ "ನವ್ಯತೆಯನ್ನು ತೋರುವ ಚಪಲ. ನೀತಿಯನ್ನು ಬೋಧಿಸುವ ಕಾತರ ಅವರಿಗಿಲ್ಲ" (ಪು. 27) ಎನ್ನುತ್ತಾರೆ. "ಅಸಹಜ ನವ್ಯತೆಗೆ ಇಂದಿನ ಭಾರತೀಯ ಸಾಹಿತ್ಯದ ಬೆಳವಣಿಗೆಯ ಗತಿ ಒಂದು ಉದಾಹರಣೆಯಾಗಿದೆ" (ಪು. 30) ಎಂದು ಒಂದೆಡೆ ಹೇಳಿದರೆ. "ಇಂದಿನ ಹಲವು ಹೊಸ ಲೇಖಕರು ಬಗೆ ಬಗೆಯ ಕೊರಳ ಪಟ್ಟಿ ಕಟ್ಟಿಕೊಂಡು. ಪಂಥ ಪುಕ್ಕಗಳನ್ನು ಸಿಕ್ಕಿಸಿಕೊಂಡು ಲಾಗ

ಹಾಕುತ್ತಿದ್ದಾರೆ" (ಪು. 31) ಎಂದು ಗೇಲಿ ಮಾಡುತ್ತಾರೆ. "ಕೃತಿಗಳನ್ನು ನವ್ಯವೆ ಅಲ್ಲವೆ ಎಂದು ನೋಡಲಾಗುತ್ತದೆಯೆ ಹೊರತು, ಕಲೆಯೆ ಅಲ್ಲವೆ ಎಂದು ನೋಡು ವುದಿಲ್ಲ" (ಪು. 42) ಎಂಬಂತಹ ಭಾವನೆಯನ್ನು ಮೂಡಿಸುತ್ತಿದ್ದ ಪರಿಸರದಲ್ಲಿ ನಾಯಕರು ಆಡಿದ ಮಾತುಗಳನ್ನು, ಸುಳ್ಳೆಂದು ತಳ್ಳಿಹಾಕುವಂತಿಲ್ಲ. ಆದರೆ ನವ್ಯತೆ ಈಗಾಗಲೇ ಒಪ್ಪಿಕೊಳ್ಳಬೇಕಾದ ಒಂದು ಧೋರಣೆಯಾಗಿ ನೆಲೆಗೊಂಡಿದೆ ಎಂಬುದನ್ನೂ, ಅದನ್ನು ಗೇಲಿ ಮಾಡಬಹುದಾದ ಪರಿಸರದಿಂದ ಆಗಲೇ ನಾವು ಬಹುದೂರ ಬಂದಿರು ವುದರಿಂದ ವಸ್ತುನಿಷ್ಠವಾಗಿ ನವ್ಯದ ಕೊಡುಗೆಯನ್ನು ಪರಿಶೀಲಿಸುವ ಅಗತ್ಯವಿದೆ ಎಂಬುದನ್ನೂ, ಇಂದಿನ ವಿಮರ್ಶಕರು ತಿಳಿದುಕೊಳ್ಳಬೇಕಾಗಿದೆ.

'ಬೆಳ್ಳಿ ಕರ್ನಾಟಕ', ಕರ್ನಾಟಕ ರಾಜ್ಯೋತ್ಸವದ ಸಂದರ್ಭದಲ್ಲಿ, ನಾಯಕರು ಬರೆದ ಲೇಖನ, ಮಾಡಿದ ಉಪನ್ಯಾಸ, ನೀಡಿದ ಸಂದರ್ಶನ ಇವುಗಳನ್ನೊಳಗೊಂಡ ಅರುವತ್ತಾರು ಪುಟಗಳ ಒಂದು ಪುಸ್ತಕ. ಇದರಲ್ಲಿ ಒಟ್ಟು ಎಂಟು ಲೇಖನಗಳಿವೆ. "ಈ ಪುಟ್ಟ ಪುಸ್ತಕ ಕನ್ನಡದ ಒಬ್ಬ ದಾಸಯ್ಯನ ಜಾಗಟೆ ಬಡಿತ" ಎಂದು ಇದರ ಸ್ವರೂಪವನ್ನು ನಾಯಕರು ಮುನ್ನುಡಿಯಲ್ಲಿ ಹೇಳಿಕೊಂಡಿದ್ದಾರೆ. ನಾವು ಕನಸಿದ ಕರ್ನಾಟಕ, ನನಸಾಗಲಿಲ್ಲವೆಂಬ ವಿಷಾದ, ಕನ್ನಡಿಗರ ಅಭಿಮಾನ ಶೂನ್ಯತೆಯನ್ನು ಕುರಿತ ವ್ಯಥೆ, ಕನ್ನಡದ ಯಥಾ ಸ್ಥಿತಿಯನ್ನು ಕದಲಿಸದೆ ಉಳಿಸಿರುವ ಪಟ್ಟಭದ್ರ ಹಿತಾ ಸಕ್ತಿಗಳನ್ನು ಕುರಿತ ಕ್ರೋಧ, ಕನ್ನಡ ನಾಡಿನಲ್ಲಿ ಇನ್ನೂ ಕನ್ನಡ ತನ್ನ ಅಗ್ರಮಾನ್ಯತೆ ಯನ್ನು ಪಡೆಯುವುದು ಎಂದಿಗೆ ಎಂಬ ಹತಾಶೆ ಇವೆಲ್ಲವೂ ಅತ್ಯಂತ ಕಳಕಳಿಯಿಂದ ಈ ಕೃತಿಯಲ್ಲಿ ನಿರೂಪಿತವಾಗಿವೆ. ವಿಷಯ ಒಂದೇ ಆಗಿರುವುದರಿಂದ, ಬೇರೆ ಬೇರೆ ಲೇಖನಗಳಲ್ಲಿ ಮತ್ತೆ ಮತ್ತೆ ಪುನರಾವರ್ತನೆಗೊಂಡಿವೆ. ಇದು ಅನಿವಾರ್ಯ. "ಎಲ್ಲಿಯವರೆಗೆ ಕನ್ನಡನಾಡಿನಲ್ಲಿ ಕನ್ನಡ ಸರ್ವಮಾನ್ಯವಾದ ಭಾಷೆಯಾಗುವುದಿಲ್ಲವೊ, ಎಲ್ಲಿಯವರೆಗೆ ಕನ್ನಡಿಗರಲ್ಲಿ ಅಭಿಮಾನ ಬೆಳೆಯುವುದಿಲ್ಲವೊ, ಎಲ್ಲಿಯವರೆಗೆ ಕನ್ನಡಿಗರ ಶೋಷಣೆ ತಪ್ಪುವುದಿಲ್ಲವೊ ಅಲ್ಲಿಯವರೆಗೆ ಈ ಮಾತುಗಳನ್ನು ಮತ್ತೆ ಮತ್ತೆ ಹೇಳು ತ್ತಲೇ ಇರಬೇಕು" (ಪು. 8). "ಕಾಲು ಶತಮಾನದ ಕರ್ನಾಟಕ : ದೇವರಿಲ್ಲದ ಗುಡಿ"— ಎಂಬುದು ಈ ಸಂಗ್ರಹದಲ್ಲಿರುವ ಉಜ್ವಲವಾದ ಲೇಖನ. ಇದೊಂದನ್ನೆ ಪ್ರತ್ಯೇಕ ಪುಸ್ತಿಕೆಯನ್ನಾಗಿ, ಬಹು ಸಂಖ್ಯೆಯಲ್ಲಿ ಪ್ರಕಟಿಸಿ ಕನ್ನಡ ಜನಕ್ಕೆ ಹಂಚುವ ಅಗತ್ಯವಿದೆ— ಕನ್ನಡಿಗರ ಮುಖಕ್ಕೆ ಕನ್ನಡಿ ಹಿಡಿಯುವುದಕ್ಕೆ, ಮತ್ತೆ ಅವರನ್ನು ಎಚ್ಚರಿಸುವುದಕ್ಕೆ.

ಎಸ್. ಆರ್. ಗುಂಜಾಳ ಅವರ 'ಉತ್ತಂಗಿಯವರ ಉತ್ತುಂಗ ವಿಚಾರಗಳು', ವರದರಾಜ ಹುಯಿಲುಗೋಳ ಅವರು ಸಂಪಾದಿಸಿರುವ ಆಲೂರು ವೆಂಕಟ ರಾಯರ 'ಬಿಡಿ ನುಡಿಸಂಚಯ' ಈ ಎರಡೂ ಒಂದು ವರ್ಗಕ್ಕೆ ಸೇರುವ ಕೃತಿಗಳು.

ಎಸ್. ಆರ್. ಗುಂಜಾಳ ಅವರು ಉತ್ತಂಗಿ ಚನ್ನಪ್ಪನವರ ಜತೆಗೆ ಹನ್ನೆರಡು ವರ್ಷಗಳ ಕಾಲ ಇರಿಸಿಕೊಂಡ ನಿಕಟ ಸಂಪರ್ಕದ ಪರಿಣಾಮವಾಗಿ, ಅಂದಂದು ಅವರು ಚನ್ನಪ್ಪನವರೊಡನೆ ನಡೆಯಿಸಿದ ಸಂಭಾಷಣೆ, ಚರ್ಚೆ ಮತ್ತು ಅವರು ತಿಳಿಸಿದರೆನ್ನ

ಲಾದ ಹಲವಾರು ಸಂಗತಿಗಳು ಇವೆಲ್ಲವನ್ನೂ ಸ್ವಾರಸ್ಯವಾಗಿ ನಿರೂಪಿಸಿದ್ದಾರೆ. ಒಂದು ನೂರಾ ಅರುವತ್ತು ಪುಟಗಳ ಈ ಕೃತಿಯಲ್ಲಿ ಉತ್ತಂಗಿಯವರ 'ಉತ್ತುಂಗ ವಿಚಾರ ಗಳನ್ನು ಗುಂಜಾಳರು ದಾಖಲು ಮಾಡಿದ್ದಾರೆ. ಬಹುತೇಕ ಲೇಖನಗಳು ಉತ್ತಂಗಿ ಯವರು ವಚನ ಸಾಹಿತ್ಯದ ಬಗ್ಗೆ ವ್ಯಕ್ತಪಡಿಸಿದ ಚಿಂತನೆಗಳಾಗಿವೆ. 'ಕಾಯಕ' ಶಬ್ದದ ಅರ್ಥವನ್ನು ಉತ್ತಂಗಿಯವರು ಇಂದಿನ 'ಸತ್ಯಾಗ್ರಹ' ಶಬ್ದಕ್ಕೆ ಸಂವಾದಿಯಾಗಿ ಇರಿಸಿ ಕೊಂಡು ಮಾತನಾಡುತ್ತಿದ್ದರೆಂದು ಗುಂಜಾಳರು ಬರೆಯುತ್ತಾರೆ. ನಮಗೆ ತೋರುವ ಮಟ್ಟಿಗೆ ಈ ಎರಡೂ ಪರಿಕಲ್ಪನೆಗಳು ಬೇರೆ ಬೇರೆಯೇ. ತೆಕ್ಕೆಯ ಕಾಯಕ, ಮುಳ್ಳಾವಿ ಗೆಯ ಕಾಯಕ, ಶಸ್ತ್ರದ ಕಾಯಕ ಇತ್ಯಾದಿ ಕೆಲವು ಸ್ವಾರಸ್ಯವಾದ ಸಂಗತಿಗಳ ಪ್ರಸ್ತಾಪ ವಿದ್ದರೂ, (ಪು. 48–56) ಅವುಗಳ ಸಾಮಾಜಿಕ ಬಳಕೆ ಹಾಗೂ ಉದ್ದೇಶವನ್ನು ಕ್ರೈಸ್ತ ಧರ್ಮದವರಲ್ಲಿ ಪಾಪಿಗಳ ಉದ್ಧಾರಕ್ಕಾಗಿ ಪ್ರಾಣತೆತ್ತವರ ತ್ಯಾಗದೊಂದಿಗೆ ಹೋಲಿಸಲಾಗಿರುವುದು ದೂರಾನ್ವಯದಂತೆಯೆ ತೋರುತ್ತದೆ. ಉತ್ತಂಗಿಯವರು ಹಾವೇರಿಯಲ್ಲಿ 'ಶೂನ್ಯಸಂಪಾದನೆ'ಯ ಕಟ್ಟನ್ನು ಪತ್ತೆಮಾಡಿದ್ದು (ಪು. 58–63); ದೇವುಡು ನರಸಿಂಹಶಾಸ್ತ್ರಿಯವರು, ಕ್ರೈಸ್ತರಾದ ಉತ್ತಂಗಿಯವರಪಾದ ತೊಳೆದು ಸತ್ಕರಿಸಿದ ಸಂಗತಿ (ಪು. 77–83) ; ಸಿದ್ಧರಾಮ ಸಾಹಿತ್ಯವನ್ನು ಉತ್ತಂಗಿಯವರು ಸಂಪಾದಿಸಿ ಸಿದ್ಧಪಡಿಸಿದ ರೀತಿ (ಪು. 68–76) ; ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್ಯರು, ಸರ್ವಜ್ಞನ ವಚನಗಳನ್ನು ಪ್ರಕಟಿಸಿದ ಉತ್ತಂಗಿಯವ ರನ್ನು ಸಂಭಾವಿಸಿದ ಬಗೆ—ಈ ಎಲ್ಲವೂ ಕೆಲವು ಅಪರೂಪದ ಸಂಗತಿಗಳನ್ನು ಪರಿಚಯ ಮಾಡಿಕೊಡುತ್ತಾ, ಇವತ್ತು ನಾವು ಕಾಣಲಾಗದ ಒಂದು ಸಾಂಸ್ಕೃತಿಕ ಪರಿಸರದ ಬಗೆಗೆ ಹಳಹಳಿಕೆಯನ್ನು ಹುಟ್ಟಿಸುತ್ತವೆ. ಒಟ್ಟಾರೆಯಾಗಿ ಗುಂಜಾಳರು ಉತ್ತಂಗಿಯವರ ಬದುಕಿನ ಹಲವು ಪ್ರಸಂಗಗಳ ಮೂಲಕ, ಅವರ 'ಉತ್ತುಂಗ ವಿಚಾರ'ಗಳನ್ನು ಹಿಡಿದಿರಿಸಿದ್ದಾರೆ.

ಕನ್ನಡದ ಕುಲ ಪುರೋಹಿತರೆಂದು ಹೆಸರಾದ ದಿವಂಗತ ಆಲೂರು ವೆಂಕಟ ರಾಯರು ಕನ್ನಡಕ್ಕಾಗಿ ದುಡಿದ ಹಿರಿಯರಲ್ಲಿ ಮುಖ್ಯರಾದವರು. ಅವರು ಸಂಪಾದಕ ರಾಗಿ ನಡೆಸುತ್ತಿದ್ದ 'ಜಯ ಕರ್ನಾಟಕ'ದಲ್ಲಿ ಅವರೇ ಬರೆದು ಪ್ರಕಟಿಸಿದ ಲೇಖನ ಗಳನ್ನು ಕೂಡಿಸಿದರೆ, ಅದೇ ಒಂದು ದೊಡ್ಡ ಗ್ರಂಥವಾಗುತ್ತದೆ. ಆ ಬಹು ಸಂಖ್ಯೆಯ ಲೇಖನಗಳಲ್ಲಿ ಕೆಲವನ್ನು ಆಯ್ದು 'ಬಿಡಿನುಡಿ ಸಂಚಯ' ಎಂಬ ಹೆಸರಿನಲ್ಲಿ ವರದರಾಜ ಹುಯಿಲುಗೋಳರು ಇದೀಗ ಪ್ರಕಟಿಸಿದ್ದಾರೆ. ಒಂದು ನೂರಾ ಮುವತ್ತನಾಲ್ಕು ಪುಟಗಳ ಈ ಸಂಗ್ರಹದಲ್ಲಿ ಹದಿನಾಲ್ಕು ಲೇಖನಗಳಿವೆ. ಇವುಗಳಲ್ಲಿ ಮೊದಲ ಐದು ಲೇಖನಗಳು ವಿವಿಧ ವಿಷಯಗಳನ್ನು ಕುರಿತವು ; ಕಡೆಯ ಎರಡು ಲೇಖನಗಳು ಪತ್ರಿಕಾ ಪ್ರಪಂಚಕ್ಕೆ ಸಂಬಂಧಿಸಿದವು ; ಇನ್ನು ನಡುವಿನ ಏಳು ಲೇಖನಗಳು ವಿವಿಧ ವ್ಯಕ್ತಿಗಳನ್ನು ಕುರಿತವುಗಳು. ಕರ್ನಾಟಕದ ಕನಸು, ಕನ್ನಡಿಗರು ಮುಂದಿನ ಕರ್ನಾಟಕಕ್ಕೆ ಅರ್ಹರಾಗುವಂತೆ ನಡೆಯಿಸಿಕೊಳ್ಳಬೇಕಾದ ಸಿದ್ಧತೆ, ಕನ್ನಡಿಗ

ರಲ್ಲಿ ಮೂಡಬೇಕಾದ ವ್ಯಕ್ತಿತ್ವ ಇತ್ಯಾದಿಗಳನ್ನು ಕುರಿತು ಆಲೂರರು ಹೇಳಿದ ವಿಚಾರಗಳು ಇಲ್ಲಿವೆ. ಈಗ ಕರ್ನಾಟಕವೇನೋ ಉದಯವಾಯಿತು. ಆದರೆ, ಈ ಕರ್ನಾಟಕ ಮತ್ತು ಈ ಕನ್ನಡಿಗರು, ಆಲೂರರು ಕಂಡ ಕನಸಿಗೆ ಸಂಬಂಧಿಸಿದವರಲ್ಲ !

ವಚನ ಸಾಹಿತ್ಯಕ್ಕೆ ಸಂಬಂಧಿಸಿದಂತೆ, ಈ ವಿಭಾಗದಲ್ಲಿ ಪರಿಶೀಲನೆಗೆ ಬರುವ ನಾಲ್ಕು ಕಿರುಕೃತಿಗಳಿವೆ. 'ವಚನ ಚಳುವಳಿ', 'ವಚನಗಳಲ್ಲಿ ಸಮಾಜವಾದ', 'ಶಿವಶರಣರು ಬೋಧಿಸಿದ ಕಾಯಕ ತತ್ವ' ಮತ್ತು 'ಭಕ್ತಿ'—ಈ ನಾಲ್ಕು ಒಂದೇ ವಸ್ತುವನ್ನು ಕುರಿತವು.

ಪಿ. ವಿ. ನಾರಾಯಣ ಅವರ 'ವಚನ ಚಳುವಳಿ' ಎಂಬ ಅರುವತ್ತಾರು ಪುಟದ ಪುಸ್ತಕ, ಗಾತ್ರದಲ್ಲಿ ಕಿರಿಯದಾದರೂ, ಅದು ಪರಿಚಯ ಮಾಡಿಕೊಡುವ ಪ್ರಪಂಚ ಹಿರಿಯದು. ವಚನ ಚಳುವಳಿ ಹೇಗೆ ಹನ್ನೆರಡನೆಯ ಶತಮಾನದ ವಿವಿಧ ಸ್ತರಗಳನ್ನು ಒಳಗೊಂಡ ಒಂದು ಧಾರ್ಮಿಕ-ಸಾಮಾಜಿಕ ಆಂದೋಳನವಾಗಿತ್ತೆಂಬುದನ್ನು, ನಾರಾಯಣ ಅವರು ತರ್ಕಬದ್ಧವಾಗಿ ಮತ್ತು ಸರಳವಾಗಿ ಪ್ರತಿಪಾದಿಸಿದ್ದಾರೆ. ವಚನಕಾರರ ಜೀವನದೃಷ್ಟಿ, ಮಾನವತಾವಾದ, ಲೋಕಾನುಕಂಪ, ಅವರು ಎತ್ತಿ ಹಿಡಿದ ಮೌಲ್ಯಗಳು, ಸಾಮಾನ್ಯರನ್ನೂ ಅಸಾಮಾನ್ಯರನ್ನಾಗಿಸಿದ ಅಂತಸ್ಸತ್ವ, ಅವರ ಅಭಿವ್ಯಕ್ತಿಗೆ ಒದಗಿದ ವ್ಯಕ್ತಿ ವಿಶಿಷ್ಟತೆ ಇತ್ಯಾದಿಗಳನ್ನು ಸಂಕ್ಷೇಪವಾಗಿ ಪರಿಚಯ ಮಾಡಿಕೊಡುವ ಈ ಕೃತಿ, ಮೌಲಿಕವಾದದ್ದಾಗಿದೆ. "ವಚನ ಚಳುವಳಿಯು ನಮ್ಮ ದೇಶದ ಮೊತ್ತಮೊದಲಿನ ಜನತಾ ಚಳುವಳಿ" (ಪು. 2) "ಪ್ರಾಯಶಃ ಭಾರತದ ಮೊತ್ತ ಮೊದಲನೆ ದ್ರಾವಿಡ ಚಳುವಳಿ ಎಂದೂ ತೋರುತ್ತದೆ' (ಪು. 3) ಎಂಬ ಅಭಿಪ್ರಾಯಗಳು ಇಲ್ಲಿ ಸಾಧಾರವಾಗಿ ಪ್ರತಿಪಾದಿತವಾಗಿದೆ.

'ವಚನಗಳಲ್ಲಿ ಸಮಾಜವಾದ' ಪ್ರೊ. ದೇ. ಜವರೇಗೌಡರು ಬರೆದ ಅರವತ್ತೆರಡು ಪುಟಗಳ ಒಂದು ಕಿರುಕೃತಿ. 'ಸಮಾಜವಾದ' ಎಂಬುದು ಹೊಸ ಹೆಸರಾದರೂ, ಈ ಪರಿಕಲ್ಪನೆಯ ಬೇರುಗಳು ಭಾರತೀಯ ಸಾಹಿತ್ಯದಲ್ಲಿ, ಅದರಲ್ಲೂ ಶರಣಧರ್ಮದ ವಿಚಾರದಲ್ಲಿ ಇಳಿದಿವೆ ಎಂಬುದನ್ನು ಜವರೇಗೌಡರು ತೋರಿಸಿ ಕೊಟ್ಟಿದ್ದಾರೆ. ಶರಣ ಧರ್ಮದಲ್ಲಿ ಕಂಡುಬರುವ ಸಮಾಜವಾದೀ ನಿಲುವುಗಳು, ಭಾರತೀಯ ಮುದ್ರೆಯನ್ನು ತಳೆದಂಥವು—ಎಂಬುದನ್ನು ವಚನಕಾರರ ವಚನಗಳಲ್ಲಿ ಪ್ರತಿಪಾದಿತವಾಗಿರುವ ಹಲವಾರು ವಿಚಾರಗಳ ವಿಶ್ಲೇಷಣೆಯ ಮೂಲಕ ಸಾಧಿಸಿ ತೋರಿಸಿದ್ದಾರೆ. ಇದಕ್ಕೆ ಹಿನ್ನೆಲೆಯಾಗಿ ಮೊದಲ ಹದಿನಾರು ಪುಟಗಳಲ್ಲಿ ಸಮಾಜವಾದ ಒಂದು ಚಾರಿತ್ರಿಕ ಬೆಳವಣಿಗೆಯನ್ನು ಪರಿಚಯ ಮಾಡಿಕೊಟ್ಟು "ಪ್ರಪಂಚದ ಮೊಟ್ಟ ಮೊದಲ ಸಮಾಜವಾದಿಗಳೆಂದರೆ ಶರಣರು" (ಪು. 37) ಎಂಬ ತೀರ್ಮಾನಕ್ಕೆ ಲೇಖಕರು ತಲುಪಿದ್ದಾರೆ.

'ಶಿವಶರಣರು ಬೋಧಿಸಿದ ಕಾಯಕತತ್ವ' ಎಂಬ ನಲವತ್ತೆಂಟು ಪುಟಗಳ ಕಿರು ಕೃತಿಯಲ್ಲಿ ಬಿ. ಸಿ. ಜವಳಿಯವರು ಕಾಯಕವೆಂದರೇನು ? ಅದಕ್ಕೂ ಕರ್ಮ ಎಂಬ ಪದಸೂಚಿಸುವ ಅರ್ಥಕ್ಕೂ ಇರುವ ವ್ಯತ್ಯಾಸವೇನು ಅದು ಹೇಗೆ ಏಕಕಾಲಕ್ಕೆ ಆಧ್ಯಾತ್ಮಿಕವೂ ಹಾಗೂ ಸಾಮಾಜಿಕವೂ ಆದ ಒಂದು ಮೌಲ್ಯವಾಗಿತ್ತು, ಮತ್ತು ಶರಣರಲ್ಲಿ ಇದ್ದ ವಿವಿಧ ಕಾಯಕದವರು ಯಾರು, ಅವರು ಅದನ್ನು ತಮ್ಮ ಬದುಕಿನಲ್ಲಿ ಆಚರಿಸಿ ತೋರಿಸಿದರು—ಎಂಬಿತ್ಯಾದಿ ಸಂಗತಿಗಳನ್ನು ಜನಸಾಮಾನ್ಯರನ್ನು ಗಮನ ದಲ್ಲಿರಿಸಿಕೊಂಡು ಸರಳವಾಗಿ ನಿರೂಪಿಸಿದ್ದಾರೆ. ಹಾಗೆ ಮಾಡುವಾಗ ವಚನಗಳನ್ನೂ, ಶಿವಶರಣರನ್ನು ಕುರಿತ ಕಥಾ ಪ್ರಸಂಗಗಳನ್ನೂ ಹಿನ್ನೆಲೆಯನ್ನಾಗಿ ಮಾಡಿಕೊಂಡಿದ್ದಾರೆ.

ಪ್ರೊ. ಸಂಗಮೇಶ ಹಂಡಿಗಿಯವರ 'ಭಕ್ತಿ' ಎಂಬುದು ಭಕ್ತಿಯ ಲಕ್ಷಣವನ್ನು ಹಾಗೂ ಅದರ ಮಹತ್ವವನ್ನು, ವಿವಿಧ ಭಕ್ತರ ಅದರಲ್ಲೂ ಪುರಾತನ ಹಾಗೂ ನೂತನ ಶಿವಶರಣರ ಬದುಕಿನ ನಡವಳಿಕೆಗಳ ನಿದರ್ಶನಗಳ ಸಹಿತ, ಸಾಮಾನ್ಯ ಜನತೆಗಾಗಿ ಸರಳವಾಗಿ ನಿರೂಪಿಸುವ 86 ಪುಟಗಳ ಒಂದು ಕೃತಿ. ಅದರ ಆಶಯದ ಮಿತಿ ಯಿಂದಾಗಿಯೇ, ಅದು, ಈಗ ಹೇಳಿದ ಮೂರು ಕೃತಿಗಳಿಗಿಂತ ಭಿನ್ನವಾಗಿ, ತೀರಾ ಸಾಧಾರಣವಾದದ್ದಾಗಿದೆ.

ಅಂದಂದಿನ ಸಾಂಸ್ಕೃತಿಕ ಒತ್ತಡಗಳ ಕಾರಣಗಳಿಂದಾಗಿ ಸಾಹಿತ್ಯದಲ್ಲಿ ಹೆಸರಿಸ ಬಹುದಾದ ಚಳುವಳಿಗಳು ರೂಪುಗೊಳ್ಳುತ್ತವೆ. ಆಧುನಿಕ ಕನ್ನಡ ಸಾಹಿತ್ಯ ಪರಿಸರದಲ್ಲಿ ಇದೀಗ ನವ್ಯೇತರವೆಂದು ಗುರುತಿಸಬಹುದಾದ ಕೆಲವು ಚಳುವಳಿಗಳಲ್ಲಿ ಬಂಡಾಯ ಸಾಹಿತ್ಯ ಚಳುವಳಿ ಮುಖ್ಯವಾದದ್ದು. 1973ರ ನವಂಬರ್ ತಿಂಗಳ ಹತ್ತರಂದು ಬೆಂಗಳೂರಿನಲ್ಲಿ ರಾಜ್ಯಮಟ್ಟದ ಬಂಡಾಯ ಸಾಹಿತ್ಯ ಸಮ್ಮೇಳನವೊಂದು ನಡೆದು, ಈ ದಿಕ್ಕಿನಲ್ಲಿ ಯೋಚಿಸುತ್ತಿದ್ದ ಹಾಗೂ ಬರೆಯುತ್ತಿದ್ದ ಸಾಹಿತಿಗಳು, ತಮ್ಮ ಸಾಹಿತ್ಯದ ಹಿನ್ನೆಲೆ ಮತ್ತು ಧೋರಣೆಗಳನ್ನು ಗಟ್ಟಿಗೊಳಿಸಿಕೊಳ್ಳುವ ಸಂದರ್ಭ ಪ್ರಾಪ್ತವಾಯಿತು. ಈ ಸಾಹಿತಿಗಳಲ್ಲಿ ಒಬ್ಬರಾದ ಬರಗೂರು ರಾಮಚಂದ್ರಪ್ಪನವರು, ಬಂಡಾಯ ಸಾಹಿತ್ಯದ ದಿಕ್ಕು-ಧೋರಣೆಗಳನ್ನು ಸಮರ್ಥಿಸಿಕೊಳ್ಳುವ ಮತ್ತು ಅದನ್ನು ಪ್ರಕಟ ಪಡಿಸುವ ಉದ್ದೇಶದಿಂದ "ಬಂಡಾಯ ಸಾಹಿತ್ಯ ಚಳುವಳಿ" ಎಂಬ ಪುಸ್ತಿಕೆಯನ್ನು ಬರೆದಿದ್ದಾರೆ. ಕೇವಲ ನಲವತ್ತಾರು ಪುಟಗಳ ಈ ಕಿರು ಕೃತಿಯಲ್ಲಿ ಬಂಡಾಯ ಸಾಹಿತ್ಯದ ನಿಲುವುಗಳನ್ನು ರಾಮಚಂದ್ರಪ್ಪನವರು ಘೋಷಿಸಿಕೊಂಡಿದ್ದಾರೆ. "ಬಂಡಾಯ ಸಾಹಿತ್ಯ ಚಾರಿತ್ರಿಕ ಅನಿವಾರ್ಯತೆಯಿಂದ ಹುಟ್ಟಿದ ಸೃಜನಶೀಲ ಕ್ರಿಯೆ...ಸಾಹಿತಿಗೆ ಸಾಮಾಜಿಕ ರಾಜಕೀಯ ಪ್ರಜ್ಞೆ ಇರಬೇಕೆಂಬ ಆಶಯ ಇಲ್ಲಿ ಮುಖ್ಯವಾದದ್ದು. ಅಸ್ಪೃಶ್ಯತೆ, ಜಾತಿಪದ್ಧತಿ, ಲಿಂಗಭೇದ ಮತ್ತು ವರ್ಗಭೇದ ನೀತಿಯ ವಿರುದ್ಧ ಹೋರಾಟವನ್ನು ಕಟ್ಟುವುದು ನಮ್ಮ ಮುಖ್ಯ ಉದ್ದೇಶಗಳಲ್ಲಿ ಒಂದು" (ಪು. 8)—ಈ ನಿಲುವನ್ನು ಇದುವರೆಗಿನ ಕನ್ನಡ ಸಾಹಿತ್ಯ ಪರಂಪರೆಯಲ್ಲಿನ

ಬಂಡಾಯದ ಅಂಶಗಳನ್ನು ಗುರುತಿಸುತ್ತಾ ರಾಮಚಂದ್ರಪ್ಪನವರು ಪ್ರತಿಪಾದಿಸಿದ್ದಾರೆ. ಜತೆಗೆ "ಇದು ಎಡಪಂಥೀಯವೆನ್ನುವ ವಿಚಾರಧಾರೆಗೆ, ದಲಿತ ಕಾಳಜಿಗಳಿಗೆ ಬದ್ಧವಾದ ಸಾಹಿತ್ಯ" (ಪು. 34) ಎಂದು ಹೇಳುವುದರ ಮೂಲಕ, 'ಬಂಡಾಯ ಸಾಹಿತ್ಯ' ಮತ್ತು 'ದಲಿತ ಸಾಹಿತ್ಯ' ಎರಡು ಮೂಲತಹ ಬೇರೆ ಬೇರೆ ಅಲ್ಲವೆಂಬ ಅಂಶವನ್ನು ಸ್ಪಷ್ಟಪಡಿಸಿದ್ದಾರೆ. 'ಬಂಡಾಯ' ಅನ್ನುವುದು, 'ದಲಿತ' ಅನ್ನುವುದಕ್ಕಿಂತ ಹೇಗೆ ಹೆಚ್ಚಿನ ಅರ್ಥವ್ಯಾಪ್ತಿಯನ್ನು ಪಡೆದುಕೊಂಡಿದೆ ಎಂಬುದನ್ನು ವಿವರಿಸುತ್ತಾ, "ಪ್ರಗತಿಗಾಮಿ ದಲಿತ ಸಾಹಿತಿಗಳೆಲ್ಲ ಬಂಡಾಯ ಸಾಹಿತಿಗಳು, ಬಂಡಾಯ ಸಾಹಿತಿಗಳೆಲ್ಲ ದಲಿತ ಸಾಹಿತಿಗಳಲ್ಲ" (ಪು. 37) ಎನ್ನುತ್ತಾರೆ. ಬಂಡಾಯ ಸಾಹಿತಿಗಳು "ಇಡೀ ಜಾತಿಪದ್ಧತಿಯ ವಿರೋಧಿಗಳು, ಪುರೋಹಿತಶಾಹಿ, ಅಧಿಕಾರಷಾಹಿ, ಬಂಡವಾಳಷಾಹಿಯ ವಿರೋಧಿಗಳು" (ಪು. 37) ಒಟ್ಟಿನಲ್ಲಿ ಬಂಡಾಯ ಸಾಹಿತ್ಯದ ತಾತ್ವಿಕ ನಿಲುವುಗಳನ್ನು, ಸಕಾಲಿಕವಾಗಿ ಪರಿಚಯಮಾಡಿಕೊಡುವ ಈ ಕೃತಿಯನ್ನು ಬಂಡಾಯ ಸಾಹಿತ್ಯದ ಕೈಪಿಡಿ ಎಂದು ಕರೆಯಲು ಅಡ್ಡಿಯೇನಿಲ್ಲ.

'ಏನಾದರೂ ಮಾಡುತಿರು ತಮ್ಮ' ಎಂದು ಅಡಿಗರು ಬರೆದ ಪದ್ಯದ ಪಂಕ್ತಿಯನ್ನು ನೆನಪಿಗೆ ತರುವಂತೆ, ಹರಿಹರಪ್ರಿಯರು ವರ್ಷಕ್ಕೆ ಒಂದು ಏನಾದರೂ ಮಾಡುತ್ತಲೇ ಇರುತ್ತಾರೆ. ಈ ವರ್ಷ ಅವರು ಪ್ರಕಟಿಸಿರುವುದು "ಸಾಹಿತ್ಯ ರಂಗದಲ್ಲಿ ರಾಜಕೀಯ" ಎಂಬ ಅರುವತ್ತೆಂಟು ಪುಟಗಳ ಪುಸ್ತಕ. ಇಲ್ಲಿರುವ ಹದಿನಾಲ್ಕು ಲೇಖನಗಳನ್ನು 'ಚಿಂತನಶೀಲ ಲೇಖನ'ಗಳೆಂದು ಹರಿಹರ ಪ್ರಿಯರು ಕರೆದುಕೊಂಡಿದ್ದಾರೆ. ಕೆಲವು ಘಟನೆಗಳು, ಕೆಲವು ವ್ಯಕ್ತಿ ಸಂಗತಿಗಳು ಮತ್ತೆ ಕೆಲವು ಪ್ರತಿಕ್ರಿಯೆಗಳು ಈ ಲೇಖನಗಳ ವಸ್ತು. ಈ ದೇಶದ, ಅಂದರೆ ಕರ್ನಾಟಕದ ಸಾಹಿತ್ಯ-ಸಾಂಸ್ಕೃತಿಕ ರಂಗಗಳ ತುಂಬ ಬರೀ ಯೂನಿವರ್ಸಿಟಿ ಮಂದಿಯೇ ತುಂಬಿಕೊಂಡಿದ್ದಾರೆಂಬುದು ಹರಿಹರ ಪ್ರಿಯರ ಆಕ್ಷೇಪಣೆ ; ಇವರೆಲ್ಲಾ ರಾಜಕೀಯ ಮಾಡುತ್ತ ಈ ಸಾಂಸ್ಕೃತಿಕ ಕ್ಷೇತ್ರಗಳನ್ನು ಕಲುಷಿತಗೊಳಿಸುತ್ತಿದ್ದಾರೆ ಎಂಬುದು ಅವರ ತೀರ್ಮಾನ. ಹರಿಹರ ಪ್ರಿಯರ ಈ ಅಭಿಪ್ರಾಯಗಳನ್ನು ಕುರಿತು ಚರ್ಚೆ ಮಾಡುವುದು ನಿಷ್ಪ್ರಯೋಜಕ. ಒಂದು ವೇಳೆ ಹರಿಹರಪ್ರಿಯರಂಥವರೇ ಸಾಹಿತ್ಯ ರಂಗದಲ್ಲಿ ಮುಖ್ಯವಾದ 'ಸ್ಥಾನ'ಗಳಲ್ಲಿದ್ದಿದ್ದರೆ ಅವರು ಇದೆ ಎಂದು ಭಾವಿಸಲಾದ ಪರಿಸ್ಥಿತಿ ಇರುತ್ತಿರಲಿಲ್ಲ ಎಂಬುದು ಅವರ ವಾದದಿಂದ ನಿಷ್ಪನ್ನವಾಗುವ ಇನ್ನೊಂದು 'ತೀರ್ಮಾನ'ವಾಗುತ್ತದೆ. ಹಾಗೆಂದರೆ ಹರಿಹರ ಪ್ರಿಯರು ಹೇಳುವಂಥ 'ರಾಜಕೀಯ' ನಮ್ಮ ಸಾಹಿತ್ಯ ಪರಿಸರದಲ್ಲಿ ಇಲ್ಲವೇ ಇಲ್ಲವೆಂದು ಈ ಮಾತಿನ ಅರ್ಥವಲ್ಲ ; ಆದರೆ ಪರಿಸ್ಥಿತಿ ಹಾಗಾಗಿರುವುದಕ್ಕೆ ಈ ಕ್ಷೇತ್ರದಲ್ಲಿ ಬರೀ ಯೂನಿವರ್ಸಿಟಿ ಮಂದಿ ಇರುವುದೊಂದೇ ಕಾರಣವೆಂದು ಅವರು ಮಾಡುವ ವಾದ ಸರಿಯಲ್ಲ. ಹರಿಹರ ಪ್ರಿಯರಂಥವರೂ, ಸಮಯಾನುಸಾರ ಅವರಿವರನ್ನು ಹೊಗಳುವ ಹಾಗೂ ತೆಗಳುವ 'ರಾಜಕೀಯ'ದಿಂದ ಹಿಂದೆ ಸರಿಯುವುದು ಅಗತ್ಯವಾಗಿದೆ, ಈ ಪರಿಸರ ನಿರ್ಮಲವಾಗುವುದಕ್ಕೆ.

'ಮಹಾಕವಿಯೊಡನೆ ಮಾತುಕತೆ', ಸಿ.ಪಿ.ಕೆ. ಯವರ ಒಂದು ಅಪರೂಪದ ಕೃತಿ. ಕೇವಲ ಮೂವತ್ನಾರು ಪುಟಗಳಲ್ಲೇ ಇದು ಮುಗಿದು ಹೋಯಿತಲ್ಲ ಎಂಬ ಅತೃಪ್ತಿಯನ್ನು ಹುಟ್ಟಿಸುತ್ತದೆ ಓದಿದ ಮೇಲೆ. ಈ ಕೃತಿಯಲ್ಲಿ ಸಿ.ಪಿ.ಕೆ. ಅವರು, ಕವಿ ಕುವೆಂಪು ಅವರೊಂದಿಗೆ, ಕಳೆದ ಹದಿನೇಳು ವರ್ಷಗಳಲ್ಲಿ ಆಗಾಗ ಪ್ರಾಸಂಗಿಕವಾಗಿ ನಡೆಯಿಸಿದ ಸಂಭಾಷಣೆಯ ತುಣುಕುಗಳು. ಅವರು ಅಂದಂದು ಮಾತಾಡಿದ ವಿಷಯಗಳ ಹಿನ್ನೆಲೆಯ ಸೂಚನೆಯೊಡನೆ ಇಲ್ಲಿ ದಾಖಲಾಗಿವೆ. ಪುಟಪುಟದಲ್ಲೂ ಪುಟಿಯುತ್ತಿರುವ ಕುವೆಂಪು ಅವರ ಮಾತು-ಕತೆಗಳು, ಈ ಕೃತಿಯ ವೈಶಿಷ್ಟ್ಯ. ವಿಷಯಗಳು ಹಲವಾರು; ಅವುಗಳ ಮೂಲಕ ಹೊಮ್ಮಿರುವ ವಿಚಾರಗಳು ನೂರಾರು. ನಿದರ್ಶನ ಕೊಡುವುದು ಅನಗತ್ಯ; ಓದಿ ನೋಡಿದಾಗಲೇ ತಿಳಿಯುತ್ತದೆ ಅದರ ಸ್ವಾರಸ್ಯ. ಈ ಬಗೆಯ ಕೆಲಸ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಆಗಬಹುದಾಗಿತ್ತು-ಕುವೆಂಪು ಅವರನ್ನು ಸಂದರ್ಶಿಸಿದವರೆಲ್ಲ ತಮ್ಮ ಅಂದಂದಿನ ಮಾತುಕತೆಗಳನ್ನು ಬರೆದಿರಿಸಿದ್ದರೆ. ಸಿ.ಪಿ.ಕೆ.ಯವರಾದರೂ, ಅದು ಹೇಗೋ ಮಾಡಿ ಇಷ್ಟನ್ನಾದರೂ ಮಾಡುವುದರ ಮೂಲಕ, ಒಂದು ವಿಶಿಷ್ಟವಾದ ಕಿರುಕೃತಿಯನ್ನು ಕೊಟ್ಟಿದ್ದಾರಲ್ಲ ಎಂದು ಸಮಾಧಾನ ಮಾಡಿಕೊಳ್ಳಬೇಕಾಗಿದೆ.

'ತೋರ್ ಬೆರಳು' ಹೊ.ವೆ. ಶೇಷಾದ್ರಿಯವರ ಹದಿನಾಲ್ಕು ಲೇಖನಗಳ ಒಂದು ಸಂಕಲನ. ಉತ್ಥಾನ ಎಂಬ ಪತ್ರಿಕೆಗೆ ಅವರು ಅನುಕ್ರಮವಾಗಿ 1971ರ ಫೆಬ್ರುವರಿಯಿಂದ, 1972ರ ಫೆಬ್ರುವರಿಯವರೆಗೆ ಬರೆದ ಲೇಖನಗಳನ್ನು ತೋರ್ ಬೆರಳು ಎಂಬ ಹೆಸರಿನ ಇನ್ನೂರು ಪುಟಗಳ ಸಂಗ್ರಹವಾಗಿ ಪ್ರಕಟಿಸಿದ್ದಾರೆ. ಮೇಲೆ ಕಾಣಿಸಿದ ಕಾಲಾವಧಿಯೊಳಗಿನ ರಾಷ್ಟ್ರೀಯ ವಿದ್ಯಮಾನಗಳನ್ನು ಕುರಿತ ಚಿಂತನೆಗಳೆ ಈ ಲೇಖನಗಳ ವಸ್ತು. ಇದು ರಾಷ್ಟ್ರೋತ್ಥಾನದ ಪ್ರಕಟಣೆ ಎಂದ ಮೇಲೆ, ಇದರಲ್ಲಿನ ಲೇಖನಗಳ ವಿಚಾರಧಾರೆಯ ಸ್ವರೂಪವನ್ನು ಕುರಿತು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಹಿಂದೂ ಧರ್ಮದ ಉದಾತ್ತ ತತ್ವಗಳನ್ನು ಕುರಿತು, ಇತಿಹಾಸದ ಘಟನೆಗಳನ್ನು ಕುರಿತು, ಪುರಾಣೇತಿಹಾಸಗಳಲ್ಲಿನ ಕತೆಗಳನ್ನು ಕುರಿತು,—ನಡೆದಿರುವ ವ್ಯಾಖ್ಯಾನವೇ ಇದರ ಹಾಸು-ಹೊಕ್ಕು. ನಿಜವಾದ ಸಾತ್ವಿಕತೆ ಎಂದರೇನು, ನಿಜವಾದ ವ್ಯಕ್ತಿತ್ವವೆಂದರೆ ಯಾವುದು, ಎಂಬ ಬಗ್ಗೆ ಮತ್ತು ನಮ್ಮ ಜನದ ದ್ವಂದ್ವ ವ್ಯಕ್ತಿತ್ವದಿಂದ ಆಗುವ ಅಪಾಯಗಳೇನು ಎನ್ನುವ ಬಗೆಗೆ ಮೌಲಿಕವಾದ ಚಿಂತನೆಗಳೂ ಇವೆ. ಆದರೆ ಈ ಲೇಖಕರ ಪ್ರಕಾರ ಸಮಾಜವಾದೀ ನಿಲುವುಗಳಿಂದ ದೀನದಲಿತರ ಉದ್ಧಾರ ಆಗುವುದಿಲ್ಲ; ಯಾಕೆಂದರೆ ಅವುಗಳ ಬುಡದಲ್ಲೇ ವೈಚಾರಿಕ ದೋಷವಿದೆ. ಆ ವಾದಗಳು ಕೇವಲ ಭೌತಿಕ ವಾದಗಳು. ಆದಕಾರಣ ಮನುಷ್ಯನನ್ನು ಚೈತನ್ಯಜೀವಿ ಎಂದು ಪರಿಗಣಿಸುವ ಹಿಂದೂ ಧರ್ಮವೇ ಶ್ರೇಷ್ಠವಾದದ್ದು. ಆತ್ಮ ತತ್ವವನ್ನು ಮೂಲ ಮಾನವಾಗಿರಿಸಿಕೊಂಡು, ವ್ಯಕ್ತಿ ವ್ಯಕ್ತಿಗಳಲ್ಲಿ ಪ್ರೀತಿ ವಿಶ್ವಾಸಗಳನ್ನು ಬಿತ್ತುವ ಬೆಳೆಯುವ ಏಕ ಮಾತ್ರ ದರ್ಶನ" ಹಿಂದುತ್ವ...ಬಡತನವನ್ನು ನೀಗಿಸುವ ಶಕ್ತಿ ಹಿಂದುತ್ವದಲ್ಲಿದೆ—ಇದು ಮುಖ್ಯವಾಗಿ ಈ ಕೃತಿಯ ಅಥವಾ ಲೇಖಕರ ತಾತ್ವಿಕ

ನಿಲುವು. ಈ ಬಗೆಯ ನಿಲುವುಗಳು, ಕೇವಲ ಉನ್ನತವಾದ ವೇದಿಕೆಯ ಮೇಲಿನ ಉಜ್ವಲ ಉಪನ್ಯಾಸಗಳಿಗೆ ವಸ್ತುವಾದವೇ ವಿನಾ, ಸಮಾಜದ ನಿಜವಾದ ಪರಿವರ್ತನೆಗೆ ಸಹಾಯಕವಾಗಲಾರವು. ಈ ಕಾರಣದಿಂದಲೆ ಇವುಗಳಲ್ಲಿ ಎಷ್ಟೋ ಕೇವಲ ಹುಸಿ ಘೋಷಣೆಗಳಾಗಿ, ನಿಷ್ಪ್ರಯೋಜಕವಾಗುತ್ತವೆ.

'ಎಚ್ಚೆಸ್ಕೆಯವರ ಆಯ್ದ ಬರೆಹಗಳು' ಐನೂರು ಪುಟಗಳ ಒಂದು ಬೃಹತ್ ಕೃತಿಯಾಗಿದೆ. ಎಚ್ಚೆಸ್ಕೆಯವರಿಗೆ ಅರುವತ್ತು ವರ್ಷ ತುಂಬಿದ ಹೊತ್ತಿನಲ್ಲಿ. ಅವರ ಶಿಷ್ಯರೂ, ಅಭಿಮಾನಿಗಳೂ ಸೇರಿ, ಅರ್ಪಿಸಿದ ಗ್ರಂಥ ಇದು. ಈ ಕೃತಿಯಲ್ಲಿ, ಬಹು ಸಂಖ್ಯಾತವಾಗಿ ಆಗಲೇ ನಾಡಿನ ವಿವಿಧ ಪತ್ರಿಕೆಗಳಲ್ಲಿ ಅಂಕಣ ಲೇಖನಗಳಾಗಿ ಪ್ರಕಟವಾದ ಎಚ್ಚೆಸ್ಕೆಯವರ ಬರೆಹಗಳಿಂದ, ಒಂದು ನೂರಾ ಎಂಟು ಲೇಖನಗಳನ್ನು ಆಯ್ದು ಕೂಡಿಸಲಾಗಿದೆ. ಈ 108 ಲೇಖನಗಳನ್ನು ನಾಲ್ಕು ಉಪ ವಿಭಾಗಗಳಲ್ಲಿ ಅಳವಡಿಸಲಾಗಿದೆ. 'ವ್ಯಕ್ತಿ-ಚಿತ್ರಗಳು-ಸಂದರ್ಶನಗಳು' ; ಪ್ರಬಂಧ-ಚಿಂತನೆ ; ಸಾಹಿತ್ಯ-ಕಲೆ ; ಮಾನವಿಕ-ಈ ನಾಲ್ಕು ವಿಭಾಗದೊಳಗಿನ ಲೇಖನಗಳಲ್ಲಿ ಎಚ್ಚೆಸ್ಕೆಯವರ ಬಹುಶ್ರುತಿ, ಆಳವಾದ ಜೀವನಾನುಭವ, ಅವರ ಆಸಕ್ತಿಯ ಹರಹು, ಅವರ ಅಭಿವ್ಯಕ್ತಿಯೊಳಗಿನ ಲವಲವಿಕೆ ಮತ್ತು ಕಲಾತ್ಮಕ ಇವುಗಳನ್ನು ಗುರುತಿಸಬಹುದಾಗಿದೆ

'ಆಳ್ವಾರರುಗಳ ಕೃತಿ ಪರಿಚಯ', ಎನ್. ಎಸ್. ಅನಂತರಂಗಾಚಾರ್ಯರು ಬರೆದ 208 ಪುಟಗಳ ಒಂದು ಪುಸ್ತಕ. ಈ ಪುಸ್ತಕದ ಮೊದಲ ಭಾಗ, ಆಳ್ವಾರರುಗಳ ಕಾಲ-ದೇಶ-ತತ್ವದೃಷ್ಟಿ, ಅವರ ಪ್ರಬಂಧಗಳು ಮತ್ತು ಶ್ರೀ ವೈಷ್ಣವ ಧರ್ಮ ಇತ್ಯಾದಿಗಳನ್ನು ಪರಿಚಯ ಮಾಡಿದರೆ, ಅದರ ಎರಡನೆಯ ಭಾಗ ಹನ್ನೆರಡು ಮಂದಿ ಆಳ್ವಾರರುಗಳ ಬದುಕಿನ ಸಂಕ್ಷಿಪ್ತ ಚಿತ್ರವನ್ನೂ ಮತ್ತು ಅವರ ಪ್ರಬಂಧಗಳ ಸಾರಾಂಶವನ್ನೂ ಕೊಡುತ್ತದೆ. ಈ ಕೃತಿ, ಅದರ ಶೀರ್ಷಿಕೆಗೆ ಅನುಸಾರವಾಗಿ ಕೇವಲ ಪರಿಚಯದ ಹಂತದಲ್ಲೇ ನಿಲ್ಲುತ್ತದೆ. ಎರಡನೆ ಭಾಗದ, ವೈಷ್ಣವ ಪ್ರಬಂಧಗಳನ್ನು ಕುರಿತ ನಿರೂಪಣೆಯೂ, ಕೇವಲ ಅವರವ ಪ್ರಬಂಧಗಳಲ್ಲಿ ಕೆಲವದರ ಸಾರಾಂಶವನ್ನು ಕೊಡುವುದರಲ್ಲಿ ಮುಕ್ತಾಯವಾಗುತ್ತದೆ. ಅನಂತರಂಗಾಚಾರ್ಯರಂಥ ವಿದ್ವಾಂಸರು, ಆಳ್ವಾರರುಗಳ ಪ್ರಬಂಧಗಳನ್ನು ಕುರಿತು, ವಿಸ್ತೃತವಾದ ತೌಲನಿಕ ವಿವೇಚನೆಯನ್ನು ಮಾಡಬಹುದಾಗಿತ್ತು ; ಆದರೆ ಅವರು ಹಾಗೆ ಮಾಡಲಿಲ್ಲವಲ್ಲ ಎಂದು ನಿರಾಸೆಯಾಗುತ್ತದೆ.

ಸತ್ಯಕಾಮ ಅವರು ಬರೆದ 'ಲಾವಣ್ಯ', ಹೆಣ್ಣಿನ ಚೆಲುವನ್ನು ಕುರಿತು, ಮುಖ್ಯವಾಗಿ ಸಂಸ್ಕೃತ ಕವಿಗಳು ಮಾಡಿರುವ ವರ್ಣನೆಯನ್ನು ಆಧರಿಸಿ, ರಚಿತವಾದ, ಸ್ವಾನುಭವ ಜನ್ಯ ಮತ್ತಿತರ ಪ್ರಣಯಾನುಭವಗಳನ್ನು ಕುರಿತ ತುಣುಕುಗಳ ಸಂಗ್ರಹ. ಹೆಣ್ಣಿನ ಕೇಶಪಾಶ, ಕಣ್ಣು, ತುಟಿ,-ಕೆನ್ನೆ, ಇತ್ಯಾದಿಗಳನ್ನು ಕೇಂದ್ರವಾಗಿ ಉಳ್ಳ ಸ್ವಾರಸ್ಯವಾದ ವ್ಯಾಖ್ಯಾನಗಳು, ಪ್ರಸಂಗಗಳು ಇಲ್ಲಿ ಅತ್ಯಂತ ಕುತೂಹಲಕರವಾಗಿ ದಾಖಲಾಗಿವೆ. ಯಾವುದೇ ಪುಟ ತೆರೆದು ಓದಿದರೂ ಶೃಂಗಾರ ತಾನೇ ತಾನಾಗಿದೆ ; ಮನಮೋಹಕವಾಗಿದೆ. ಈ ಸಂಗತಿಯನ್ನು ಹೀಗೆ ಬರೆಯಬಹುದೆಂಬ ಕಲ್ಪನೆಯೇ ಸೊಗಸಾಗಿದೆ.

ರಾಮಾಯಣದಲ್ಲಾಗಲೀ, ಮಹಾಭಾರತದಲ್ಲಾಗಲೀ ಅದರ ಮುಖ್ಯ ಕತೆ ಅದರ ಸ್ವಾಭಾವಿಕವಾದ ನಿಲುಗಡೆಯನ್ನು ದಾಟಿ ಮುಂದುವರಿದಿದೆ. ರಾವಣ ಸಂಹಾರದ ನಂತರ ರಾಮ-ಸೀತೆಯರು ಪಟ್ಟಾಭಿಷಿಕ್ತರಾಗುವುದು, ಕುರುಕ್ಷೇತ್ರ ಮಹಾರಣರಂಗದ ನಂತರ ಧರ್ಮರಾಯನು ಪಟ್ಟಾಭಿಷಿಕ್ತನಾಗುವುದು, ಈ ಕಥೆಗಳಿಗೆ ಸಹಜವಾದ ನಿಲುಗಡೆಯಾಗಬೇಕಾಗಿತ್ತು. ಆದರೆ, ಈ ಎರಡರಲ್ಲೂ ಕತೆ ಮುಂದು ವರಿದಿದೆ. ರಾಮಾಯಣದಲ್ಲಿ ಇದನ್ನು ಉತ್ತರಕಾಂಡವೆಂದೂ, ಅದನ್ನು ಉತ್ತರ ರಾಮಾಯಣವೆಂದೂ ಕರೆಯುತ್ತಾರೆ. ರಾಮಾಯಣವನ್ನು ಪಾರಾಯಣ ಮಾಡುವ ಯಾರೂ. ಉತ್ತರ ಕಾಂಡವನ್ನು ಪಾರಾಯಣ ಮಾಡುವುದಿಲ್ಲ. ಆದರೆ ಆ ಭಾಗದಲ್ಲಿ ಮುಖ್ಯವಾಗಿ ಬರುವ ಸೀತಾ ಪರಿತ್ಯಾಗದ ಹಾಗೂ ಲವಕುಶರಿಗೂ ಮತ್ತು ರಾಮನಿಗೂ ನಡೆದ ಕಾಳಗದ ಬಗ್ಗೆ, ಕವಿಗಳಿಗೂ, ಓದುಗರಿಗೂ ಆಸಕ್ತಿ ಕಡಮೆಯಾಗಿಲ್ಲ, ಕನ್ನಡದ ಹಿರಿಯ ಲೇಖಕರಾದ ಮಾಸ್ತಿಯವರು, ಈ ಉತ್ತರ ಕಾಂಡವನ್ನು, ಕುರಿತು ಅದರ ವಸ್ತು-ಶೈಲಿ-ಉದ್ದೇಶಗಳನ್ನು ಕುರಿತು, 'ಉತ್ತರ ಕಾಂಡ ವಿಚಾರ' ಎಂಬ 104 ಪುಟದ ಸಮೀಕ್ಷೆಯನ್ನು ಬರೆದಿದ್ದಾರೆ. ಇದರ ಉದ್ದೇಶ, "ವಾಲ್ಮೀಕಿ ರಾಮಾಯಣದ ಒಂದು ಭಾಗ ಎಂಬಂತೆ ಪ್ರಚಾರದಲ್ಲಿರುವ ಉತ್ತರ ಕಾಂಡ ಎನ್ನುವ ಕೃತಿ ವಾಲ್ಮೀಕಿಯ ಕೃತಿ ಅಲ್ಲ ಎನ್ನುವುದನ್ನು ತೋರಿಸುವುದು" (ಪು. 1).

ಈ ಒಂದು ತೀರ್ಮಾನಕ್ಕೆ ಬರಲು ಮಾಸ್ತಿಯವರು ಮುಖ್ಯವಾಗಿ ಪರಿಶೀಲಿಸು ವುದು ಸೀತಾಪರಿತ್ಯಾಗದ ಮತ್ತು ಶಂಬೂಕ ವಧೆಯ ಪ್ರಸಂಗಗಳನ್ನು ಸೀತಾಪರಿ ತ್ಯಾಗದ ಸಂದರ್ಭವಂತೂ ಅನೇಕ ಅಸಾಂಗತ್ಯಗಳಿಂದ ಅನ್ಯವಸ್ಥೆಗಳಿಂದ ಹೇಗೆ ಅತಾರ್ಕಿಕವೂ ಶಿಥಿಲವೂ ಆಗಿದೆ ಎಂಬುದನ್ನು ಮಾಸ್ತಿಯವರು ತೋರಿಸಿದ್ದಾರೆ. ಸೀತಾಪರಿತ್ಯಾಗದ ಹಾಗೂ ಶಂಬೂಕ ವಧೆಯ ಸಂದರ್ಭಗಳು "ಎರಡೂ ಅತಿರೇಕದ ಪ್ರಸಂಗಗಳು. ಅವಿವೇಕದ ಪ್ರಸಂಗಗಳು" (ಪು. 48) ; ಇವು "ವಾಲ್ಮೀಕಿ ಕಲ್ಪಿಸಿದ ರಾಮನ ಉದಾತ್ತ ಮೂರ್ತಿಯನ್ನು ವಿಕಾರಗೊಳಿಸಿವೆ" (ಪು. 97) ಎನ್ನುತ್ತಾರೆ. ಉತ್ತರ ಕಾಂಡದ ಬರೆಹವನ್ನು ವಸ್ತು ಹಾಗೂ ಶೈಲಿಯ ದೃಷ್ಟಿಯಿಂದ ಪರಿಶೀಲಿ ಸಿದರೂ, "ಅವು ಹಿಂದಿನ ಕಾಂಡಗಳ ಮಟ್ಟವನ್ನು ಮುಟ್ಟುವುದಿಲ್ಲ" (ಪು. 87)— ಎನ್ನುವ ಮಾಸ್ತಿಯವರ ಈ ವಿಮರ್ಶೆ, ಅವರು ಹಿಂದೆಯೇ ಬರೆದ 'ಆದಿಕವಿ ವಾಲ್ಮೀಕಿ' ಎಂಬ ವಿಮರ್ಶಕ ಕೃತಿಯ ಮುಂದುವರಿಕೆಯಾಗಿದೆ.

ಇತಿಹಾಸ ಪುರಾಣಗಳು, ಎ. ಡಿ. ಪುಸಲ್ಕರ್ ಅವರು ತಮ್ಮ Epics and Puranas of India ಎಂಬ ಕೃತಿಗೆ ಬರೆದ ಪೀಠಿಕೆಯ ಕನ್ನಡ ಅನುವಾದವಾಗಿದೆ. ಅನುವಾದಕರು ಸಿ. ಪಿ. ಕೆ. ಅವರು. ಭಾರತೀಯ ಮಹಾಕಾವ್ಯ ಹಾಗೂ ಪುರಾಣಗಳನ್ನು ಕುರಿತು, ವಿವಿಧ ವಿದ್ವಾಂಸರ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಪುಸಲ್ಕರ್ ಅವರು ಬರೆದ ಈ ಪೀಠಿಕಾ ಪ್ರಕರಣ, ಸಾಹಿತ್ಯಾಧ್ಯಯನದ, ಅದರಲ್ಲೂ ಇತಿಹಾಸ-ಪುರಾಣಗಳನ್ನು ಅಧ್ಯಯನ ಮಾಡುವ ಸಾಹಿತ್ಯದ ವಿದ್ಯಾರ್ಥಿಗಳಿಗೆ ಮೌಲಿಕವಾದ ಸಾಮಗ್ರಿಯನ್ನು ಒದಗಿಸುತ್ತದೆ. ಅನುವಾದದಲ್ಲಿ ಸಿದ್ಧ ಹಸ್ತರಾದ ಸಿ.ಪಿ.ಕೆ.ಯರು ಕನ್ನಡಕ್ಕೆ ಕೊಟ್ಟ ಈ ಕೊಡುಗೆ ಅಭಿನಂದನೀಯವಾದದ್ದು.

ನೆಲ್ಸನ್ ಮಾಂಡೆಲಾ ದಕ್ಷಿಣ ಆಫ್ರಿಕಾದ ಹೋರಾಟಗಾರ, ಬಹು ಸಂಖ್ಯಾತ ಕರಿಯರ ಮೇಲೆ, ಬಿಳಿಯರು ಧನಬಲ ಹಾಗೂ ಸೈನ್ಯಬಲದ ನೆರವಿನಿಂದ ನಡೆಸು ತ್ತಿರುವ ಅಮಾನವೀಯ ದಬ್ಬಾಳಿಕೆಯ ವಿರುದ್ಧ ಹೋರಾಡಿದ ಮಾಂಡೆಲಾ ಕಳೆದ ಹದಿನೆಂಟು ವರ್ಷಗಳಿಂದ ಸರ್ಕಾರದ ಜೈಲಿನಲ್ಲಿ ಬಂದಿಯಾಗಿದ್ದಾನೆ. ಕಪ್ಪು ಜನಾಂಗದ ಜೀವಂತ ಜ್ವಾಲೆಯಾದ ಮಾಂಡೆಲಾಗೆ, ಭಾರತ ಸರ್ಕಾರ ನೆಹರೂ ಶಾಂತಿ ಪಾರಿ ತೋಷಕವನ್ನು ಕೊಟ್ಟು ಗೌರವಿಸಿದೆ. ಆದರೆ ಅದನ್ನು ಪಡೆಯಲೂ ಆತ ಭಾರತಕ್ಕೆ ಬಾರದಂತೆ ಬಿಳಿಯರ ಸರ್ಕಾರ ದಿಗ್ಬಂಧನದಲ್ಲಿ ಇರಿಸಿದೆ. ಕರಿಯರ ಜೀವನವನ್ನು ಅಪಮೌಲ್ಯಗೊಳಿಸಿದ ದಕ್ಷಿಣ ಆಫ್ರಿಕದ ಬಿಳಿಯರ ವಿರುದ್ಧ ನಿರಂತರ ಹೋರಾಟ ದಲ್ಲಿರುವ ಈ ವ್ಯಕ್ತಿಯನ್ನು ಕುರಿತು, ಅವನ ಹೋರಾಟದ ಹಿನ್ನೆಲೆಯನ್ನು ಕುರಿತು' ಆತ ಪ್ರತಿನಿಧಿಸುವ ಮೌಲ್ಯಗಳನ್ನು ಕುರಿತು, ಬಂಡಾಯ ಸಾಹಿತ್ಯ ಸಂಘಟನೆಯ ಹುಬ್ಬಳ್ಳಿಯ ಘಟಕ ಏರ್ಪಡಿಸಿದ ವಿಚಾರ ಸಂಕಿರಣದಲ್ಲಿ ಮಂಡಿತವಾದ ಐದು ಲೇಖನಗಳನ್ನು, ಮತ್ತು ಐದು ಕವಿತೆಗಳನ್ನು, ಸಂಪಾದಿಸಿ 'ನೆಲ್ಸನ್ ಮಾಂಡೆಲಾ' ಎಂಬ ಹೆಸರಿನ ಐವತ್ತನಾಲ್ಕು ಪುಟಗಳ ಕೃತಿಯೊಂದನ್ನು ಚಂದ್ರಶೇಖರ ಪಾಟೀಲರು ಪ್ರಕಟಿಸಿರುವುದು ಸ್ವಾಗತಾರ್ಹವಾದ ಸಂಗತಿಯಾಗಿದೆ.

ಮೈಸೂರು ವಿಶ್ವವಿದ್ಯಾನಿಲಯವು ಈ ವರ್ಷ ಕನ್ನಡ ಗ್ರಂಥಸೂಚಿ (1974–1976) ಮತ್ತು ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಒಂಭತ್ತನೆಯ ಸಂಪುಟ, ಸ-ಹ) ಎಂಬ ಎರಡು ಕೃತಿಗಳನ್ನು ಪ್ರಕಟಿಸಿದೆ. ಈ ಕೆಲಸಕ್ಕಾಗಿ ಈ ಕೃತಿಗಳ ಸಂಪಾದಕ, ಮಂಡಲಿಯನ್ನು ಅಭಿನಂದಿಸುತ್ತೇನೆ. ಈ ಸೂಚಿಗಳಲ್ಲಿ ಕಂಡು ಬಂದಿರುವ ಕೆಲವು ನ್ಯೂನತೆಗಳನ್ನು ಈ ಕೆಳಗೆ ಕೊಡಲಾಗಿದೆ. ಇಲ್ಲಿರುವ ನ್ಯೂನತೆಗಳನ್ನು ತೋರಿಸಿ ತಿದ್ದುಪಡಿಗಳನ್ನು ಸೂಚಿಸಿದವರು, ಬೆಂಗಳೂರು ವಿಶ್ವವಿದ್ಯಾಲಯದ, ಕನ್ನಡ ಅಧ್ಯಯನ ಕೇಂದ್ರದ ಹಸ್ತಪ್ರತಿ ವಿಭಾಗದ ಸಂಪಾದಕರಾದ ಶ್ರೀ ಎಸ್. ಶಿವಣ್ಣ ನವರು. ಮುಂದಿನ ಮುದ್ರಣಗಳಲ್ಲಿ ಇವುಗಳನ್ನು ತಿದ್ದಿ ಸರಿಪಡಿಸಬಹುದು.

ಕನ್ನಡ ಗ್ರಂಥಸೂಚಿ (1974–76)

ವರ್ಗೀಕರಣ:

ಉ. 590 'ರಗಳೆ'' ವಿಭಾಗದಲ್ಲಿ ಬರಬೇಕು.
ಉ. 698 'ಹಾಡು' ವಿಭಾಗದಲ್ಲಿ ಬರಬೇಕು.
ಉ. 2961 'ವಚನ ವಾಙ್ಮಯ' ವಿಭಾಗದಲ್ಲಿ ಬರಬೇಕು.

ಲೇಖಕರ ಹೆಸರು:
ಉ. 2961: ಇದರ ಕರ್ತೃ ಶಾಂತ ಬಸವೇಶ
ಲೇಖಕರ ಹೆಸರಿನ ಬೇರೆ ಬೇರೆ ರೀತಿಯ ಉಲ್ಲೇಖ:
ಉ. 684 ಮತ್ತು 3315.

ಕಾವ್ಯನಾಮವೇ ಕರ್ತೃವಾಗಿದೆ:
ಉ. 907, 2024, 3298.
ಲೇಖಕರ ಜನನ ವರ್ಷ:
ಉ. 55 ಮತ್ತು 1869 : 1921;
ಉ. 1523: 1908 ; ಉ. 1539 : 1932 ;
ಉ. 1571: 1897 ; ಉ. 2067 : 1929 ;
ಉ. 2571: 1932 ; ಉ. 2583 : 1904 ;
ಉ. 2590: 1939 ; ಉ. 2874 : 1909 ;
ಉ. 2940 ಮತ್ತು 3001 : 1906;
ಉ. 3308 : 1933; ಉ. 3340 : 1902

ಲೇಖಕರ ಮರಣ ವರ್ಷ:
ಉ. 2941: 1975

ಲೇಖಕರ ಜನನ-ಮರಣ ವರ್ಷಗಳು:
ಉ. 51 : 1852–1926
ಉ. 633 : ಸು. 1680–1752
ಉ. 634 : 1721–1762
ಉ. 637 : 1728–1809
ಉ. 2948: 1893–1951
ಉ. 2960: 1794–1839

ಕಾಲದ ಉಲ್ಲೇಖವಿಲ್ಲ:
ಉ. 2848: ಸು. 1439
ಉ. 3315 : ಸು. 1650

ಉ. 3317 : 1616
ಉ. 3322 : ಸು. 1180

ಕಾಲ ನಿರ್ದೇಶ ತಪ್ಪಾಗಿದೆ :
ಉ. 925 : 978 ಆಗಬೇಕು.
ಉ. 1922 : 1905 ಆಗಬೇಕು.
ಉ. 2843 : 1260 ಆಗಬೇಕು.
ಉ. 3316 : 1430 ಆಗಬೇಕು.

ಕೃತಿ ಹೆಸರಿನ ತಪ್ಪು ಉಲ್ಲೇಖ :
ಉ. 925 ; ಉ. 1892
ಕೃತಿಗಳ ಪುನರಾವೃತ್ತಿ :
ಉ. 684 ಮತ್ತು 3315
ಉ. 696 ಮತ್ತು 3318
ಉ. 2849 ಮತ್ತು 2851
ಉ. 2961 ಮತ್ತು 3320

1974ರ ಸಂಪುಟಕ್ಕೆ ಸೇರಬೇಕಾದ ಕೆಲವು ಕೃತಿಗಳು :
ವಿ.ಸೀ–(ಸಂ.) ವಿ. ಎಂ. ಇನಾಂದಾರ್
ಗಾಂಧೀಜಿಗೆ ಪ್ರಶ್ನೆ—ಎಂ. ಎಸ್. ತಿಮ್ಮಪ್ಪ
ಜಿಗಳೆ—ಸಿದ್ಧಲಿಂಗದೇಸಾಯಿ
ಎರಡು ನಾಟಕಗಳು—ಡಿ. ಟಿ. ರಂಗಸ್ವಾಮಿ
ಶ್ರೀ ಕೃಷ್ಣ ಜನ್ಮ—ಆರ್. ಕೆ. ಹಾನುಗಲ್ಲ
ಸೋತ ಸತ್ಯಸಂಧ—ರಘುಸುತ
ಜೀವಂತ ಧೋರಣೆಗಳು—ಮಾಧವ ಕುಲಕರ್ಣಿ
ಕುಮಾರನ್ ಆಶಾನ್—(ಅನು.) ಎ. ಎಸ್. ಕೆದಿಲಾಯ
ಜಯದೇವಿ ತಾಯಿ—ಬಿ. ಎಸ್. ಸ್ವಾಮಿ
ಜಯಚಾಮರಾಜ ಒಡೆಯರು—ಬಿ. ಎಸ್. ಸ್ವಾಮಿ
ಪರಂಜ್ಯೋತಿಯ ಅನುಭವ ಮುಕುರಂ—(ಸಂ.) ಎಂ. ಎಸ್. ಬಸವರಾಜಯ್ಯ
ದಾಸೋಹಂ—(ಸಂ.) ಆರ್. ಎಸ್. ರುದ್ರಸ್ವಾಮಿ
ಶುಕಸಪ್ತತಿ—(ಸಂ.) ಕೆ. ವೆಂಕಟರಾಯಾಚಾರ್ಯ
ಸುರಪತಿ—ಬಿ. ಕೆ. ತಿಮ್ಮಪ್ಪ
ಡಾ. ಟಿ. ಮಾಧವ ಪೈ—(ಸಂ.) ಕೊ. ಅನಂತ ಪದ್ಮನಾಭ ಉಡುಪ
ಕಿಟ್ಟಿ ಕಥೆ—ಚಂದ್ರಶೇಖರ ಕಂಬಾರ

ಕ್ರಿಷ್ಟೋಫರ್ ಕೊಲಂಬಸ್—ಎನ್. ಪ್ರಹ್ಲಾದರಾವ್

1975ರ ಸಂಪುಟಕ್ಕೆ

ಮೊರೆ—ಮಲ್ಲಪ್ಪ
ಕವಿಗಳು ಕಂಡ ಕೊಡಗು—(ಸಂ.) ಡಿ. ಬಿ. ರಾಮಚಂದ್ರಾಚಾರ್
ಕನ್ನಡದಲ್ಲಿ ರಾಷ್ಟ್ರೀಯ ವಾಙ್ಮಯ—(ಸಂ.) ಶಂಕರಪಾಟೀಲ
ಭಾರತ ದರ್ಶನ (ಭಾಗ–1)—ಎ. ವಿ. ಶಾಸ್ತ್ರಿ
ರುಂಡಭೈರವನಕಾಳಗ—(ಸಂ) ಎನ್. ಕೆ. ಹೆಗಡೆ
ಮಹಮೂದ ಗವಾನ—ಎಲ್. ಆರ್. ಕುಲಕರ್ಣಿ
ವೀರಗಲ್ಲುಗಳು ಮತ್ತು ಮಾಸ್ತಿ ಕಲ್ಲುಗಳು—ಎಂ. ಚಿದಾನಂದಮೂರ್ತಿ
ಸಿ. ಕೆ. ವೆಂಕಟರಾಮಯ್ಯ—ಚಿರಂಜೀವಿ
ಧಾರವಾಡ—ದಯಾನಂದ ತೊರ್ಕೆ
ನಾಟ್ಯಯೋಗಿ ಬಳ್ಳಾರಿ ರಾಘವ—ಜೋ. ದೊಡ್ಡನಗೌಡ
ರಾಮಚಂದ್ರ ದತ್ತಾತ್ರೇಯ ರಾನಡೆ—ಬಾಲಚಂದ್ರ ರ. ಮೋಡಕ
ರಾಮಕೃಷ್ಣಾನಂದರು—ಬಿ. ನಾರಾಯಣಸ್ವಾಮಿ
ಶ್ಯಾಮಶಾಸ್ತ್ರೀ—ಜಿ. ಚನ್ನಮ್ಮ
ಕರ್ಣ—ಎನ್. ಎಸ್. ಲಕ್ಷ್ಮೀನಾರಾಯಣ ಭಟ್ಟ
ನರಗುಂದದ ಬಾಬಾಸಾಹೇಬ—ವೆ. ಮು. ಜೋಶಿ
ರೇವಣಸಿದ್ಧೇಶ್ವರ—ಎಂ. ಜಿ. ನಂಜುಂಡಾರಾಧ್ಯ
ಜ್ಞಾನದೇವ—ಹೊ. ಸೀತಾರಾಮಾಚಾರ್ಯ
ಕಮಲನಯನ ಬಜಾಜ್—ಕ. ರಾ. ಮೋಹನ
ವಿದ್ಯಾವತೀದೇವಿ—ಎಂ. ಎಸ್. ನರಸಿಂಹಮೂರ್ತಿ
ಮಹಮದ್ ಪೀರ್—ಮ್ಯೆ. ಸು. ಶೇಷಗಿರಿರಾವ್
ಕೃಷ್ಣದೇವರಾಯ—ಜಯತೀರ್ಥ ರಾಜಪುರೋಹಿತ
ಆನಂದ ಕೆ. ಕುಮಾರಸ್ವಾಮಿ—ಬಿ. ಶ್ರೀನಿವಾಸರಾವ್
ಮುತ್ತುಸ್ವಾಮಿ ದೀಕ್ಷಿತರು—ರಾಜಶ್ರೀ
ಮಹೇಂದ್ರಲಾಲ್ ಸರ್ಕಾರ—ಬೆ. ಗೋ. ರಮೇಶ್
ವಲ್ಲಭಬಾಯಿ ಪಟೇಲ್—ಶಿವರಾಮು
ನಿವೇದಿತಾ—ಪ್ರಭುಶಂಕರ
ಅಕ್ಕಮಹಾದೇವಿ—ಹಾ. ಮಾ. ನಾಯಕ
ಕಾನೂನು ಪದಕೋಶ—ಆರ್. ರಂಗಯ್ಯ (ಅಧ್ಯಕ್ಷರು)

1976ರ ಸಂಪುಟಕ್ಕೆ

ಇಂದು ಒಂದು ಬಿಂದು ಎರಡು—(ಅನು) ಎಂ. ಎನ್. ರುಕ್ಮಿಣಿದೇವಿ
ಕಂಪೋಜಿಟರ್—ಬಸವರಾಜ ಕಟ್ಟೀಮನಿ
೩ ನಾಟಕಗಳು—ಗೀತಾ ಕುಲಕರ್ಣಿ

ಬೆನಕನ ಕೆರೆ—ನಿಸರ್ಗಪ್ರಿಯ
ಹೆಣ್ಣು ಒಂದು ; ಹಲವು ಗಂಡು (ಭಾಗ 1, 2)—ಜಿಂದೆ ನಂಜುಂಡಸ್ವಾಮಿ
ಪ್ರಾಣ ತೆಗೆದ ಪ್ರಣಯ—ಜಿಂದೆ ನಂಜುಂಡಸ್ವಾಮಿ
ಸಾಹಿತ್ಯ ವಿಮರ್ಶೆಯ ಮಧ್ಯಯುಗ—ವಿ. ಎಂ. ಇನಾಮದಾರ
ಮುದ್ದಣ ಪ್ರಶಸ್ತಿ ಗ್ರಂಥ—(ಪ್ರಸಂ.) ಟಿ. ಕೇಶವಭಟ್ಟ
ಮಲಯಾಳ ಸಾಹಿತ್ಯ ಚರಿತ್ರೆ—(ಅನು.) ಕಯ್ಯಾರ ಕಿಞ್ಞಣ್ಣರೈ
ಹೊಸ ನೀರು—ಕೆ. ವೆಂಕಟರಾಮಪ್ಪ
ಜಗನ್ನಾಥದಾಸರ ಹಾಡುಗಳು—(ಸಂ.) ಕಾವ್ಯಪ್ರೇಮಿ
ಕವಿರಾಜ ಕಂಠೀರವ ರಚಿತ ಆದಿತ್ಯ ಪುರಾಣ—(ಸಂ.) ಕೆ. ವೆಂಕಟ ರಾಯಾಚಾರ್ಯ
ಕನ್ನಡ ಸಾಹಿತ್ಯ ಸಂಸ್ಕೃತಿ ದರ್ಶನ—ಆರ್. ಎಸ್. ಸುಂಕದ
ಕನ್ನಡ ಹಸ್ತಪ್ರತಿಗಳ ವರ್ಣನಾತ್ಮಕ ಸೂಚಿ (ಒಂಬತ್ತನೆಯ ಸಂಪುಟ)

ಈ ಮುಂದಿನ ಕ್ರಮಾಂಕಗಳಲ್ಲಿ ಲೇಖಕರ ಹೆಸರಿಂತಿದೆ.

| | |
|---|---|
| 2 | ಚಾವುಂಡರಾಯ |
| 7–8, 232 | ಷಡಕ್ಷರದೇವ |
| 27 | ಚೆನ್ನಬಸವ |
| 75 | (ಸಂಗ್ರಾಹಕ) ಸಂಪಾದನೆ ಸಿದ್ಧವೀರಣ್ಣೊಡೆಯ |
| 80, 216 | ವಿರತ ತೋಂಟದಾರ್ಯ |
| 125 | ಸ್ವತಂತ್ರ ಸಿದ್ಧಲಿಂಗೇಶ್ವರ |
| 132–136 | ನಂದಿ |
| 137–40 | ಗರಣಿ ಬಸವಲಿಂಗ |
| 153–54 | ಅಂಬುಲಿಗೆ ಚೆನ್ನಮಲ್ಲೇಶ |
| 297 | ನಿಜಗುಣ ಶಿವಯೋಗಿ |
| 334 | ಪವಾಡ |
| 355 | ಇಮ್ಮಡಿ ಗುರುಸಿದ್ಧ |
| 368, 372 | (ಟೀಕೆ) ತೋಂಟದಾಚಾರ್ಯ |
| 11 (ಪು. 343) | ಎಳಂದೂರು ಹರೀಶ್ವರ |

ಈ ಕೆಳಕಂಡ ಕ್ರಮಾಂಕಗಳಲ್ಲಿ ಸೂಚಿಸಿರುವ ಕರ್ತೃವಿನ ಹೆಸರು ತಪ್ಪಾಗಿದ್ದು ಸರಿಯಾದುದನ್ನು ಸೂಚಿಸಿದೆ.

| | |
|---|---|
| 5–6 | ಸಂಗಪ್ರಭು—ಅಜ್ಞಾತ |
| 7–8 | ಸಂಗಪ್ರಭು—ಷಡಕ್ಷರದೇವ |
| 97 | ಓದುವ ಗಿರಿಯ—ವಿರಕ್ತದೇವ |
| 128 | ಸೋಸಲೆ ರೇವಣಾಚಾರ್ಯ-ಉಜ್ಜೈನೀಶ |

| | |
|---|---|
| 195, 225–31 | ಪಾಲ್ಕುರಿಕೆ ಸೋಮನಾಥ-ಪುಲಿಗೆರೆ ಸೋಮನಾಥ |
| 205 | ಮುಮ್ಮಡಿ ಕೃಷ್ಣ—ದೇ. ನಂಜುಂಡ |
| 223 | ಸಿದ್ಧಬೋಳೇಶ—ಕಸ್ತೂರಿಸಿದ್ಧ |
| 291 | ಗುರುಲಿಂಗ—ಗುರುದೇವ |
| 4 (ಪು. 337) | ಶಿವಯೋಗೀಂದ್ರ—ಅವಧೂತ ಶಿವಯೋಗಿ |
| 28 (ಪು. 355) | ಮಹಾದೇವ—ಶಿವಗಣಪ್ರಸಾದಿ ಮಹಾದೇವಯ್ಯ |

ಈ ಕೆಳಕಂಡ ಕ್ರಮಾಂಕದ ಕೃತಿಗಳ ಕಾಲಗಳಿಂತಿವೆ—

| | |
|---|---|
| 2 | 978 |
| 27 | 1160 |
| 80, 124 | 1616 |
| 137–140 | ಸು. 1600 |
| 153–54 | ಸು. 1650 |
| 178 | ಸು. 1160 |
| 203 | ಸು. 1550 |
| 216 | 1616 |
| 223 | ಸು. 1750 |
| 232 | 1677 |
| 291 | ಸು. 1350 |
| 297 | ಸು. 1600 |
| 334 | ಸು. 1580 |
| 355–62 | 1720 |
| 4 (ಪು. 337) | ಸು. 1700 |
| 11 (ಪು. 343) | 1606 |
| 28 (ಪು. 355) | ಸು. 1400 |

ಈ ಕೆಳಕಂಡ ಕೃತಿಗಳ ಕಾಲೋಲ್ಲೇಖ ತಪ್ಪಾಗಿದೆ—

| | |
|---|---|
| 7–8 : 18 ಶ | 17 ಶ. (ಸರಿ) |
| 65–9 : 1580 | 1508 |
| 71–4, 76–79 } ಸು. 1700 | ಸು. 1500 |
| 75 : ಸು. 1700 | ಸು. 1675 |
| 97 : ಸು. 1525 | 1803 |
| 128 : ಸು. 1623 | ಸು. 1450 |
| 174–75 : ಸು. 1500 | 1559 |

195, 225–31 : ಸು. 1195 ಸು. 1300

204, 233, 7 (ಪು. 340), 35 (ಪು. 362) : 1850–1794–1868

205 : 1850 1840

220–21 : 1800 ಸು. 1750

ಛಂದೋವಿವರ ತಪ್ಪಾಗಿದೆ—

5 (ಪು. 338) : ಶ್ಲೋಕ-ಟೀಕು-ವಾರ್ಧಕ ಷಟ್ಪದಿ

ಕೃತಿಗಳ ಆದಿ ಅಂತ್ಯಗಳು ಬೇರೆ ಬೇರೆ ಕೃತಿಗಳಿಗೆ ಸೇರಿವೆ—

ಉ. 16, 52, 137, 212–13

## 1981ರ ಪ್ರಕಟಣೆಗಳು

### ಕಾವ್ಯ

ಅಂಕಣ ಬಳಗ (ಸಂ.)
ಅಂಕಣ ಕಾವ್ಯ (೧೮೦) : ಅಂಕಣ, ಬೆಂಗಳೂರು; ಪು. ೭೨ + ೧೬

ಅರವಿಂದ ಮಾಲಗತ್ತಿ
ಮೂಕನಿಗೆ ಬಾಯಿ ಬಂದಾಗ : ಶೈಲ ಪ್ರಕಾಶನ, ಮುದ್ದೆಬಿಹಾಳ, ವಿಜಾಪುರ ಜಿಲ್ಲೆ ; ಪು, ೯೪.

ಆಚಾರ್ (ಕೆ. ವಿ.) ಸಂ.
ರಂಗ ಗೀತೆಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು. ೫೫ + ೧೧೮೮.

ಉಷಾ. ಸ.
ತೊಗಲು ಗೊಂಬೆಯ ಆತ್ಮಕತೆ : ಪುಸ್ತಕ ಚಿಲುಮೆ, ಮೈಸೂರು; ಪು. ೪೬.

ಕಯ್ಯಾರ ಕಿಞ್ಞಣ್ಣ ರೈ
ಕೊರಗ : ಕವಿತಾ ಕುಟೀರ, ಪೆರಡಾಲ; ಪು. ೫೮.

ಕಾಳೇಗೌಡ ನಾಗವಾರ
ಕರಾವಳಿಯಲ್ಲಿ ಗಂಗಾಲಗ್ನ: ಸುಂದರ ಪುಸ್ತಕ ಪ್ರಕಾಶನ, ಧಾರವಾಡ; ಪು. ೯೬.

ಗಂಗಾಧರ ಭಟ್ಟ (ಎಂ)
ಮುಪ್ಪಿಲ್ಲ ನೆನಪುಗಳಿಗೆ : ಜ್ಯೋತಿಷ್ಮತಿ ಪ್ರಕಾಶನ, ಉಡುಪಿ (ದ. ಕ.) ; ಪು. ೪೦.

ಗುಂಡ್ಮಿ ಚಂದ್ರಶೇಖರ ಐತಾಳ
ಸೀಯಾಳ : ಮಂಗಳ ಗಂಗೋತ್ರಿ, ಮಂಗಳೂರು ; ಪು. ೨೦.

ಗೋಗೇರಿ (ಎಂ. ಡಿ.)
ನಾವು ಸರ್ವಸ್ವ-ತಂತ್ರರು : ಸಾಹಿತ್ಯಸೌಧ ಪ್ರಕಾಶನ, ಹುಬ್ಬಳ್ಳಿ ; ಪು. ೪೨.

ಚಂದ್ರಶೇಖರ ತೇಲಿ
ನೋವು ನಲಿವು : ಮಿತ್ರಭಾರತಿ ಪ್ರಕಾಶನ, ವಿಜಾಪುರ ; ಪು. ೬೫.

ಚೆನ್ನಣ್ಣ ವಾಲೀಕಾರ
ಪ್ಯಾಂಥರ್ ಪದ್ಯಗಳು : ಸಂಕ್ರಮಣ ಪ್ರಕಾಶನ, ಧಾರವಾಡ ; ಪು. ೬೭.

ಜಯಚಂದ್ರ ಎಂ.ಎ.
ವಚನ ಚಿಂತನ : ಧವಳಶ್ರೀ ಪ್ರಕಾಶನ, ಬೆಂಗಳೂರು ; ಪು. ೩೨.

ಜಿನದೇವ ನಾಯಕ
ಕೌರವರೂ ಪಾಂಡವರೂ ಕ್ಷೇಮದಿಂದಿರುವರೆ : ರಾಘವೇಂದ್ರ ಪ್ರಕಾಶನ, ಅಂಕೋಲಾ (ಉ.ಕ.) ಪು. ೮೦.

ದೊಡ್ಡರಂಗೇಗೌಡ
ಮೌನ ಸ್ಪಂದನ : ಅಭಿಜಾತ ಪ್ರಕಾಶನ, ಬೆಂಗಳೂರು ; ಪು. ೪+೮೪

ನರಸಿಂಹಾಚಾರ್ (ಪು. ತಿ.)
ಹಳೆಯ ಬೇರು ಹೊಸ ಚಿಗುರು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು. ೪೩.

ನಾಯಕ (ಎನ್. ಆರ್.)
ಕಾದು ಅರಳು : ಎನ್. ಆರ್. ನಾಯಕ, ಹೊನ್ನಾವರ ; ಪು. ೫೪.

ನಾಯಕ (ಹಾ. ಮಾ.) ಸಂ.
ಕಾವ್ಯೋತ್ಸವ : ದಸರಾ ಮಹೋತ್ಸವ ಸಮಿತಿ, ಮೈಸೂರು ; ಪು. ೧೬+೯೬

ಪ್ರಭುರಾಜ ಅರಣಕಲ್
ಮೌನ ನುಂಗುವ ಶಬ್ದಗಳು : ವಿಚಾರ ಭಾರತಿ ಅಧ್ಯಯನ ವೇದಿಕೆ, ಕಲಬುರ್ಗಿ ; ಪು. ೪೭+೧೬.

ಪ್ರಭುಸ್ವಾಮಿ ಮಠ
ಸಂವಾದ : ಅಕ್ಷರ ಪ್ರಕಾಶನ, ಸಾಗರ ; ಪು. ೩೨.

ಬಾಲಚಂದ್ರ ಬಡಿಗೇರ
ಗಾಂಧಿ–ಗಾಂಧೀಜಿ : ಭಾರತಿ ಪ್ರಕಾಶನ, ಹುಬ್ಬಳ್ಳಿ; ಪು. ೫೬.

ಭಟ್ಟ (ಟಿ. ಜಿ.)
ಈಚೆ ದಡದಲಿ ನಿಂತು : ಆದಿತ್ಯ ಪ್ರಕಾಶನ, ಕುಮಟ; ಪು. ೧೦+೬೪.

ಭಾಗ್ಯ
ಸುಳ್ಳಿನಾಚೆಯ ಸತ್ಯ : ನೆಲಮನೆ ಪ್ರಕಾಶನ, ಮೈಸೂರು: ಪು. ೬+೩೭.

ಮನುಜ
ಕೇಳು ಜಗವಾದಿಗ ಹೊಲೆಯ: ಸಿದ್ಧಾರ್ಥ ಗ್ರಂಥಮಾಲೆ, ಮೈಸೂರು; ಪು. ೫೨.

ರಾಜಶೇಖರ್ (ಡಿ. ವಿ.)
ಶಬ್ದದೊಳಗಣ ನಿಶ್ಶಬ್ದ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು ; ಪು. ೪೪+೬.

ರಾಮದಾಸ್
ಹದಿಹರೆಯದ ಹುಡುಗರು : ಜ್ಯೋತಿಷ್ಮತಿ ಪ್ರಕಾಶನ, ಅಜ್ಜರ ಕಾಡು, ಉಡುಪಿ ; ಪು. ೪೦

ಲಕ್ಷ್ಮಣರಾವ್ (ಬಿ. ಆರ್.)
ಲಿಲ್ಲಿಪುಟ್ಟಿಯ ಹಂಬಲ : ನೆಲಮನೆ ಪ್ರಕಾಶನ, ಮೈಸೂರು; ಪು. ೮೨.

ಲಕ್ಷ್ಮೀನಾರಾಯಣ ಭಟ್ಟ (ಎನ್. ಎಸ್.)
ಚಿತ್ರಕೂಟ : ಅಭಿಜಾತ ಗ್ರಂಥಮಾಲೆ, ಬೆಂಗಳೂರು ; ಪು. ೫೪.

ವಸಂತ ಕುಪ್ಪಗಿ
ಗಾಂಧಾರಿಯ ಕರುಣೆ : ಶಿರಪುರ ಪ್ರಕಾಶನ, ಕಲಬುರಗಿ; ಪು. ೧೩+೭೬.

ವಿಡಂಬಾರಿ
ಒಗ್ಗರಣೆ : ಶ್ರೀ ರಾಘವೇಂದ್ರ ಪ್ರಕಾಶನ, ಅಂಕೋಲಾ; ಪು. ೧೨೦.

ವಿಜಯಕುಮಾರ್ ಜಿ.

ಅನಾಮಿಕರು : ಮಾನವತಾ ಪ್ರಕಾಶನ, ದೇವನಹಳ್ಳಿ; ಪು. ೫೪,

ವೀರಣ್ಣ, ಸಿ.(ಸಂ)

ಕನ್ನಡ ಪ್ರತಿಭಟನೆ ಕಾವ್ಯ : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; ಪು. ೭೨ + ೪೮೦

ವೆಂಕಟೇಶಮೂರ್ತಿ (ಎಚ್. ಎಸ್.)

ಒಣಮರದ ಗಿಳಿಗಳು : ಕನ್ನಡಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು; ಪು. ೮೦

ಶಿವರುದ್ರಪ್ಪ (ಜಿ. ಎಸ್.)

ಕಾಡಿನ ಕತ್ತಲಲ್ಲಿ : ಶಾರದಾ ಪ್ರಕಾಶನ, ಬೆಂಗಳೂರು; ಪು. ೨೪ + ೪೮.

ಶಿವಶರಣ ಜಾವಳಿ

ಹಣೇಬಾರದ ಹಾಡು : ವಿಚಾರ ಭಾರತಿ ಅಧ್ಯಯನ, ಕಲಬುರ್ಗಿ; ಪು. ೪೦ + ೧೬

ಶ್ರೀ ಕೃಷ್ಣ ಚೆನ್ನಂಗೋಡ್

ಕಳಕೊಂಡವರು : ಅಭಿರುಚಿ, ಬಂಟ್ವಾಳ (ದ. ಕ.): ಪು. ೮ + ೪೦.

ಸಂಜೀವಶೆಟ್ಟಿ

ತರಂಗ : ರಾಧಾ ಪ್ರಕಾಶನ, ಮುಂಬಯಿ ; ಪು. ೪೫.

ಸದ್ಯೋಜಾತ ಮೂರ್ತಿ

ಮಿಲನ ಮಹೋತ್ಸವ : ಗ್ರಂಥ ಗಂಗೋತ್ರಿ ಪ್ರಕಾಶನ, ಕೃಷ್ಣರಾಜಪೇಟೆ ; ಪು. ೪೭.

ಸನದಿ

ಮನೆಮನೆಗೆ ಬೇಲಿ : ಉದಯ ಪ್ರಕಾಶನ, ಬೆಳಗಾವಿ ; ಪು. ೬೪ + ೮.

ಸಿದ್ದಲಿಂಗಯ್ಯ (ಜಿ. ಎಸ್.)

ಐವತ್ತರ ನೆರಳು : ವಾಗ್ದೇವಿ ಎಂಟರ್‌ಪ್ರೈಸಸ್, ಮೈಸೂರು; ೮ + ೧೫೭,

ಸೀತಾರಾಮಯ್ಯ ವಿ.

ಹಗಲು–ಇರುಳು : ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು ; ಪು. ೧೩೪

## ನಾಟಕ

ಆ್ಯಂಟನ್ ಚೆಖಾವ್

ಅನು : ಶ್ರೀನಿವಾಸ. ವಿ. ಸುತ್ರಾವೆ

ಚೆರಿತೋಟ : ಸುಂದರ ಪುಸ್ತಕ ಪ್ರಕಾಶನ, ಧಾರವಾಡ ; ಪು. ೯೮.

ಕವಿತಾಕೃಷ್ಣ

ರಾಧಾ ನಿವಾಸ : ಕವಿತಾ ಪ್ರಕಾಶನ, ಕ್ಯಾತಸಂದ್ರ ; ಪು. ೪೨.

ಗೋಪಾಲಕೃಷ್ಣ ರಾ.

ಪೌಲಸ್ತ್ಯ ಪರಿನಿರ್ವಾಣ : ಹಂಸಧ್ವನಿ ಪ್ರಕಾಶನ, ಬೆಂಗಳೂರು ; ಪು. ೩೯.

ಗೋಪಾಲಕೃಷ್ಣ ಪಿ. ನಾಯಕ
    ಹರಿಶ್ಚಂದ್ರಮತಿ : ವಿಜಯಭಾರತಿ ಪ್ರಕಾಶನ, ಗೋಕರ್ಣ ; ಪು. ೪ + ೨೪.

ಚನ್ನಯ್ಯ (ಎಚ್. ಎಂ.)
    ಹುಯ್ಯಲವೊ ಡಂಗುರವ : ಪುಸ್ತಕ ಚಿಲುಮೆ, ಮೈಸೂರು ; ಪು. ೫೫.

ನಿಸರ್ಗಪ್ರಿಯ
    ಸ್ವರ್ಗಸ್ಥ : ರಂಗ ಸಂಪದ, ಬೆಂಗಳೂರು; ಪು. ೧೨೪ + ೮.

ಪ್ರಸನ್ನ
    ದಂಗೆಯ ಮುಂಚಿನ ದಿನಗಳು : ಅಕ್ಷರ ಪ್ರಕಾಶನ, ಸಾಗರ ; ಪು. ೮೪.

ಬಾಲುರಾವ್ (ಶಾ.)
    ಬೆಕ್ಕುಬಾವಿ : ಅಕ್ಷರ ಪ್ರಕಾಶನ, ಸಾಗರ ; ಪು. ೪೭.

ಭರತೇಶ
    ನಾನಲ್ಲದ ನಾನು : ವಾಗ್ದೇವಿ ಎಂಟರ್‌ಪ್ರೈಸಸ್, ಮೈಸೂರು ; ಪು. ೧೦೬.

ಮೂರ್ತಿ (ಎ. ಎಸ್.)
    ಓ ನನ್ನ ಜನರೆ : ಚಿತ್ರಾ ಪ್ರಕಾಶನ, ಬೆಂಗಳೂರು ; ಪು. ೨೪.

ವಿಲಿಯಂ ಷೇಕ್ಸ್‌ಪಿಯರ್
    ಅನು : ಎ. ಎನ್. ಮೂರ್ತಿರಾವ್
        ಚಂಡಮಾರುತ : ಅಪರ್ಣಾ ಪ್ರಕಾಶನ, ಮೈಸೂರು ; ಪು- ೭೦ + ೯೬.

ವಿಲಿಯಂ ಷೇಕ್ಸ್‌ಪಿಯರ್
    ಅನು : ಕ. ವೆಂ. ರಾಜಗೋಪಾಲ
        ಕೊರಿಯೋಲೇನಸ್ : ಜಗತ್ ಸಾಹಿತ್ಯ ಮಾಲೆ, ಬೆಂಗಳೂರು; ಪು. ೨ + ೧೫೪

ವೆಂಕಟಾಚಲಶಾಸ್ತ್ರೀ (ಟಿ. ವಿ.)
    ಹೊಸಗನ್ನಡ ಮಿತ್ರ ವಿಂದಾಗೋವಿಂದ : ಸುರುಚಿ ಪ್ರಕಾಶನ, ಮೈಸೂರು ; ಪು. ೧೨೦.

ವೆಂಕಟೇಶಮೂರ್ತಿ (ಹೆಚ್. ಎಸ್.)
    ಹೆಜ್ಜೆಗಳು : ರಂಗ ಸಂಪದ, ಬೆಂಗಳೂರು ; ಪು. ೫೨.

ವೇದವ್ಯಾಸ ಜೋಶಿ
    ಆಹ್ವಾನ : ವಸುಧಾ ಪ್ರಕಾಶನ, ಸಂಡೂರು ; ಪು. ೮ + ೭೭.

ವೈಕುಂಠರಾಜು (ಬಿ. ವಿ.)
    ನಾಟಕರೂಪ : ಶ್ರೀನಿವಾಸಪ್ರಭು
    ಉದ್ಭವ : ಸನತ್ ಪ್ರಕಾಶನ, ಬೆಂಗಳೂರು ; ಪು. ೬೬

ವೈಕುಂಠರಾಜು (ಬಿ. ವಿ.)
    ಸಂದರ್ಭ : ಸನತ್ ಪ್ರಕಾಶನ, ಬೆಂಗಳೂರು ; ಪು. ೮೬

ಶಿವಲಿಂಗಯ್ಯ (ಹ. ಮ.)
    ಮಸಣದಲ್ಲೊಂದು ನಾಟಕ : ಸೃಷ್ಟಿ ಗ್ರಂಥಮಾಲೆ, ಧಾರವಾಡ ; ಪು. ೧೧೨ + ೧೦

ಶ್ರೀರಂಗ
ಭಾರತ ಭಾಗ್ಯ-ವಿಧಾತಾ : ಸುಂದರ ಪುಸ್ತಕ ಪ್ರಕಾಶನ, ಧಾರವಾಡ ; ಪು. ೬೪

ಸತ್ಯನಾರಾಯಣ (ಕೆ.)
ಕ್ರಮ : ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜ್, ಬೆಂಗಳೂರು ; ಪು. ೭೫

ಸೀತಾರಾಮ್ (ಟಿ. ಎನ್.)
ಆಸ್ಫೋಟ : ಕನ್ನಡ ಸಂಘ, ಕ್ರೈಸ್ಟ್ ಕಾಲೇಜ್, ಬೆಂಗಳೂರು ; ಪು. ೧೪+೯೦

ಸೀತಾರಾಮ ಸೋಮಯಾಜೀ
ನಹುಷ ವಿಜಯ ನಾಟಕ : ಲಕ್ಷ್ಮೀನರಸಿಂಹ ಪ್ರಕಾಶನಾಲಯ, ಬೆಂಗಳೂರು ; ಪು. ೭೦

ಸೀತಾರಾಮಯ್ಯ (ಎಂ. ವಿ.) [ರಾಘವ]
ಕರುಣೆಯ ಕುಡಿ : ರಾಘವ ಪ್ರಕಾಶನ, ಬೆಂಗಳೂರು ; ಪು. ೩೨

ಹರಿಕೃಷ್ಣ 'ಪ್ರೇಮಿ'
ಅನು : ಪ್ರಧಾನ್ ಗುರುದತ್ತ
ಬಲಿದಾನ : ಉಷಾ ಸಾಹಿತ್ಯಮಾಲೆ, ಮೈಸೂರು ; ಪು. ೧೧೯

ಹರಿಕೃಷ್ಣ ಭರಣ್ಯ
ಪ್ರವೇಶ : ಸಾಧನ ಪ್ರಕಾಶನ, ಪಾಣಜೆ (ದ.ಕ.); ಪು. ೫೨

## ಸಣ್ಣ ಕತೆ

ಅನಂತಮೂರ್ತಿ (ಯು. ಆರ್.)
1. ಎರಡು ದಶಕದ ಕಥೆಗಳು : ಪು. ೪೬೫
2. ಆಕಾಶ ಮತ್ತು ಬೆಕ್ಕು : ಪು. ೧೫೪. — ಅಕ್ಷರ ಪ್ರಕಾಶನ, ಸಾಗರ

ಕೌಂಡಿನ್ಯ
ಬಾಳು : ಕೌಂಡಿನ್ಯ ಪ್ರಕಾಶನ, ಮೈಸೂರು ; ಪು. ೨೪೮

ಡಿಸೋಜ (ನಾ)
ಪ್ರಜ್ಞಾ ಎಂಬ ನದಿ : ಅಕ್ಷರ ಪ್ರಕಾಶನ, ಸಾಗರ ; ಪು. ೬೮

ದಿವಾಕರ್ (ಎಸ್.)
ಇತಿಹಾಸ : ಲಿಪಿ ಪ್ರಕಾಶನ, ಬೆಂಗಳೂರು ; ಪು. ೧೦೪+೧೨

ದೇಸಾಯಿ (ಬಿ. ಟಿ.)
ಒಂದಿಷ್ಟು ಕತೆಗಳು ; ಮನೋಹರ ಗ್ರಂಥಮಾಲಾ, ಧಾರವಾಡ ; ಪು. ೧೨೮

ಪ್ರಭು (ಎಂ. ಎಸ್. ಕೆ.)
ಬೆತ್ತಲೆ ಅರಸನ ರಾಜ ರಹಸ್ಯ : ಸಾಹಿತ್ಯ ಭಂಡಾರ, ಹುಬ್ಬಳ್ಳಿ ; ಪು. ೭೧

ಫ್ರಾನ್ಜ್ ಕಾಫ್ಕಾ
ಅನು : ಜಿ ಎನ್. ರಂಗನಾಥರಾವ್
ಕಾಫ್ಕಾ ಕಥೆಗಳು : ಸ್ನೇಹ ಪ್ರಕಾಶಕರು, ಬೆಂಗಳೂರು ; ಪು. ೧೨೪

ಬರಗೂರು ರಾಮಚಂದ್ರಪ್ಪ
ಕಪ್ಪುನೆಲದ ಕೆಂಪುಕಾಲು : ಪುಸ್ತಕ ಚಿಲುಮೆ, ಮೈಸೂರು ; ಪು. ೧೪೦+೪

ಬಾಲರಾಜು (ಎಚ್.)
ಸೂರ್ಯ, ಬೆಳಕು ಮತ್ತು ಕತ್ತಲು : ದರ್ಪಣ ಪ್ರಕಾಶನ, ದೇವಗಾಂವ (ಬೆಳಗಾಂ ಜಿಲ್ಲೆ) ; ಪು. ೭೬

ಮಲ್ಲಿಕಾ
ಫಾಲ್ಗುಣೀ ಪರ್ವ : ಲಕ್ಷ್ಮೀ ಪ್ರಕಾಶನ, ಬೆಂಗಳೂರು ; ಪು. ೧೨೦

ರಾಘವ (ಟಿ. ಜಿ.)
ಸಂಬಂಧಗಳು : ಸ್ನೇಹ ಪ್ರಕಾಶನ, ಬೆಂಗಳೂರು ; ಪು. ೧೦೪ + ೮

ವಸಂತ ಕುಷ್ಟಗಿ
ಸ್ವಾಮಿರಾವ ಕುಲಕರ್ಣಿ } ಸಂ.
ಕಥಾಸಮೂಹ : ಆತ್ಮೀಯ ಪ್ರಕಾಶನ, ಕಲಬುರ್ಗಿ ; ಪು. ೧೨೦

ವಿಜಯ ಸಾಸನೂರ್
ಶಾಂತಿಗ್ರಾಮದ ರಾಜಕೀಯ : ಅಕ್ಷರ ಪ್ರಕಾಶನ, ಸಾಗರ ; ಪು. ೧೦೪

ವೇಣುಗೋಪಾಲನ್
ಅನು : ವಂಶಿ
ಚಿತ್ತಭ್ರಮಣ : ದಾಕ್ಷಾಯಿಣೀ ಪ್ರಕಾಶನ, ಬೆಂಗಳೂರು ; ಪು. ೬೭

ಶಾಂತರಸ
ಬಡೇಸಾಬು ಪುರಾಣ : ಸಂಕ್ರಮಣ ಪ್ರಕಾಶನ, ಧಾರವಾಡ ; ಪು. ೧೬೭

ಶಾಂತಾದೇವಿ ಕಣವಿ
ಜಾತ್ರೆ ಮುಗಿದಿತ್ತು ; ಅಪರ್ಣ ಪ್ರಕಾಶನ, ಮೈಸೂರು ; ಪು. ೮ + ೧೪೯

ಸುಮತೀಂದ್ರ ನಾಡಿಗ (ಸಂ.)
ತಬ್ಬಲಿಗಳು : ಶಿಲ್ಪ ಪ್ರಕಾಶನ, ಬೆಂಗಳೂರು ; ಪು. ೪ + ೧೭೮

ಹನ್ನೆರಡು ಮಠ (ಜಿ. ಎಚ್.)
ಸೀರೆಗೆ ಹುಟ್ಟಿದ ದೇವರ ಕೂಸು : ಹನ್ನೆರಡು ಮಠ, ಇಲಕಲ್ಲ ; ಪು. ೫೬

ನಿರಂಜನ (ಪ್ರ. ಸಂ.)
ಅನು : ಕೆ. ಎಸ್. ನಿಸಾರ್ ಅಹಮದ್
ಹೆಜ್ಜೆ ಗುರುತು : ಪು. ೨೬೦

ನಿರಂಜನ (ಪ್ರ. ಸಂ.)
ಅನು : ಶಾ. ಬಾಲೂರಾವ್
ಅರಬಿ : ಪು. ೨೧೨

ನಿರಂಜನ (ಪ್ರ. ಸಂ.)
ಅನು : ಎಚ್. ಕೆ. ರಾಮಚಂದ್ರ ಮೂರ್ತಿ
ನೆತ್ತರುದೆವ್ವ : ಪು. ೧೨೦

ನಿರಂಜನ : (ಪ್ರ. ಸಂ.)
ಅನು : ಚಿ. ಶ್ರೀನಿವಾಸರಾಜು
ಬಾವಿಕಟ್ಟೆಯ ಬಳಿ : ಪು. ೧೯೪

ನಿರಂಜನ (ಪ್ರ. ಸಂ.)
ಅನು : ವೀಣಾಶಾಂತೇಶ್ವರ
ಅದೃಷ್ಟ : ಪು. ೧೭೬

ನಿರಂಜನ : (ಪ್ರ. ಸಂ.)
ಅನು : ಕ. ನಂ. ನಾಗರಾಜು.
ಸಜ್ಜನನ ಸಾವು : ಪು. ೧೭೦

ನಿರಂಜನ (ಪ್ರ. ಸಂ.)
ಅನು : ಎಸ್. ಅನಂತನಾರಾಯಣ
ಡೇಗೆಹಕ್ಕಿ : ಪು. ೧೯೦

ನಿರಂಜನ : (ಪ್ರ. ಸಂ.)
ಅನು : ಈಶ್ವರಯ್ಯ
ಅವಸಾನ : ಪು. ೧೪೬

(ಮೇಲಿನ ಎಂಟು ಪುಸ್ತಕಗಳು ವಿಶ್ವಕಥಾಕೋಶ ಮಾಲಿಕೆಯ ಎರಡನೆ ಕಂತಿನ ಎಂಟು ಸಂಪುಟಗಳು), ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು

## ಕಾದಂಬರಿ

ಅಡಕೆ (ವಿ. ಆರ್.)
ಸ್ನೇಹ ಸೌರಭ : ಶಿವರಂಜನಿ ಪಬ್ಲಿಕೇಷನ್, ಮೈಸೂರು; ಪು. ೨೨೫

ಅನುಪಮಾ ನಿರಂಜನ
ಕೊಳಚೆ ಕೊಂಪೆಯುದಾಸಿಗಳು : ಡಿ. ವಿ. ಕೆ. ಮೂರ್ತಿ, ಮೈಸೂರು; ಪು. ೧೯೦

ಆರ್ಯಾಂಬ ಪಟ್ಟಾಭಿ
ಅಸಂಗತ : ಪ್ರಕಾಶ ಸಾಹಿತ್ಯ, ಬೆಂಗಳೂರು; ಪು. ೧೪೬

ಈಚನೂರು ಜಯಲಕ್ಷ್ಮಿ
ಅಂತರಾಳದೊಳಗೊಂದು ಕಿರುದನಿ : ಲೇಖಿಕೆ, ಬೆಂಗಳೂರು; ಪು. ೧೦೦

ಈಚನೂರು ಶಾಂತ
ವಿಭ್ರಾಂತ : ದೊಡ್ಡಮನೆ ಪ್ರಕಾಶನ, ಈಚನೂರು: ಪು. ೧೧೨

ಕಾಕೋಳು ರಾಮಯ್ಯ
ಚಕ್ರವ್ಯೂಹದಲ್ಲಿ ಚಾಣಕ್ಯ : ಎಸ್. ಆರ್. ಪ್ರಕಾಶನ, ಬೆಂಗಳೂರು; ಪು. ೯೬

ಕಿಕ್ಕೇರಿ ನಾರಾಯಣ
ಬಾಲಂಗೋಚಿ : ನೆಲಮನೆ ಪ್ರಕಾಶನ, ಮೈಸೂರು: ಪು. ೩೯

ಖಾಂಡೇಕರ್. ವಿ. ಎಸ್
ಅನು : ಸುಶೀಲ ಕೊಪ್ಪರ
ಕಮರಿದ ಚಿಗುರು : ಶಾರದಾ ಪ್ರಕಾಶನ, ಬೆಂಗಳೂರು; ಪು. ೨೪೮

ಗಟ್ಟಿ. (ಕೆ.ಟಿ.)

1. ಮನೆ : ಗೀತಾ ಬುಕ್ ಹೌಸ್, ಮೈಸೂರು; ಪು. ೧೪೪
2. ಅವಿಭಕ್ತರು : ಶ್ರೀಬಹದ್ದೂರ್ ಪ್ರಕಾಶನ, ಬೆಂಗಳೂರು; ಪು. ೧೮೩
3. ಕೂಪ : ಬಾಪ್ಕೊ ಪ್ರಕಾಶನ, ಬೆಂಗಳೂರು; ಪು. ೨೨೮

ಗೀತಾನಂದ.

1. ಅಪಹರಣ : ಶ್ರೀ ಪ್ರಶಾಂತ ಪ್ರಕಾಶನ, ಮೈಸೂರು; ಪು. ೨ + ೧೧೪
2. ವಿಜ್ಞಾನಿಯ ಕೊಲೆ : ಶ್ರೀ ಪ್ರಕಾಶನ, ಮೈಸೂರು; ೨ + ೮೬

ಚದುರಂಗ

ವೈಶಾಖ : ಸುರುಚಿ ಪ್ರಕಾಶನ, ಮೈಸೂರು; ಪು. ೪೪೩

ಚಾರ್ಲ್ಸ್ ಡಿಕನ್ಸ್

ಅನು : ಸುಮತೀಂದ್ರನಾಡಿಗ

ವೇಣುಗೋಪಾಲ ಸೊರಬ

ಹಾರ್ಡ್ ಟೈಮ್ಸ್ :

ಜಗತ್ ಸಾಹಿತ್ಯ ಮಾಲೆ, ಬೆಂಗಳೂರು ; ಪು. ೪೩೬

ಚೈತನ್ಯ

1. ಲಯವಿಲ್ಲದ ಪ್ರೀತಿ : ಪು. ೨ + ೧೧೨
2. ಕ್ರಾಂತಿ : ಪು. ೨ + ೧೪೪
3. ಆಕಾಶದಿಂದ ಇಳಿದವರು : ಪು.೪ + ೧೦೬
4. ಉನ್ನತ ಸರಸ್ವತಿ : ಪು. ೪ + ೧೦೪

ಶ್ರೀ ಪ್ರಶಾಂತ ಪ್ರಕಾಶನ, ಮೈಸೂರು;

ಛಾಯಾದೇವಿ ನಂಜಪ್ಪ

ತೌರುಮನೆ : ಪ್ರದೀಪ ಪ್ರಕಾಶನ, ಬೆಂಗಳೂರು; ಪು. ೨೩೧

ತಾರಾಶಂಕರ್ ಬ್ಯಾನರ್ಜಿ

ಅನು : ಎಚ್. ಎ. ರಾಮಕೃಷ್ಣ

ನ್ಯಾಯಾಧೀಶ : ಐ ಬಿ ಎಚ್ ಪ್ರಕಾಶನ, ಬೆಂಗಳೂರು, ಪು. ೪ + ೧೫೨

ದೇವನೂರ ಮಹಾದೇವ

ಒಡಲಾಳ : ನೆಲಮನೆ ಪ್ರಕಾಶನ, ಮೈಸೂರು; ಪು. ೪ + ೫೨

ಧಾರಿಣಿ

ಶಕ್ತಿಶ್ರೀ : ವಿವೇಕೋದಯ ಗ್ರಂಥಮಾಲೆ, ಗುಡಿಬಂಡೆ; ಪು. ೧೫೧

ನರೇಂದ್ರ ಕೋಹಲಿ

ಅನು : ತಿಪ್ಪೇಸ್ವಾಮಿ

ಎಂ. ವಿ. ನಾಗರಾಜನ್

ದೀಕ್ಷೆ : ಆನಂದ ಪ್ರಕಾಶನ, ಮೈಸೂರು; ಪು. ೩೪೪

ನಾರಾಯಣ (ಪಿ.ವಿ.)

1. ಶೋಧನೆ : ಭಾಗ್ಯಲಕ್ಷ್ಮಿ ಪ್ರಕಾಶನ, ಬೆಂಗಳೂರು; ಪು. ೪ + ೧೩೨
2. ವಿಕಾಸ : ಅಭಿಜಾತ ಗ್ರಂಥಮಾಲೆ, ಬೆಂಗಳೂರು; ಪು. ೧೨೭

ಪದ್ಮಾ ಗುರುರಾಜ್

ಅವಳ ಕನಸು : ಪ್ರಿಯಾ ಪ್ರಕಾಶನ, ಬೆಂಗಳೂರು; ಪು. ೧೪೪

ಪದ್ಮಜೆ. ಕೆ. ಆರ್.

1. ಸಾವಿನ ಅಲೆ : ೧೧೨

2. ಪದ್ಮರಾಗ : ಪು. ೨೦೪ ಪುಲಿಕೇಶಿ ಪ್ರಕಾಶನ ಬೆಂಗಳೂರು.

ಪುಷ್ಪಾ, ಎನ್. ರಾವ್.

1. ಜಲ ಪಂಜರ : ಪು. ೨೦೦

2. ಗಗನ ಸುಖ : ಪು. ೧೮೨. ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು.

ಪ್ರಸನ್ನ.

ನೌಟಂಕಿ : ಅಕ್ಷರ ಪ್ರಕಾಶನ, ಸಾಗರ ; ಪು. ೧೨೪.

ಬೆಳಗಲಿ (ದು. ನಿಂ.)

ಜೋಗಿ ಮರಡಿ : ಐಬಿಎಚ್ ಪ್ರಕಾಶನ, ಬೆಂಗಳೂರು ; ಪು. ೨೫೬

ಮನು

ಹಿಮಜ್ವಾಲೆ : ಪುಸ್ತಕ ಚಿಲುಮೆ, ಮೈಸೂರು ; ಪು. ೧೪೪ + ೨

ಮಾ. ಭೀ. ಶೇ.

ಓ ಸುಂದರಿ, ನೀನೆಷ್ಟು ಅಪಾಯಕಾರಿ! : ಮಾ. ಭಿ. ಶೇ. ಪ್ರಕಾಶನ ಬೆಂಗಳೂರು; ಪು. ೧೦೮

ಮಾಯಾರಾಜ್.

ರಣಹದ್ದು : ವಿನಾಯಕ ಪ್ರಕಾಶನ. ಬೆಂಗಳೂರು ; ಪು. ೧೪೪ + ೮

ಮೂರ್ತಿ (ಕೃ. ನ. )

ಹಬ್ಬಿದಾಮಲೆ ಮಧ್ಯದೊಳಗೆ : ಜನಮಿತ್ರ ಪ್ರಕಾಶನ, ಹಾಸನ ; ಪು. ೮ + ೧೯೫.

ರಮಾನಂದ ಅಮೀನ್.

ಕಬ್ಬಿಣದ ಕಡಲೆ ; ಚಂದ್ರಸಾಗರ ಪ್ರಕಾಶನ, ಮುಂಬಯಿ ; ಪು. ೨೧೫

ರಾಧಾದೇವಿ. (ಹೆಚ್. ಜಿ.)

1. ಮನಸ್ಸಿನ ಕಣ್ಣು : ಯುವ ಜನ ಸಾಹಿತ್ಯಾಧ್ಯಯನ ವೇದಿಕೆ, ಇಲಕಲ್ಲ (ವಿಜಾಪೂರ ಜಿಲ್ಲೆ) ; ಪು. ೮೫

2. ಸೊಬಗಿನ ಸೆರಮನೆ : ರಾಜಲಕ್ಷ್ಮೀ ಪ್ರಕಾಶನ, ಬೆಂಗಳೂರು ; ಪು. ೧೭೨.

ರಾಮರಾವ್. (ಟಿ.ಕೆ.)

1. ಕಹಳೆ ಬಂಡೆ : ದರ್ಶನ ಪ್ರಕಾಶನ, ಬೆಂಗಳೂರು ; ಪು. ೧೮೫.

2. ಪಶ್ಚಿಮದ ಬೆಟ್ಟ : ದರ್ಶನ ಪ್ರಕಾಶನ, ಬೆಂಗಳೂರು ; ಪು. ೩೩೩.

ರುದ್ರಮೂರ್ತಿ ಶಾಸ್ತ್ರಿ. (ಸು)

ಅನಿವಾರ್ಯ : ಅರ್ಚನ ಪ್ರಕಾಶನ, ಬೆಂಗಳೂರು ; ಪು. ೮೧.

ಲಕ್ಷ್ಮಣರಾವ್. (ಬಿ. ಆರ್.)

ಹೀಗೊಂದು ಪ್ರೇಮ ಕಥೆ : ಪುಸ್ತಕ ಚಿಲುಮೆ, ಮೈಸೂರು ; ಪು. ೪ + ೨೧೯.

ವಾಸಿರೆಡ್ಡಿ ಸೀತಾದೇವಿ.

ಅನು : ಮಿಸ್. ಸಂಪತ್.

ಪ್ರತೀಕಾರ : ಪ್ರಾಜ್ಞಪ್ರಕಾಶನ, ಬೆಂಗಳೂರು ; ಪು. ೧೩೫.

ವಾಣಿ.

ಸುಲಗ್ನಾ ಸಾವಧಾನ : ಡಿ. ವಿ. ಕೆ. ಮೂರ್ತಿ, ಮೈಸೂರು ; ಪು. ೧೭೯.

ವಿಟ್ಠಲ ಶೆಣೈ (ಎಚ್.)

1. ಧರ್ಮಸ್ಥಳದಲ್ಲಿ ಗೊಮ್ಮಟನು ಮೂಡಿದನು ; ಪು. ೧೩೯

2. ಕೃತಕ ಉಪಗ್ರಹ ರಹಸ್ಯ : ಪು. ೧೯೨. ಕಾದಂಬರಿ ಪ್ರಕಾಶನ, ಬೆಂಗಳೂರು.

ವಿಜಯ ನಾಗರಾಜ್.

ಸ್ವಾಭಿಮಾನಿ : ವನಸುಮ ಪ್ರಕಾಶನ, ಬೆಂಗಳೂರು ;

ವೀರ ಭದ್ರಪ್ಪ (ಕುಂ).

ಕಪ್ಪು : ಯುವಕರ ಸಂಘ, ಹಗರಿಬೊಮ್ಮನಹಳ್ಳಿ ; ಪು. ೧೫೨.

ವೇಣು. (ಬಿ. ಎಲ್)

ಪರಾಜಿತ : ಸಂಯುಕ್ತ ಪ್ರಕಾಶನ, ಬೆಂಗಳೂರು ; ಪು. ೧೭೧

ಶಮಂತ

ಅನು : ವಂಶಿ

ಸುಹಾಸಿನಿ : ದಾಕ್ಷಾಯಿಣೀ ಪ್ರಕಾಶನ, ಬೆಂಗಳೂರು ; ಪು. ೧೧೭

ಶರತ್ ಚಂದ್ರ ಚಟರ್ಜಿ.

ಅನು : ಕುಂದಾನಿ ಸತ್ಯನ್.

ಅಮೂಲ್ಯ ಬಂಧನ : ಶ್ರೀಸುರಭಿ ಪ್ರಕಾಶನ, ಮೈಸೂರು ; ೧೨೨

ಶಿವರಾಮಕಾರಂತ. (ಕೆ)

ಕಣ್ಣಿದ್ದೂ ಕಾಣರು : ರಾಜಲಕ್ಷ್ಮಿ ಪ್ರಕಾಶನ, ಬೆಂಗಳೂರು. ಪು. ೩೯

ಶಿವಾಲ ಜಗನ್ನಾಥ ರಾವು.

ಅನು : ವಂಶಿ.

ಭಾನು : ದಾಕ್ಷಾಯಿಣೀ ಪ್ರಕಾಶನ, ಬೆಂಗಳೂರು ; ಪು. ೧೪೨.

ಸತ್ಯಕಾಮ.

1. ಆಹುತಿ : ಪು. ೨೩೧.

2. ಕೃಷ್ಣಾರ್ಪಣ : ಪು. ೯೯.

3. ಚಂಡ ಪ್ರಚಂಡ : ಪು. ೧೧೯.

4. ರಾಜಕ್ರೀಡೆ : ಪು. ೨೯೫.

5. ಮನೆಮಾರು : ಪು. ೧೫೪.

6. ರಾಜಬಲಿ : ಪು. ೧೨೪. ಐ ಬಿ ಎಚ್ ಪ್ರಕಾಶನ, ಬೆಂಗಳೂರು.

ಸದಾನಂದ ಪಾಟೀಲ

ಕಟ : ಸದಾಶಿವ ಪ್ರಕಾಶನ, ಹುಬ್ಬಳ್ಳಿ ; ಪು. ೨೦೩.

ಸದ್ಯೋಜಾತಮೂರ್ತಿ

ಪ್ರಭ ಶುಭ ಶೋಭ : ಗ್ರಂಥ ಗಂಗೋತ್ರಿ ಪ್ರಕಾಶನ, ಕೃಷ್ಣರಾಜಪೇಟೆ ; ಪು. ೮ + ೧೨೪.

ಸರ್ವಾಂಟಿಸ್

ಭಾವಾನುವಾದ : ಎ. ರಾಮರಾವ್

ಡಾನ್‌ಕ್ವಿಕ್ಸೋಟ್ : ಪ್ರಸಾರಾಂಗ, ಬೆಂ. ವಿ. ವಿ., ಬೆಂಗಳೂರು, ಪು. ೧೦೭ + ೮

ಸಾಯಿಸುತೆ :

1. ಮಂದಾರ ಕುಸುಮ : ವಾಸವಾಂಬ ಪ್ರಕಾಶನ, ಬೆಂಗಳೂರು ; ಪು. ೧೬೪.
2. ಸ್ವರ್ಣ ಮಂದಿರ : ವಾಸವಾಂಬ ಪ್ರಕಾಶನ, ಬೆಂಗಳೂರು ; ಪು. ೨೨೮.

ಸುದರ್ಶನ ದೇಸಾಯಿ

ತಿರುವು : ಪುಸ್ತಕ ಚಿಲುಮೆ, ಮೈಸೂರು ; ಪು. ೯೩ + ೪.

## ವಿಮರ್ಶೆ

ಅಜ್ವಾಣಿ (ಎಲ್. ಎಚ್.)

ಅನು : ಸುಮತೀಂದ್ರ ನಾಡಿಗ್
ಸಿಂಧೀ ಸಾಹಿತ್ಯ ಚರಿತ್ರೆ : ಸಾಹಿತ್ಯ ಅಕಾದೆಮಿ, ಬೆಂಗಳೂರು ; ಪು. ೨೫೦.

ಅಮೂರ (ಜಿ. ಎಸ್.)

ಸಮಕಾಲೀನ ಕಥೆ ಕಾದಂಬರಿ ಹೊಸ ಪ್ರಯೋಗಗಳು : ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು ; ಪು ೬ + ೧೦೮.

ಅಶೋಕ (ಟಿ. ಪಿ.)

ಹೊಸ ಹೆಜ್ಜೆ ಹೊಸ ಹಾದಿ : ಅಕ್ಷರ ಪ್ರಕಾಶನ, ಸಾಗರ ; ಪು. ೧೩೨.

ಇನಾಂದಾರ್ (ಎಂ. ವಿ.)

ಆಲೋಕ : ಉಷಾ ಸಾಹಿತ್ಯಮಾಲೆ, ಮೈಸೂರು ; ಪು. ೮ + ೧೫೦.

ಕೃಷ್ಣಕುಮಾರ್ (ಸಿ. ಪಿ.) [ಸಿ. ಪಿ. ಕೆ.]

1. ಪು. ತಿ. ನ. ಕಾವ್ಯಮೀಮಾಂಸೆ : ಅರ್ಕಾವತಿ ಪ್ರಕಾಶನ, ಮೈಸೂರು ; ಪು. ೪೮.
2. ಕಾವ್ಯ ಗೌರವ : ವಾಗ್ದೇವಿ ಎಂಟರ್‌ಪ್ರೈಸಸ್, ಮೈಸೂರು ; ಪು. ೪ + ೧೬೮.
3. ಕುವೆಂಪು ಕಾವ್ಯ ಮೀಮಾಂಸೆ : ಚಿತ್ರಭಾನು ಪ್ರಕಾಶನ, ಮೈಸೂರು ; ಪು. ೫೬.
4. ಉಪಚಯ : ಸಾಧನ ಸಾಹಿತ್ಯ ಮಂದಿರ, ಮೈಸೂರು ; ಪು. ೪ + ೧೩೬.

ಗಿರಡ್ಡಿ ಗೋವಿಂದರಾಜ

ಸಾಹಿತ್ಯ ಮತ್ತು ಪರಂಪರೆ : ಅಭಿಜಾತ ಗ್ರಂಥಮಾಲೆ, ಬೆಂಗಳೂರು ; ಪು. ೬ + ೧೪೯.

ಗೌರೀಶ ಕಾಯ್ಕಿಣಿ

ಕಟಾಕ್ಷ : ರಾಘವೇಂದ್ರ ಪ್ರಕಾಶನ, ಅಂಕೋಲಾ ; ಪು. ೧೭೭.

ತಾರಾನಾಥ್ (ಎನ್. ಎಸ್.)

ಪರಿಶೋಧನೆ : ಭಾರತೀ ಪ್ರಕಾಶನ, ಮೈಸೂರು ; ಪು. ೧೬೪.

ನರಹಳ್ಳಿ ಬಾಲಸುಬ್ರಹ್ಮಣ್ಯ

ಅನುಸಂಧಾನ : ಕನ್ನಡ ಸಂಘ, ಶೇಷಾದ್ರಿಪುರಂ ಕಾಲೇಜು, ಬೆಂಗಳೂರು ; ಪು. ೮೮.

ನಾಗರಾಜ್ (ಡಿ. ಆರ್.) ಸಿದ್ಧತೆ
ಪಾಶ್ಚಾತ್ಯ ಸಾಹಿತ್ಯ ಮಾರ್ಗದರ್ಶಿ (ಸಂ. 1. ಗ್ರೀಕ್ ಸಾಹಿತ್ಯ) ಕನ್ನಡ ಅಧ್ಯಯನ ಕೇಂದ್ರ ಮಾಲೆ, ಪ್ರಸಾರಾಂಗ, ಬೆಂ. ವಿ ವಿ , ಬೆಂಗಳೂರು ; ಪು. ೩೦೪ + ೧೨.

ನಾಯಕ (ಹಾ. ಮಾ.) ಪ್ರ. ಸಂ.
ಕನ್ನಡ ಅಧ್ಯಯನ ಸಂಸ್ಥೆಯ ಕನ್ನಡ ಸಾಹಿತ್ಯ ಚರಿತ್ರೆ, (ಸಂಪುಟ : 5–1) :
ಕನ್ನಡ ಅಧ್ಯಯನ ಸಂಸ್ಥೆ, ಮೈ. ವಿ. ವಿ. ನಿ., ಮೈಸೂರು ; ಪು. ೮೪೦.

ಪಾರ್ವತಿ (ಎಚ್. ಎಸ್.)
ಓದಿನಾ ಒಳಗು : ಮಾನಸೋಲ್ಲಾಸ ಪ್ರಕಾಶನ, ಬೆಂಗಳೂರು ; ಪು. ೯೬ + ೮.

ಭಟ್ಟ (ಜಿ. ಎಸ್.) ಸಂ.
ಯಶವಂತ ಚಿತ್ತಾಲ–ಕೆಲವು ಅಧ್ಯಯನಗಳು : ಮಿತ್ರ ಪ್ರಕಾಶನ, ಮೈಸೂರು ;
ಪು. ೧೨ + ೨೬೦.

ಮಿರಾಶಿ (ವಾ. ವಿ.)
ಅನು : ಜಿ. ಎಸ್. ಗಾಯಿ
ಕಾಳಿದಾಸ : ಕನ್ನಡ ಅಧ್ಯಯನ ಸಂಸ್ಥೆ, ಮೈ. ವಿ. ವಿ. ನಿ., ಮೈಸೂರು ;
ಪು. ೧೨ + ೩೧೨.

ಮೂರ್ತಿರಾವ್ (ಎ. ಎನ್.)
ಪೂರ್ವಸೂರಿಗಳೊಡನೆ : ನ್ಯೂಯಾರ್ಕ್ ಕನ್ನಡ ಕೂಟ, ನ್ಯೂಯಾರ್ಕ್ ; ಪು. ೧೩೨.

ಯಶವಂತ ಚಿತ್ತಾಲ
ಸಾಹಿತ್ಯ ಸೃಜನಶೀಲತೆ ಮತ್ತು ನಾನು : ಜ್ಯೋತಿಸ್ಮೃತಿ ಪ್ರಕಾಶನ, ಉಡುಪಿ ;
ಪು. ೧೪೦.

ರವಿ ಎನ್. ಮತ್ತು ಇತರರು
ಆಲ್ಬರ್ಟ್ ಕಾಮು : ಕನ್ನಡ ಸಂಘ, ಸೇಂಟ್ ಜೋಸೆಫ್ ಕಾಮರ್ಸ್ ಕಾಲೇಜು,
ಬೆಂಗಳೂರು ; ಪು. ೮೦.

ರಾಘವೇಂದ್ರರಾವ್ (ಎಚ್. ಎಸ್.)
ವಿಶ್ಲೇಷಣೆ ; ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಬೆಂಗಳೂರು ; ಪು. ೨೧೨

ವಿದ್ಯಾಶಂಕರ (ಎಸ್.)
ವಚನಪರುಷ : ಸ್ನೇಹಪ್ರಕಾಶನ, ಬೆಂಗಳೂರು ; ಪು. ೯೮ + ೨

ವಿದ್ಯಾರ್ಥಿಗಳು
ಅಳಿದಮೇಲೆ ಕುರಿತು : ಕನ್ನಡ ಸಂಘ, ಸೇಂಟ್ ಜೋಸೆಫ್ ಕಾಮರ್ಸ್ ಕಾಲೇಜು,
ಬೆಂಗಳೂರು ; ಪು. ೪೪

ವೆಂಕಟಲಕ್ಷ್ಮಿ (ಬಿ. ಎಸ್.) ಸಂಕಲನ
ಕನ್ನಡರಂಗಭೂಮಿ : ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ; ಪು. ೪ + ೧೧೪

ವೆಂಕಟರಾಯಾಚಾರ್ಯ (ಕೆ.)
ಸಾಹಿತ್ಯತರಂಗ : ವಿಜಯ ಸಾಹಿತ್ಯಮಾಲೆ, ಸುರತ್ಕಲ್ಲು (ದ.ಕ.) ; ಪು. ೧೭ + ೧೯೩

ವೆಂಕಟಾಚಲ ಶಾಸ್ತ್ರಿ (ಟಿ. ವಿ.)

1 ಪ್ರಾಚೀನ ಕನ್ನಡ ಸಾಹಿತ್ಯ ಕೆಲವು ನೋಟಗಳು : ಗೀತಾ ಬುಕ್ ಹೌಸ್, ಬೆಂಗಳೂರು ; ಪು. ೧೭೬

2. ಮೂರು ಸಮೀಕ್ಷೆಗಳು : ಉಷಾಸಾಹಿತ್ಯಮಾಲೆ, ಮೈಸೂರು ; ಪು. ೮ + ೧೫೬

ಶಂಕರನಾರಾಯಣರಾವ್ (ಎಚ್. ಎಂ.)

ಕಾವ್ಯಾರಾಧನೆ : ಶಾರದಾಮಂದಿರ, ಮೈಸೂರು ; ಪು. ೧೩ + ೨೧೬

ಶಂಕರಮೋಕಾಶಿಪುಣೇಕರ

ಸಾಹಿತ್ಯ ಮತ್ತು ಅಭಿರುಚಿ : ಮಿತ್ರ ಪ್ರಕಾಶನ, ಮೈಸೂರು ; ಪು. ೬ + ೧೫೪

ಸೀತಾರಾಮಯ್ಯ (ವಿ.) ಸಂ.

ನೇಮಿಚಂದ್ರ : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ; ಪು. ೭ + ೨೦೭

## ಜೀವನಚರಿತ್ರೆ

ಅಂಗಡಿ (ಎಸ್. ಎಮ್.)

ಅರಟಾಳ ರುದ್ರಗೌಡರ : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೧೦೨

ಇನಾಂದಾರ್ (ವಿ. ಎಂ.)

ಡಾ. ಅಂಬೇಡ್ಕರ್ (ವ್ಯಕ್ತಿ ಮತ್ತು ವಿಚಾರ) ; ಉಷಾ ಸಾಹಿತ್ಯಮಾಲೆ, ಮೈಸೂರು ; ಪು. ೧೨ + ೨೦೦

ಈಶ್ವರಚಂದ್ರ ಚಿಂತಾಮಣಿ

ಬಂಥನಾಳ ಶ್ರೀಸಂಗನ ಬಸವ ಶಿವಯೋಗಿಗಳು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೮೭

ಚಂದ್ರಯ್ಯ (ಬಿ. ಎನ್.)

ಯಜಮಾನ ವೀರಸಂಗಪ್ಪನವರು : ವೀರಶೈವ ಅಧ್ಯಯನಸಂಸ್ಥೆ, ಗದಗ ; ಪು. ೬೦

ಚಂದ್ರಶೇಖರ ವಸ್ತ್ರದ

ಬ್ಯಾರಿಸ್ಟರ್ ಎಂ. ಎಸ್. ಸರ್ದಾರರು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೯೫

ಚೆನ್ನಕ್ಕ ಎಲಿಗಾರ

ದಿವಾನ ಬಹಾದ್ದೂರ ಮೆಣಸಿನಕಾಯಿ ಶಾಂತವೀರಪ್ಪನವರು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೭೭

ಜವರೇಗೌಡ (ದೇ)

ವ್ಯಾಕರಣದ ಮಲ್ಲಪ್ಪನವರು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೮೪

ಜವರೇಗೌಡ (ದೇ)

ಬೂಕರ್ ಟಿ. ವಾಷಿಂಗ್‌ಟನ್ : ಐ.ಬಿ.ಎಚ್. ಪ್ರಕಾಶನ, ಬೆಂಗಳೂರು ; ಪು. ೬೩

ಜ.ಚ.ನಿ.

ಹಾನಗಲ್ಲ ಕುಮಾರ ಶಿವಯೋಗಿಗಳು : ವೀರಶೈವ ಅಧ್ಯಯನ ಸಂಸ್ಥೆ, ಗದಗ ; ಪು. ೭೬

